# 'ಸಿದ್ಧಗಂಗಾ'

(ತ್ರೈಮಾಸಿಕ)

ಸಂಪುಟ ೭ ಸಂಚಿಕೆ ೧

ವೈಭವಪೂರ್ಣ ಶ್ರೀ ತೋಂಟದ ಸಿದ್ಧಲಿಂಗೇಶ್ವರ ಯಾತ್ರಾ ಮಹೋತ್ಸವ ಸವಿನೆನಪಿನ

## ಜಾತ್ರಾ ವಿಶೇಷಾಂಕ

ಮಾರ್ಚ್

೧೯೭೧

## "ಸಿದ್ಧಗಂಗಾ"

**ಸಂಪಾದಕ ಮಂಡಳಿ :**

ಚನ್ನಪ್ಪ ಎರೇಸೀಮೆ
(ಪ್ರಧಾನ ಸಂಪಾದಕ)
ಹೀ. ಚಿ. ಶಾಂತವೀರಯ್ಯ,
ಎಂ. ಎ., ಬಿ. ಇಡಿ.
ಟಿ. ಆರ್. ಮಹದೇವಯ್ಯ, ಎಂ. ಎ.
ಆರ್. ರಾಚಪ್ಪ, ಎಂ. ಎ.
ಎಂ. ರೇಣುಕಾರಾಧ್ಯ

ಪ್ರಕಾಶಕರು :—
ಹಳೆಯ ವಿದ್ಯಾರ್ಥಿಯ ಸಂಘ,
ಶ್ರೀ ಸಿದ್ಧಗಂಗಾ ಕ್ಷೇತ್ರ,
ಪರವಾಗಿ H. B. ಗಂಗಾಧರಯ್ಯ,
ಬಿ. ಎಸ್‌ಸಿ. ಬಿ. ಇಡಿ.

ಮುದ್ರಕರು :—
ಶ್ರೀಮತಿ H. C. ಗೌರಮ್ಮ
ಶ್ರೀ ನಿರಂಜನ ಪ್ರಿಂಟರ್ಸ್,
"ಶ್ರೀ ಶಿವಕುಮಾರ ಕೃಪಾ".
411, 6ನೇ ಬ್ಲಾಕ್, ರಾಜಾಜಿನಗರ,
ಬೆಂಗಳೂರು-10.

ಪತ್ರಿಕೆ ಪ್ರಕಟವಾಗುವ ಸ್ಥಳ :—
ಶ್ರೀ ಸಿದ್ಧಗಂಗಾ ಕ್ಷೇತ್ರ

ಪತ್ರಿಕೆ ಹೊರಡುವ ಮಾಸಗಳು :—
ಮಾರ್ಚ್, ಜೂನ್, ಸೆಪ್ಟೆಂಬರ್, ಡಿಸೆಂಬರ್.


### ಚಂದಾ ವಿವರ

| | |
|---|---|
| **ಬಿಡಿ ವಿಶೇಷ ಸಂಚಿಕೆ** | 1-50 |
| **ಬಿಡಿ ಸಾಮಾನ್ಯ ಸಂಚಿಕೆ** | 1-25 |
| **ವಾರ್ಷಿಕ ಚಂದಾ** | 5-00 |

ಬಿಡಿ ಸಂಚಿಕೆಗಳ ಅಂಚೆ ವೆಚ್ಚ ಪ್ರತ್ಯೇಕ
ಚಂದಾದಾರರಿಗೆ ಅಂಚೆ ವೆಚ್ಚವಿಲ್ಲ.

### ಮಾನ್ಯ ಚಂದಾದಾರರಲ್ಲಿ ವಿನಂತಿ

ಈ ಸಾಲಿನ ಚಂದಾ ಹಣ ಕೊಡಬೇಕಾದವರು M. O. ಮೂಲಕ ಪ್ರಕಾಶಕರು, ಶ್ರೀ ಸಿದ್ಧಗಂಗಾ ತ್ರೈಮಾಸಿಕ, ಸಿದ್ಧಗಂಗಾ ಮಠ, ತುಮಕೂರು ಜಿಲ್ಲಾ, ಇವರಿಗೆ ಕಳುಹಿಸಿ ಪತ್ರಿಕೆಯ ಸರ್ವತೋಮುಖ ಪ್ರಗತಿಗೆ ನೆರವಾಗಬೇಕಾಗಿ ಪ್ರಾರ್ಥನೆ.

ರಾಜ್ಯ ಸರಕಾರದ ವಿದ್ಯಾ ಇಲಾಖೆಯ ಡೈರೆಕ್ಟರ್ ಅವರು CL417-4/65-66 ತಾರೀಖು 29-4-66 ನೆಯ ಆರ್ಡರ್ ಪ್ರಕಾರ ಪ್ರಾಥಮಿಕ ಶಾಲೆ, ಪ್ರೌಢಶಾಲೆ, ಶಿಕ್ಷಣ ಶಾಲೆಗಳು ಹಾಗೂ ಸಾರ್ವಜನಿಕ ಗ್ರಂಥ ಭಂಡಾರಗಳು ಕೊಂಡುಕೊಳ್ಳಬಹುದೆಂದು ಆಜ್ಞೆ ಹೊರಡಿಸಿದ್ದಾರೆ.

# ಈ ಸಂಚಿಕೆಯಲ್ಲಿ





↑

ದಿನಾಂಕ 27-12-1970 ರಂದು ಬೆಂಗಳೂರಿನಲ್ಲಿ ಜರುಗಿದ 47ನೆಯ ಕನ್ನಡ ಸಾಹಿತ್ಯ ಸಮ್ಮೇಳನದಂದು ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರು ಭಾಷಣ ಮಾಡುತ್ತಿರುವುದು.

ಕುಳಿತಿರುವವರು ಎಡದಿಂದ ಬಲಕ್ಕೆ ಮೇಲಿನ ಚಿತ್ರದಲ್ಲಿ ಶ್ರೀ ದ. ರಾ. ಬೇಂದ್ರೆ, ಜಿ. ನಾರಾಯಣ್, ಪ್ರೊ. ಜವರೇಗೌಡ ಅವರು.





# ಸಂಪಾದಕೀಯ

ಕನ್ನಡ ನಾಡಿನ ವೈಭವಪೂರ್ಣವಾದ ಸಿದ್ಧಗಂಗೆಯ ಶ್ರೀ ತೋಂಟದ ಸಿದ್ಧಲಿಂಗೇಶ್ವರ ಯಾತ್ರಾ ಮಹೋತ್ಸವದ ಶುಭ ಸನ್ನಿವೇಶದಲ್ಲಿ ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿ ಸಂಘವು ವೈವಿಧ್ಯ ಪೂರ್ಣ ಲೇಖನಗಳನ್ನೊಳಗೊಂಡ "ಸಿದ್ಧಗಂಗಾ ತ್ರೈಮಾಸಿಕ" ಪತ್ರಿಕೆಯನ್ನು ವಾಚಕ ಮಹನೀಯರ ಕೈಗೆ ಈಯುತ್ತಿರುವುದಕ್ಕೆ ಅತೀವ ಹರ್ಷವನ್ನು ವ್ಯಕ್ತಪಡಿಸುತ್ತದೆ. ಆರು ವರ್ಷಗಳನ್ನು ದಾಟಿ ಏಳನೆಯ ವರ್ಷದಲ್ಲಿ ಕಾಲಿಡುತ್ತಿರುವ ಸಿದ್ಧಗಂಗಾ ತ್ರೈಮಾಸಿಕವು ಶ್ರೀ ಶ್ರೀ ( )ಗಳವರ ಕೃಪಾಶೀರ್ವಾದದಿಂದಲೂ, ಶ್ರೀ ಸಿದ್ಧಲಿಂಗೇಶ್ವರರ ಕಾರುಣ್ಯದಿಂದಲೂ ಉತ್ತರೋತ್ತರ ಪ್ರಗತಿಪಥದಲ್ಲಿ ಮುನ್ನಡೆಯುವ ಭರವಸೆಗಳಿಂದ ಕೂಡಿದೆ.

ಇನ್ನು ೨-೩ ತಿಂಗಳುಗಳಲ್ಲಿಯೇ ಶ್ರೀ ಕ್ಷೇತ್ರದ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಮಹಾ ಪಾಠಶಾಲೆ, ವೇದ ಪಾಠಶಾಲೆ, ಉಚಿತ ಪ್ರಸಾದನಿಲಯಗಳ ಸ್ವರ್ಣಮಹೋತ್ಸವಗಳು ಶ್ರೀ ಕ್ಷೇತ್ರದ ವತಿಯಿಂದ ವಿಜೃಂಭಣೆಯಿಂದ ನೆರವೇರಲಿವೆ. ಅದೇ ಸಮಯದಲ್ಲಿ ಶ್ರೀ ಶ್ರೀ ( ) ಗಳವರ ಬೆಳ್ಳಿಯ ಹಬ್ಬವನ್ನು ವೈಭವಪೂರ್ಣವಾಗಿ ನೆರವೇರಿಸಲು ಸಮಸ್ತ ಭಕ್ತವೃಂದ, ಅಭಿಮಾನಿಗಳ ತಂಡ, ಹಳೆಯ ವಿದ್ಯಾರ್ಥಿಗಳ ಸಮೂಹ ಕಾರ ಪ್ರವೃತ್ತವಾಗಿದೆ. ಈ ಕಾರ್ಯವನ್ನು ಯಶಃಪೂರ್ಣವಾಗಿ ನೆರವೇರಿಸಲು ಬದ್ಧಕಂಕಣರಾಗಿ ಶ್ರಮಿಸುತ್ತಿರುವ ಶ್ರೀಮಾನ್ ಹೆಚ್. ತಿಪ್ಪೇರುದ್ರಯ್ಯನವರು I. A. S. (ನಿವೃತ್ತ ಡಿವಿಜನಲ್ ಕಮೀಷನರ್) ಅವರನ್ನು ಅಭಿನಂದಿಸುತ್ತೇವೆ. ಬೆಳ್ಳಿಮಹೋತ್ಸವದ ಸವಿನೆನಪಿಗಾಗಿ ಶ್ರೀಕ್ಷೇತ್ರದ ದಕ್ಷಿಣ ಭಾಗದಲ್ಲಿ ರಸ್ತೆಯ ಪಕ್ಕದಲ್ಲಿ ನಿರ್ಮಾಣವಾಗಲಿರುವ ಲಕ್ಷಾಂತರ ರೂಪಾಯಿ ವೆಚ್ಚದ "ವಾಚನಾಲಯ" ಕಟ್ಟಡದ ಕಾರ್ಯ ಭರದಿಂದ ನಡೆದಿದೆ. ಬೆಳ್ಳಿಹಬ್ಬದ ಸವಿನೆನಪಿನ "ಸಮರ್ಪಣಾಗ್ರಂಥ"ವು ಈಗಾಗಲೆ ಬಿಡುಗಡೆಯಾಗಿದೆ. ಈ ಎಲ್ಲ ಕಾರಗಳನ್ನು ಅವಿಶ್ರಾಂತ ಶ್ರಮದಿಂದ ನಿರ್ವಹಿಸುತ್ತಿರುವ ಶ್ರೀ ತಿಪ್ಪೇರುದ್ರಯ್ಯನವರ ಕರ್ತವ್ಯಕೌಸಲ, ಶ್ರೀಕ್ಷೇತ್ರದ ಶ್ರೀ ಶ್ರೀ ( ) ಗಳವರಲ್ಲಿನ ಅಭಿಮಾನ ಭಕ್ತಿಗಳು ಉಲ್ಲೇಖಾರ್ಹವಾದುವು. ಅವರನ್ನು ಸಿದ್ಧಗಂಗಾ ಪತ್ರಿಕೆ ಮನಸಾರೆ ಕೊಂಡಾಡುತ್ತದೆ.

ಈ ಸಮಯದಲ್ಲಿ ನಮ್ಮ ಹಳೆಯ ವಿದ್ಯಾರ್ಥಿವೃಂದದಲ್ಲಿ ನಾವು ವಿಜ್ಞಾಪಿಸಿಕೊಳ್ಳುವುದೇನೆಂದರೆ, ಈ ಹಿಂದೆ ತೀರ್ಮಾನವಾದಹಾಗೆ ತಮ್ಮ ತಮ್ಮ ಒಂದೊಂದು ತಿಂಗಳ ಮಾತಿಕೆಯನ್ನು ಎಲ್ಲ ಪ್ರತಿನಿಧಿಗಳೂ ಆದಷ್ಟು ತೀವ್ರ ಹಳೆಯ ವಿದ್ಯಾರ್ಥಿ ಸಂಘದ ಕಾರ್ಯಾಗಾರಕ್ಕೆ ಕಳುಹಿಸುವುದರ ಮೂಲಕ ನಮ್ಮನ್ನು ಅಪಾರ ವಾತ್ಸಲ್ಯದಿಂದ ಪೋಷಿಸಿ, ಬೆಳೆಸಿ ಪ್ರಸಾದಕ್ಕೆ ಮಾರ್ಗಮಾಡಿಕೊಟ್ಟಿರುವ ಶ್ರೀ ಶ್ರೀ ( ) ಪೂಜ್ಯಪಾದರ ಕೃಪೆಗೆ ಪಾತ್ರರಾಗಬೇಕಾಗಿ ವಿಜ್ಞಾಪಿಸಿಕೊಳ್ಳುತ್ತೇವೆ. ಇಂದು ಭಾರತಾದ್ಯಂತ ವಿವಿಧ ವೃತ್ತಿಯಲ್ಲಿರುವ ಸರ್ವ ಹಳೆಯ ವಿದ್ಯಾರ್ಥಿ ಸಂಘದ ಸದಸ್ಯರು, ವ್ಯವಸಾಯಗಾರರು, ಕೈಗಾರಿಕಾವೃತ್ತಿಯಲ್ಲಿರುವವರು ಇತ್ತ ತಮ್ಮ ತೀವ ಗಮನಹರಿಸುವವರೆಂದು ನಂಬಿದ್ದೇವೆ.

೧೯೭೧ನೆಯ ಫೆಬ್ರವರಿ ೮ ರಂದು ನಿಧನರಾದ ಖ್ಯಾತ ಭಾರತದ ವಿದ್ವಾಂಸರೂ, ಶಿಕ್ಷಣ ತಜ್ಞರೂ, ರಾಜಕಾರಣ ಪಟುಗಳೂ ಆದ ಡಾ॥ ಕೆ. ಎಂ. ಮುನಷಿ ಅವರ ಅಗಲಿಕೆ ಸಿದ್ಧಗಂಗಾ ತನ್ನ ಬಾಷ್ಪಾಂಜಲಿ ಸಲ್ಲಿಸುತ್ತದೆ. ೮೪ ವರ್ಷಗಳ ತಮ್ಮ ನಿಡುಬಾಳಿನಲ್ಲಿ ಮುನಷಿಯವರು ರಾಷ್ಟ್ರಕ್ಕೆ ಸಲ್ಲಿಸಿದ ಸೇವೆ ಅಪೂರ್ವ

ಮೈಸೂರು ವಿಶ್ವವಿದ್ಯಾಲಯದ ಉಪಕುಲಪತಿ ಶ್ರೀ ದೇ. ಜವರೇಗೌಡ ಅವರು ರಷ್ಯಾರಾಷ್ಟ್ರದ 'ಲೆನಿನ್ ಆರ್ಡರ್' ಪ್ರಶಸ್ತಿ ಗಳಿಸಿದುದಕ್ಕೂ ೪೭ನೇ ಕನ್ನಡ ಸಾಹಿತ್ಯ ಸಮ್ಮೇಲನದ ಅಧ್ಯಕ್ಷರಾದುದಕ್ಕೂ ಪತ್ರಿಕೆ ಹರ್ಷವನ್ನು ವ್ಯಕ್ತಪಡಿಸುತ್ತದೆ. ಇತ್ತೀಚೆಗೆ ಮೈಸೂರು ವಿಶ್ವವಿದ್ಯಾನಿಲಯದ ಸಂಸ್ಕೃತ ಪ್ರೊಫೆಸರ್‌ಆಗಿ ನಿಯಮಕಗೊಂಡ ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿಗಳೂ, ವಿದ್ವಾಂಸರೂ ಆದ ಡಾ॥ ಜಿ. ಮರುಳಸಿದ್ಧಯ್ಯನವರನ್ನು ಅಭಿನಂದಿಸುತ್ತೇವೆ.

ಪ್ರತಿವರ್ಷದಂತೆ ಈ ವರ್ಷವೂ ಶ್ರೀ ಸಿದ್ಧಲಿಂಗೇಶ್ವರ ಯಾತ್ರಾ ಮಹೋತ್ಸವದಲ್ಲಿ "ವ್ಯವಸಾಯ ಮತ್ತು ಕೈಗಾರಿಕಾ ವಸ್ತು ಪ್ರದರ್ಶನವನ್ನು ವೈಭವ ಪೂರ್ಣವಾಗಿ ತೆರೆಯಲಾಗಿದೆ. ಇದರ ಲಾಭವನ್ನು ಯಾತ್ರಾರ್ಥಿಗಳು ಪೂರ್ಣವಾಗಿ ಪಡೆದು ಪ್ರಗತಿ ಪಥದಲ್ಲಿ ಮುನ್ನಡೆಯಬೇಕೆಂದು ಆಶಿಸುತ್ತೇವೆ. ಗ್ರಾಮಾಂತರ ಪ್ರದೇಶದಲ್ಲಿ ತೆರೆಯಲ್ಪಡುವ ಈ ವಸ್ತುಪ್ರದರ್ಶನವನ್ನು ಸಾರ್ವಕಾಲಿಕ ವಸ್ತುಪ್ರದರ್ಶನವನ್ನಾಗಿಸಲು ಸಿದ್ಧಗಂಗಾ ಕ್ಷೇತ್ರವೊಂದು ಪ್ರಶಸ್ತ ಕ್ಷೇತ್ರ. ನಮ್ಮ ರಾಜ್ಯ ಸರಕಾರ ಮತ್ತು ಕೇಂದ್ರ ಸರಕಾರಗಳು ಇತ್ತ ತೀವ್ರ ಗಮನವಹಿಸಿ ಇದಕ್ಕೊಂದು ಸುಸಜ್ಜಿತ ಕಟ್ಟಡವನ್ನು ಒದಗಿಸಿ ಯಾತ್ರಾರ್ಥಿಗಳಿಗೆ ಸಾರ್ವಕಾಲಿಕ ವಸ್ತು ಪ್ರದರ್ಶನವನ್ನಾಗಿಸುವ ಅನುಕೂಲ ಕಲ್ಪಿಸುವರೆಂಬ ಭರವಸೆಯನ್ನು ಕ್ಷೇತ್ರದ ಹಳೆಯ ವಿದ್ಯಾರ್ಥಿ ಸಂಘವು ಹೊಂದಿದೆ.

ಇದುವರೆಗೆ ಸಿದ್ಧಗಂಗಾ ಪತ್ರಿಕೆಯ ಸಂಪಾದಕ ಮಂಡಲಿಯಲ್ಲಿದ್ದು ಸೇವೆ ಸಲ್ಲಿಸಿದ್ದ ಶ್ರೀ ಕೆ.ಪಿ. ಶಿವಲಿಂಗಯ್ಯ ಎಂ. ಎ, ಅವರು ಮೈಸೂರಿನ ಜೆ. ಎಸ್.ಎಸ್. ಕಾಲೇಜಿಗೆ ವರ್ಗವಾದ ಪ್ರಯುಕ್ತ ಅವರ ಸೇವೆಯಿಂದ ದೂರವಾದ ಪತ್ರಿಕೆಯು ವಿಷಾದಿಸಿ ಇಂದಿನವರೆಗಿನ ಅವರ ಅಮೋಘ ಸೇವೆಗಾಗಿ ಅಭಿನಂದಿಸುತ್ತದೆ.



ಲೋ

…ಾಯಕಮಗ್ನರಾಗಿ ತನುಮನಗಳನ್ನು ಬಳಲಿಸಿ …ನ ಕೂಲಿಯನ್ನು ಸಂಪಾದಿಸಿ ಪ್ರಸಾದ ಸ್ವೀಕ…ನ್ನುತ್ತಾರೆ. ಜಂಗಮ ಜೀವನ ಅಥವಾ ಶಿವ…ು ಜೀವನವೆಂದರೆ ಲೋಕವೃತ್ತದಿಂದ ದೂರ …ಸುಮ್ಮನೆ ಕೂಡುವುದಲ್ಲ. ಲೋಕವೃತ್ತದ…ಇದ್ದು ಕಾರ್ಯಮಗ್ನರಾಗಿ "ಪದ್ಮಪತ್ರ…ಸಿ" ಯಂತಿರಬೇಕೆನ್ನುತ್ತಾರೆ.

…ರರ ಕಾಯಕ ನಿಷ್ಠೆಗೆ ಎಲ್ಲರೂ ಕಂಡರಿತ …ಂದೆರಡು ಉದಾಹರಣೆಗಳು:—

…ೀ ಕ್ಷೇತ್ರದಲ್ಲಿ ಓದಲು ಬಂದ ವಿದ್ಯಾರ್ಥಿಗಳೆಲ್ಲ …ಓದು ಬೇಸರವಾದಾಗ ಸುಮ್ಮನೆ ಮಲಗುವು…ವಿರಾಮವೆಂದು ಶ್ರೀಗಳು ಅಲ್ಲಗಳೆಯುತ್ತಾರೆ. …ಬೇರೊಂದು ಕಾರ್ಯಮಾಡಿ ವಿರಾಮ ಪಡೆಯ…ು ಅವರಿಗೂ ಬೋಧಿಸುತ್ತಾರೆ. ಹೀಗಾಗಿ … ವ್ಯವಸಾಯ, ಕಟ್ಟಡನಿರ್ಮಾಣ, ಇನ್ನಿತರ…ಗಳಲ್ಲಿ ವಿದ್ಯಾರ್ಥಿಗಳು ನಿರತರಾದಾಗ ಶ್ರೀಗಳು ಅಲ್ಲಿಗೆ ಹೋಗಿ, ಅದರ ಹಾಗೆಯೇ ತಾವೂ ಕಲ್ಲು…ವುದು, ಹೊರಿಸುವುದು, ಹೊಲದಲ್ಲಿ, ಕಣದಲ್ಲಿ …ರ ಕೆಲಸಮಾಡುವುದು. ಈ ಕಾರ್ಯವನ್ನು …ತ್ತಿದ್ದಂತೆಯೇ ವಿದ್ಯಾರ್ಥಿಗಳ ನೂತನೋತ್ಸಾ…ಕ್ಕ ಗರಿಗೆದರಿ ನಿಲ್ಲುತ್ತದೆ. ಒಂದಕ್ಕೆ ಎರಡರಷ್ಟು …ಾಗುತ್ತದೆ. ಮಧ್ಯೇ ವಿದ್ಯಾರ್ಥಿಗಳನ್ನು ತಿಳಿ…ದಿಂದ ನಗಿಸುವುದೂ ಉಂಟು.

ಜೀವನ

ತಮ್ಮ

ಸಿದ್ಧೀಚಿತ್ತೀಚೆಗೆ ಕಾರ್ಯಬಾಹುಳ್ಯದಿಂದಲೂ, ಗಳವಯಸ್ಸಿನ ಆಧಿಕ್ಯದಿಂದಲೂ ಶ್ರೀಗಳವರ ದೈಹಿಕ ಗೀಶ್ವರಶ್ರಮಗಳು ಸ್ವಲ್ಪ ಕಡಿಮೆಯಾಗಿವೆ

ಕುಮಾ…ಮ್ಮೆ ದೇವರಾಯಪಟ್ಟಣದ ಗದ್ದೆಯಲ್ಲಿ ಬತ್ತ ದಿವ್ಯಾದ್ಭು ಬೆಳೆದು ಹೊಡೆಗೆ ಬಂದಿತ್ತು. ಆದರೇನು ವನ್ನು ಇ… ನೀರಿಲ್ಲದೆ ಅನಾನುಕೂಲ ಪರಿಸ್ಥಿತಿಗೆ ದಿಂದಲ್ಲ. …ಗದ್ದೆಯ ಮಧ್ಯದಲ್ಲಿ ಅನೇಕ ಬಾವಿಗಳನ್ನು ಯೋಚಿಸಿ, ನೀರೆತ್ತುವ ಸಂದರ್ಭದಲ್ಲಿ ಸ್ವತಃ ತಾವೇ ಉದ್ಯಾನ…ಪಿಲೆ ಎಳೆಯುವ ದೃಶ್ಯವನ್ನು ಕಣ್ಣಾರೆ ಶಾಲಿಗಳು… ವಿದ್ಯಾರ್ಥಿಗಳು ಕಪಿಲೆ ಎಳೆಯುತ್ತೇವೆ, ಡವರು.

ತಾವು ದಯಮಾಡಿ ಗಿಡದ ನೆಳಲಿಗೆ ಕುಳಿತುಕೊಳ್ಳಿ ಬುದ್ಧಿ ಎಂದರೆ, ಶ್ರೀಗಳ ಉತ್ತರ—"ಏಕೆ, ನಾವೂ ಕಪಿಲೆ ಎಳೆಯುವ ಅಭ್ಯಾಸ ಮಾಡಬೇಕು. ನಾನು ಕುಳಿತರೆ ಎಲ್ಲರೂ ಕೆಲಸದಲ್ಲಿ ಅಸಡ್ಡೆ ಮಾಡುವರು. ನಾವೂ ಕೆಲಸಮಾಡುತ್ತಿದ್ದರೆ ಉಳಿದವರೂ ಅಧಿಕೋತ್ಸಾಹದಿಂದ ಕೆಲಸ ಮಾಡುತ್ತಾರೆ," ಎಂದರು.

ಇನ್ನೊಂದು ಪ್ರಸಂಗ ಒಮ್ಮೆ ಮಠದಿಂದ 2 ಮೈಲು ದೂರದಲ್ಲಿ ಮೈದಾಳ ಕೆರೆಯ ಕೆಳಗಿನ ಗದ್ದೆಯಲ್ಲಿ ಹುಲ್ಲು ಹೇರಿಕೊಂಡು ಬರುವಲ್ಲಿ ಮಠದ ವ್ಯವಸಾಯ ಕೆಲಸದವರು ಅಸಡ್ಡೆ ತೋರಿದುದು ಶ್ರೀಗಳವರಿಗೆ ಗೊತ್ತಾಯಿತು. ಆಗ ರಾತ್ರಿ $7\frac{1}{2}$-8 ಘಂಟೆಯಾಗುತ್ತಾ ಬಂದಿತ್ತು. ಗಾಡಿಗಳನ್ನು ಹೂಡಿಸಿ ತಾವೇ ಹೇರಿಕೊಂಡು ಬರಲು ಹೊರಟರು. ಆದಿನ ನನಗೆ ಸ್ವಲ್ಪ ಜ್ವರ. ಶ್ರೀಗಳವರು ಗದ್ದೆಗೆ ಹೊರಟ ಸುದ್ದಿ ಕೇಳಿದೊಡನೆ ಎದ್ದು ಓಡಿ ಹೋದೆ. ಜ್ವರ ಮಾಯವಾದಂತಾಯಿತು ಶ್ರೀಗಳವರು ವೇಗ ವೇಗವಾಗಿ ಗದ್ದೆಯತ್ತ ನಡೆಯುತ್ತಿದ್ದರು. ಸ್ವಲ್ಪ ಬೆಳದಿಂಗಳೂ ಇತ್ತು ನೂರಾರು ವಿದ್ಯಾರ್ಥಿಗಳೂ ನಾಮುಂದು ತಾಮುಂದೆಂದು ಓಡಿ ಓಡಿ ಬರುತ್ತಿದ್ದರು. ನಾನು ಶ್ರೀಗಳವರಿಗೆ ಅರಿಕೆ ಮಾಡಿಕೊಂಡೆ, "ಕತ್ತಲಾಯಿತು ತಾವು ಮಠಕ್ಕೆ ದಯಮಾಡಿಸಿ ಬುದ್ಧಿ, ನಾವು ಹೇರಿಕೊಂಡು ಬರುತ್ತೇವೆ." ಎಂದೊಡನೆ ಇಲ್ಲ. ನಿಮಗೆ ಗೊತ್ತಿಲ್ಲ, ನಾನು ಹೋದರೆ, ಕೆಲಸ ಸರಿಹೋಗುತ್ತೆ. ನಿನ್ನೆಯಿಂದ ಹೇಳಿಕೊಂಡು ಬನ್ನಿರೆಂದರೆ ಯಾರೂ ಹೋಗಿಲ್ಲ. ಮಳೆ ಬಂದರೆ ಹುಲ್ಲುಕಾಳು ಗದ್ದೆಯ ಪಾಲಾಗುತ್ತದೆ, ಎಂದು ನಡೆಯುತ್ತಲೇ ಇದ್ದರು. ನಾನು ನಿರುಪಾಯನಾಗಿ ಬೆನ್ನತ್ತಿ ಹೊರಟೆ. ಆ ನಡಿಗೆಯ ವೇಗ, ಆ ಕರ್ತವ್ಯದಲ್ಲಿನ ದಿಟ್ಟತನ ಎಂದೂ ಮರೆಯುವಂತಿಲ್ಲ. ಹೊಲಕ್ಕೆ ಹೋದೊಡನೆ ಹುಲ್ಲುಹೊರೆಗಳನ್ನು ಕಟ್ಟಿ ಕಟ್ಟಿ ಹೊರಿಸುತ್ತಿದ್ದರು. ಸುಮಾರು ಒಂದೇ ಘಂಟೆಯಲ್ಲಿ ನಾಲ್ಕಾರು ಗಾಡಿ ಹುಲ್ಲು ತುಂಬಿಸಿ ಮಠದತ್ತ ಹೊರಟರು. 11 ಘಂಟೆಯಾಗಿತ್ತು ಮಠಕ್ಕೆ

ಮೈಸೂರು ವಿಶ್ವವಿದ್ಯಾಲಯದ ಉಪಕುಲಪತಿ ಶ್ರೀ ದೇ. ಜವರೇಗೌಡ ಅವರು ರಷ್ಯಾರಾಷ್ಟ್ರದ 'ಲೆನಿನ್ ಆರ್ಡರ್' ಪ್ರಶಸ್ತಿ ಗಳಿಸಿದುದಕ್ಕೂ ೪೭ನೇ ಕನ್ನಡ ಸಾಹಿತ್ಯ ಸಮ್ಮೇಲನದ ಅಧ್ಯಕ್ಷರಾದುದಕ್ಕೂ ಪತ್ರಿಕೆ ಹರ್ಷವನ್ನು ವ್ಯಕ್ತಪಡಿಸುತ್ತದೆ. ಇತ್ತೀಚೆಗೆ ಮೈಸೂರು ವಿಶ್ವವಿದ್ಯಾನಿಲಯದ ಸಂಸ್ಕೃತ ಪ್ರೊಫೆಸರ್ಆಗಿ ನಿಯುಮಕಗೊಂಡ ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿಗಳೂ, ವಿದ್ವಾಂಸರೂ ಆದ ಡಾ॥ ಜಿ. ಮರುಳಸಿದ್ಧಯ್ಯನವರನ್ನು ಅಭಿನಂದಿಸುತ್ತೇವೆ.

ಪ್ರತಿವರ್ಷದಂತೆ ಈ ವರ್ಷವೂ ಶ್ರೀ ಸಿದ್ಧಲಿಂಗೇಶ್ವರ ಯಾತ್ರಾ ಮಹೋತ್ಸವದಲ್ಲಿ "ವ್ಯವಸಾಯ ಮತ್ತು ಕೈಗಾರಿಕಾ ವಸ್ತು ಪ್ರದರ್ಶನವನ್ನು ವೈಭವ ಪೂರ್ಣವಾಗಿ ತೆರೆಯಲಾಗಿದೆ. ಇದರ ಲಾಭವನ್ನು ಯಾತ್ರಾರ್ಥಿಗಳು ಪೂರ್ಣವಾಗಿ ಪಡೆದು ಪ್ರಗತಿ ಪಥದಲ್ಲಿ ಮುನ್ನಡೆಯಬೇಕೆಂದು ಆಶಿಸುತ್ತೇವೆ. ಗ್ರಾಮಾಂತರ ಪ್ರದೇಶದಲ್ಲಿ ತೆರೆಯಲ್ಪಡುವ ಈ ವಸ್ತುಪ್ರದರ್ಶನವನ್ನು ಸಾರ್ವಕಾಲಿಕ ವಸ್ತುಪ್ರದರ್ಶನವನ್ನಾಗಿಸಲು ಸಿದ್ಧಗಂಗಾ ಕ್ಷೇತ್ರವೊಂದು ಪ್ರಶಸ್ತ ಕ್ಷೇತ್ರ. ನಮ್ಮ ರಾಜ್ಯ ಸರಕಾರ ಮತ್ತು ಕೇಂದ್ರ ಸರಕಾರಗಳು ಇತ್ತ ತೀವ್ರ ಗಮನಹರಿಸಿ ಇದಕ್ಕೊಂದು ಸುಸಜ್ಜಿತ ಕಟ್ಟಡವನ್ನು ಒದಗಿಸಿ ಯಾತ್ರಾರ್ಥಿಗಳಿಗೆ ಸಾರ್ವಕಾಲಿಕ ವಸ್ತು ಪ್ರದರ್ಶನವನ್ನಾಗಿಸುವ ಅನುಕೂಲ ಕಲ್ಪಿಸುವರೆಂಬ ಭರವಸೆಯನ್ನು ಕ್ಷೇತ್ರದ ಹಳೆಯ ವಿದ್ಯಾರ್ಥಿ ಸಂಘವು ಹೊಂದಿದೆ.

ಇದುವರೆಗೆ ಸಿದ್ಧಗಂಗಾ ಪತ್ರಿಕೆಯ ಸಂಪಾದಕ ಮಂಡಲಿಯಲ್ಲಿದ್ದು ಸೇವ ಸಲ್ಲಿಸಿದ್ದ ಶ್ರೀ ಕೆ.ಪಿ. ಶಿವಲಿಂಗಯ್ಯ ಎಂ. ಎ, ಅವರು ಮೈಸೂರಿನ ಜೆ. ಎಸ್.ಎಸ್. ಕಾಲೇಜಿಗೆ ವರ್ಗವಾದ ಪ್ರಯುಕ್ತ ಅವರ ಸೇವೆಯಿಂದ ದೂರವಾದ ಪತ್ರಿಕೆಯು ವಿಷಾದಿಸಿ ಇಂದಿನವರೆಗಿನ ಅವರ ಅಮೋಘ ಸೇವೆಗಾಗಿ ಅಭಿನಂದಿಸುತ್ತದೆ.



ಲೋ

ಾಯಕಮಗ್ನರಾಗಿ ತನುಮನಗಳನ್ನು ಬಳಲಿಸಿ
ವ ಕೂಲಿಯನ್ನು ಸಂಪಾದಿಸಿ ಪ್ರಸಾದ ಸ್ವೀಕ
ನ್ನುತ್ತಾರೆ. ಜಂಗಮ ಜೀವನ ಅಥವಾ ಶಿವ
ು ಜೀವನವೆಂದರೆ ಲೋಕವೃತ್ತದಿಂದ ದೂರ
ಸುಮ್ಮನೆ ಕೂಡುವುದಲ್ಲ. ಲೋಕವೃತ್ತದ
ಇದ್ದು ಕಾರ್ಯಮಗ್ನರಾಗಿ "ಪದ್ಮಪತ್ರ
ಸಿ" ಯಂತಿರಬೇಕೆನ್ನುತ್ತಾರೆ.

ರರ ಕಾಯಕ ನಿಷ್ಠೆಗೆ ಎಲ್ಲರೂ ಕಂಡರಿತ
ಂದೆರಡು ಉದಾಹರಣೆಗಳು:—

ೀ ಕ್ಷೇತ್ರದಲ್ಲಿ ಓದಲು ಬಂದ ವಿದ್ಯಾರ್ಥಿಗಳೆಲ್ಲ
ಓದು ಬೇಸರವಾದಾಗ ಸುಮ್ಮನೆ ಮಲಗುವು
ವಿರಾಮವೆಂದು ಶ್ರೀಗಳು ಅಲ್ಲಗಳೆಯುತ್ತಾರೆ.
ಬೇರೊಂದು ಕಾರ್ಯಮಾಡಿ ವಿರಾಮ ಪಡೆಯ
ದು ಅವರಿಗೂ ಬೋಧಿಸುತ್ತಾರೆ. ಹೀಗಾಗಿ
ವ್ಯವಸಾಯ, ಕಟ್ಟಡನಿರ್ಮಾಣ, ಇನ್ನಿತರ
ಗಳಲ್ಲಿ ವಿದ್ಯಾರ್ಥಿಗಳು ನಿರತರಾದಾಗ ಶ್ರೀಗಳು
ಅಲ್ಲಿಗೆ ಹೋಗಿ, ಅದರ ಹಾಗೆಯೇ ತಾವೂ ಕಲ್ಲು
ವುದು, ಹೊರಿಸುವುದು, ಹೊಲದಲ್ಲಿ, ಕಣದಲ್ಲಿ
ರ ಕೆಲಸಮಾಡುವುದು. ಈ ಕಾರ್ಯವನ್ನು
ತ್ತಿದ್ದಂತೆಯೇ ವಿದ್ಯಾರ್ಥಿಗಳ ನೂತನೋತ್ಸಾ
ಕ್ಕೆ ಗರಿಗೆದರಿ ನಿಲ್ಲುತ್ತದೆ. ಒಂದಕ್ಕೆ ಎರಡರಷ್ಟು
ಜೀವನ ಾಗುತ್ತದೆ. ಮಧ್ಯೇ ವಿದ್ಯಾರ್ಥಿಗಳನ್ನು ತಿಳಿ
ತಮ್ಮ ದಿಂದ ನಗಿಸುವುದೂ ಉಂಟು.
ಸಿದ್ಧೀಚಿತ್ತೀಚೆಗೆ ಕಾರ್ಯಬಾಹುಳ್ಯದಿಂದಲೂ,
ಗಳವರಸ್ಸಿನ ಆಧಿಕ್ಯದಿಂದಲೂ ಶ್ರೀಗಳವರ ದೈಹಿಕ
ಗೀಶ್ವರಶ್ರಮಗಳು ಸ್ವಲ್ಪ ಕಡಿಮೆಯಾಗಿವೆ
ಕುಮಾ(ವ್ಮೆ ದೇವರಾಯಪಟ್ಟಣದ ಗದ್ದೆಯಲ್ಲಿ ಬತ್ತ
ದಿವ್ಯಾದ್ಯ ಬೆಳೆದು ಹೊಡೆಗೆ ಬಂದಿತ್ತು. ಆದರೇನು
ವನ್ನು ಇ ನೀರಿಲ್ಲದೆ ಅನಾನುಕೂಲ ಪರಿಸ್ಥಿತಿಗೆ
ದಿಂದಲ್ಲ. ಗದ್ದೆಯ ಮಧ್ಯದಲ್ಲಿ ಅನೇಕ ಬಾವಿಗಳನ್ನು
ಯೋಚಿಸಿ, ನೀರೆತ್ತುವ ಸಂದರ್ಭದಲ್ಲಿ ಸ್ವತಃ ತಾವೇ
ಉದ್ವಾನ ಪಿಲೆ ಎಳೆಯುವ ದೃಶ್ಯವನ್ನು ಕಣ್ಣಾರೆ
ಶಾಲಿಗಳಿಂ ವಿದ್ಯಾರ್ಥಿಗಳು ಕಪಿಲೆ ಎಳೆಯುತ್ತೇವೆ,
ಡವರು.

ತಾವು ದಯಮಾಡಿ ಗಿಡದ ನೆಳಲಿಗೆ ಕುಳಿತುಕೊಳ್ಳಿ ಬುದ್ಧಿ ಎಂದರೆ, ಶ್ರೀಗಳ ಉತ್ತರ—"ಏಕೆ, ನಾವೂ ಕಪಿಲೆ ಎಳೆಯುವ ಅಭ್ಯಾಸ ಮಾಡಬೇಕು. ನಾನು ಕುಳಿತರೆ ಎಲ್ಲರೂ ಕೆಲಸದಲ್ಲಿ ಅಸಡ್ಡೆ ಮಾಡುವರು. ನಾವೂ ಕೆಲಸಮಾಡುತ್ತಿದ್ದರೆ ಉಳಿದವರೂ ಅಧಿಕೋತ್ಸಾಹದಿಂದ ಕೆಲಸ ಮಾಡುತ್ತಾರೆ," ಎಂದರು.

ಇನ್ನೊಂದು ಪ್ರಸಂಗ ಒಮ್ಮೆ ಮಠದಿಂದ 2 ಮೈಲು ದೂರದಲ್ಲಿ ಮೈದಾಳ ಕೆರೆಯ ಕೆಳಗಿನ ಗದ್ದೆಯಲ್ಲಿ ಹುಲ್ಲು ಹೇರಿಕೊಂಡು ಬರುವಲ್ಲಿ ಮಠದ ವ್ಯವಸಾಯ ಕೆಲಸದವರು ಅಸಡ್ಡೆ ತೋರಿದುದು ಶ್ರೀಗಳವರಿಗೆ ಗೊತ್ತಾಯಿತು. ಆಗ ರಾತ್ರಿ $7\frac{1}{2}$-8 ಘಂಟೆಯಾಗುತ್ತಾ ಬಂದಿತ್ತು. ಗಾಡಿಗಳನ್ನು ಹೂಡಿಸಿ ತಾವೇ ಹೇರಿಕೊಂಡು ಬರಲು ಹೊರಟರು. ಆದಿನ ನನಗೆ ಸ್ವಲ್ಪ ಜ್ವರ. ಶ್ರೀಗಳವರು ಗದ್ದೆಗೆ ಹೊರಟ ಸುದ್ದಿ ಕೇಳಿದೊಡನೆ ಎದ್ದು ಓಡಿ ಹೋದೆ. ಜ್ವರ ಮಾಯವಾದಂತಾಯಿತು. ಶ್ರೀಗಳವರು ವೇಗ ವೇಗವಾಗಿ ಗದ್ದೆಯತ್ತ ನಡೆಯುತ್ತಿದ್ದರು. ಸ್ವಲ್ಪ ಬೆಳದಿಂಗಳೂ ಇತ್ತು. ನೂರಾರು ವಿದ್ಯಾರ್ಥಿಗಳೂ ನಾಮುಂದು ತಾಮುಂದೆಂದು ಓಡಿ ಓಡಿ ಬರುತ್ತಿದ್ದರು. ನಾನು ಶ್ರೀಗಳವರಿಗೆ ಅರಿಕೆ ಮಾಡಿಕೊಂಡೆ, "ಕತ್ತಲಾಯಿತು ತಾವು ಮಠಕ್ಕೆ ದಯಮಾಡಿಸಿ ಬುದ್ಧಿ, ನಾವು ಹೇರಿಕೊಂಡು ಬರುತ್ತೇವೆ." ಎಂದೊಡನೆ ಇಲ್ಲ. ನಿಮಗೆ ಗೊತ್ತಿಲ್ಲ, ನಾನು ಹೋದರೆ, ಕೆಲಸ ಸರಿಹೋಗುತ್ತೆ. ನಿನ್ನೆಯಿಂದ ಹೇಳಿಕೊಂಡು ಬನ್ನಿರೆಂದರೆ ಯಾರೂ ಹೋಗಿಲ್ಲ. ಮಳೆ ಬಂದರೆ ಹುಲ್ಲುಕಾಳು ಗದ್ದೆಯ ಪಾಲಾಗುತ್ತದೆ, ಎಂದು ನಡೆಯುತ್ತಲೇ ಇದ್ದರು. ನಾನು ನಿರುಪಾಯನಾಗಿ ಬೆನ್ನತ್ತಿ ಹೊರಟೆ. ಆ ನಡಿಗೆಯ ವೇಗ, ಆ ಕರ್ತವ್ಯದಲ್ಲಿನ ದಿಟ್ಟತನ ಎಂದೂ ಮರೆಯುವಂತಿಲ್ಲ. ಹೊಲಕ್ಕೆ ಹೋದೊಡನೆ ಹುಲ್ಲುಹೊರೆಗಳನ್ನು ಕಟ್ಟಿ ಕಟ್ಟಿ ಹೊರಿಸುತ್ತಿದ್ದರು. ಸುಮಾರು ಒಂದೇ ಘಂಟೆಯಲ್ಲಿ ನಾಲ್ಕಾರು ಗಾಡಿ ಹುಲ್ಲು ತುಂಬಿಸಿ ಮಠದತ್ತ ಹೊರಟರು. 11 ಘಂಟೆಯಾಗಿತ್ತು ಮಠಕ್ಕೆ

ಬಂದಾಗ. ಆಮೇಲೆ ಸ್ನಾನ ಶಿವಪೂಜೆ. ಇತ್ಯಾದಿ ದೈನಂದಿಕ ಕ್ರಿಯಾನುಗ್ನತೆ. ಇಂಥ ಘಟನೆಗಳೆಷ್ಟೋ ಶ್ರೀಗಳವರ ದಿನಚರಿಯಲ್ಲಿ ನಡೆದುಹೋಗಿವೆ. ಅವೆಲ್ಲವುಗಳ ವಿವರಣೆಗೆ ಕಾಲಾತೀತವಾದೀತು.

ಯಾವ ಕಾರ್ಯವನ್ನೇ ಆಗಲಿ ಅದನ್ನು ಮನಮುಟ್ಟಿ ಪ್ರೀತಿಯಿಂದ ಮಾಡುವ ದೈಹಿಕ ಮಾನಸಿಕ ಉತ್ಸಾಹವು ಈಶ್ವರ ಕೃಪೆಯಿಂದ ಶ್ರೀಗಳವರಿಗೆ ಲಭ್ಯವಾಗಿದೆ ಅಂತೆಯೇ ಅನೇಕ ಘನೋದ್ದೇಶ ಭರಿತ ಮಹಾಕಾರ್ಯಗಳು ಶ್ರೀಗಳವರಿಂದ ನಿರ್ಬಾಧಿತವಾಗಿ ನಡೆದು ಇಂದು ಶ್ರೀಕ್ಷೇತ್ರವು ಪ್ರತಿ ದಿನ 5–6 ಸಾವಿರ ರೂಪಾಯಿಗಳ ಖರ್ಚುವೆಚ್ಚಗಳನ್ನು ತೂಗಿಸಬಲ್ಲ ಅಂತಸ್ಸತ್ವವನ್ನು ಹೊಂದಿದೆ. ಈ ಖರ್ಚುವೆಚ್ಚಗಳು ಹೇಗೆ ನಡೆಯುತ್ತವೆಯೋ ಈಶ್ವರನೇ ಬಲ್ಲ. ಜೋಳಿಗೆಯ ಮಹಾಸಾಮರ್ಥ್ಯವೇ ಇದೆಲ್ಲಕ್ಕೂ ಮೂಲ. ಆದರೆ ಎಂದೂ ಯಾರನ್ನು ಶ್ರೀಗಳು ಕಾಡಿಬೇಡಿ ತಂದವರಲ್ಲ, ತರುವವರಲ್ಲ.

ಶ್ರೀಮಠದ ಭಿಕ್ಷಾಟನೆಯ ರೀತಿ.

ಶ್ರೀಗಳವರು ಗ್ರಾಮಾಂತರ ಪ್ರದೇಶದ ಭಿಕ್ಷಾಟನೆಗೆ ವರ್ಷದಲ್ಲಿ ಐದಾರು ತಿಂಗಳಾದರೂ ಪ್ರವಾಸ ಕೈಕೊಳ್ಳದೆ ಗತಿಯಿಲ್ಲ. ಏಕೆಂದರೆ ಶ್ರೀಮಠವು ಸಂಸ್ಥಾನ ಮಠವಲ್ಲ. ಅಥವಾ ಭಾರಿ ಪ್ರಮಾಣದ ಆಸ್ತಿಪಾಸ್ತಿಗಳನ್ನು ಹೊಂದಿದುದಲ್ಲ. ಇದರಿಂದ ಮಠಕ್ಕೆ ಯಾವ ಆಸ್ತಿಪಾಸ್ತಿಗಳಿಲ್ಲವೆಂದರ್ಥವಲ್ಲ. ಮಠಕ್ಕೆ ಸ್ವಲ್ಪ ಭೂಮಿ ಕಾಣಿ ಇದೆ. ಆದರೆ ಅದರ ಉತ್ಪತ್ತಿ ಶ್ರೀಮಠಕ್ಕೆ 1 ತಿಂಗಳಿಗಾದರೂ ಸಾಲುವುದೊ ಇಲ್ಲವೊ. ಅಷ್ಟರ ಮಟ್ಟಿಗೆ ಭೂಮಿ ಕಾಣಿ ಇದೆ. ಈ ಕಾರಣದಿಂದಾಗಿ ಭಿಕ್ಷಾಟನಾವೃತ್ತಿ ಶ್ರೀಮಠದ ಮುಖ್ಯವೃತ್ತಿಯಲ್ಲೊಂದು. ಜೋಳಿಗೆಯ ಶಕ್ತಿ ಎಂತಹುದೆಂಬುದರ ಕಲ್ಪನೆಯಾಗಬೇಕಾದರೆ ಶ್ರೀ ಸಿದ್ಧಗಂಗಾ ಕ್ಷೇತ್ರದ ಜೋಳಿಗೆಯನ್ನು ಸಂದರ್ಶಿಸಬೇಕು. ಶ್ರೀಗಳವರು ಭಿಕ್ಷಾಟನಕ್ಕೆ ಹೊರಟರೆ ದಿನ ಒಂದಕ್ಕೆ ನಾಲ್ಕಾರು ಹಳ್ಳಿಗಳನ್ನು ಸಂದರ್ಶಿಸುವುದು ಮಾತ್ರ. ಆದರೆ ಇಷ್ಟಿಷ್ಟೇ ಕೊಡಬೇಕೆಂದು ಕೇಳುವವರಲ್ಲ. ಶ್ರೀಗಳವರು ಬಂದಾಗ ಊರಿನವರೆಲ್ಲ ಒಟ್ಟುಗೂಡಿ ತಮ್ಮ ತಮ್ಮ ಭಕ್ತಿ, ಕಾಣಿಕೆಯನ್ನು ತಾವೇ ನಮಸ್ಕಾರಹಾಕಿ ಹೇಳಿಬಿಡುವುದು ಮಾತ್ರ. ಅನಂತರ ಆಯಾಯ ಗ್ರಾಮದ ಒಟ್ಟು ವಂತಿಕೆಯನ್ನು ಸಂಗ್ರಹಿಸಿ ಮಠಕ್ಕೆ ಕಳಿಸುವುದು. ಕ್ಷೇತ್ರದ ಖರ್ಚುವೆಚ್ಚಗಳು ಇಷ್ಟು ಬೆಳೆಯುವುದಕ್ಕಿಂತ ಪೂರ್ವದಲ್ಲಿ ಒಂದೊಂದು ಹಳ್ಳಿಯಲ್ಲಿ ಒಂದೆರಡು ದಿನಗಳು ನಿಂತು ಅಲ್ಲಿ ಪೂಜಾದಿ ವ್ಯವಹಾರ ತೀರಿಸಿ ಸಭೆ ಸಂಘಗಳನ್ನು ಮಾಡಿ ಉಪದೇಶಮಾಡಿ ಊರ ಕಾಣಿಕೆಯನ್ನು ಸ್ವೀಕರಿಸಿ ಬರುವ ಪದ್ಧತಿಯಿತ್ತು. ಆದರೆ ಈಗ ಕ್ಷೇತ್ರದ ಖರ್ಚುವೆಚ್ಚಗಳೂ, ಕಾರ್ಯಕ್ರಮಗಳೂ, ಬೇರೆ ಜವಾಬ್ದಾರಿಗಳೂ ಹೆಚ್ಚಾಗಿರುವಾಗ ಊರು ಊರುಗಳಲ್ಲಿ ವಸತಿಮಾಡುವುದು ದುಸ್ತರವಾಗಿರುವಾಗ ದಿನವೊಂದಕ್ಕೆ ಹತ್ತಾರು ಊರುಗಳಿಗೆ ದರ್ಶನಕೊಟ್ಟು ಬಂದರಾಯಿತು. ಊರಿನವರೇ ತಮ್ಮ ತಮ್ಮ ವಂತಿಕೆಗಳನ್ನು ಮಠಕ್ಕೆ ತಂದು ಹಾಕುವುದು ರೂಢಿಗೆ ಬಂದಿರುವುದು. ಮಲೆನಾಡಿಗೆ ಹೋಗಿ ಅಲ್ಲಿ ಸುಮಾರು 1 ತಿಂಗಳು ಪ್ರವಾಸ ಮಾಡಿಬರುವರು. ಅಲ್ಲಿಂದ ಭತ್ತ ಇತ್ಯಾದಿ ಪದಾರ್ಥಗಳು ಮಠಕ್ಕೆ ಬಂದು ಸಂಗ್ರಹವಾಗುತ್ತವೆ.

ಇದಲ್ಲದೆ ಮಠಕ್ಕೆ ಶ್ರೀಗಳವರ ಮತ್ತು ಸಿದ್ಧಲಿಂಗೇಶ್ವರಸ್ವಾಮಿ, ಗಂಗಾಮಾತೆಯ ದರ್ಶನಕ್ಕೆ ಬಂದ ಜನ ತಮ್ಮ ತಮ್ಮ ಇಷ್ಟಾನುಸಾರ ಕಾಣಿಕೆಯನ್ನು ಸಲ್ಲಿಸುತ್ತಾರೆ. ಸಲ್ಲಸಿದರೂ, ಸಲ್ಲಿಸದಿದ್ದರೂ ಒಂದೇ ಬಗೆಯ ಆತ್ಮೀಯತೆ. ಸಾಮರ್ಥ್ಯಕ್ಕೆ ಮೀರಿ ಕಾಣಿಕೆ ಸಲ್ಲಿಸುವ ಉತ್ಸಾಹಿಗಳಿಗೆ ಈಗ ಬೇಡ ಮುಂದೆ ಚೆನ್ನಾಗಿ ಗಳಿಕೆಯಾದಾಗ ಕೊಡುವಿರಂತೆ, ಹೀಗೆ ಹೇಳುತ್ತಿರುವ ಉದಾಹರಣೆಗಳೂ ಉಂಟು, ಇದೇ ಶ್ರೀ ಮಠದ ಭಿಕ್ಷಾಟನೆಯ ವೈಖರಿಯಾಗಿದೆ.

ಶ್ರೀ ಸಿದ್ಧಗಂಗೆಗೆ ಬರುವ ಗ್ರಾಮಾಂತರ ಪ್ರದೇಶದ ಜನರು ಯಾರೂ ಬರಿಗೈಯಿಂದ ಬರುವುದೇ ಇಲ್ಲ. ಮೀಸಲಾಗಿ ಇಟ್ಟ, ದವಸ, ಧಾನ್ಯ, ತರಕಾರಿ, ಕೊನೆಗೆ ಊಟದೆಲೆಯಾಯಿತು. ಅವನ್ನೇ ಕೈಯಲ್ಲಿ ಹಿಡಿದು ತಂದು ದಾಸೋಹಕ್ಕೆ ಸಲ್ಲಿಸಿ ತಾವೂ ಪ್ರಸಾದ ಸ್ವೀಕ



ರಿಸಿ ಹೋಗುತ್ತಾರೆ. ಇದು ಹಿಂದಿನಿಂದ ನಡೆದು ಬಂದಿರುವ ಸಹಕಾರ ಮನೋಭಾವದ ದಿವ್ಯ ನಡೆಯಾಗಿದೆ. ಈ ಸಂಪ್ರದಾಯಗಳೆಲ್ಲ ಉದ್ದಾನ ಸ್ವಾಮಿಗಳವರ ಕಾಲದಿಂದಲೂ ಅವಿಚ್ಛಿನ್ನವಾಗಿ ನಡೆದುಕೊಂಡು ಬಂದಿರುವ ಸತ್ಸಂಪ್ರದಾಯಗಳು.

ಸಿದ್ಧಗಂಗಾ ಕ್ಷೇತ್ರವೆಂದರೆ ಎಲ್ಲ ಮತೀಯರಿಗೂ ತಮ್ಮ ಮನೆಯೇ ಎನ್ನುವ ಆತ್ಮೀಯ ಮನೋಭಾವ. ಸ್ವಾಮಿಗಳೆಂದರೆ ನಮ್ಮ ಮನೆಯವರೇ ಎನ್ನುವ ಅತ್ಯಂತ ಸಮೀಪ ಸಂಬಂಧದ ವಿಶ್ವಾಸದ ನಡೆವಳಿಕೆ. ಎಲ್ಲ ಮತೀಯರೂ ತಾವು ತಾವು ಆಚರಿಸುವ ವಿಶೇಷ ಸಭೆ ಸಂಘಗಳಿಗೆ ಶ್ರೀಗಳವರನ್ನು ಬರಮಾಡಿಕೊಂಡು ಅವರಿಂದ ಸಮಯೋಚಿತ ಉಪದೇಶ ಪಡೆಯುತ್ತಾರೆ. ತಮ್ಮ ತಮ್ಮ ಸಮಾಜದ ಕುಂದುಕೊರತೆಗಳನ್ನು, ನ್ಯಾಯನಿಷ್ಠುರಗಳನ್ನೂ ಅರಿಕೆಮಾಡಿಕೊಂಡು ಪರಿಹಾರ ಪಡೆಯುತ್ತಾರೆ. ಸ್ಥಳೀಯ ವ್ಯಾಜ್ಯಗಳ ಬಗೆಹರಿಸಿಕೊಳುತ್ತಾರೆ.

ಶ್ರೀ ಕ್ಷೇತ್ರವೂ ಒಂದು ನ್ಯಾಯಾಲಯ—

ಶ್ರೀ ಕ್ಷೇತ್ರವು ಒಂದು ನ್ಯಾಯಾಲಯ. ಇಲ್ಲಿ ಸಿವಿಲ್, ಕ್ರಿಮಿನಲ್, ಮತ್ತು ಮತೀಯ ಕಲಹಗಳು ತೀರ್ಮಾನವಾಗಿವೆ. ಗ್ರಾಮಾಂತರ ಪ್ರದೇಶದ ಅನೇಕ ಸಮಸ್ಯೆಗಳಿಗೆ ಶ್ರೀಗಳವರು ಪರಿಹಾರವನ್ನು ಕಂಡುಹಿಡಿದು ತೀರ್ಮಾನ ಮಾಡುವ ಸತ್ಸಂಪ್ರದಾಯವನ್ನು ಎಂದಿನಿಂದಲೂ ನಡೆಯಿಸಿಕೊಂಡು ಬರುತ್ತಿದ್ದಾರೆ. ಈ ಸಂಪ್ರದಾಯ ಉದ್ದಾನ ಶಿವಯೋಗಿಗಳವರ ಕಾಲದಿಂದಲೂ ಬೆಳೆದು ಬಂದಿದೆ. ಒಮ್ಮೊಮ್ಮೆ ನ್ಯಾಯಗಳ ಇತ್ಯರ್ಥಕ್ಕೆ ಶ್ರೀಗಳವರೇ ಗೊತ್ತಾದ ದಿನ ಹಳ್ಳಿಗೆ ಹೋಗುವುದುಂಟು. ಅಲ್ಲಿಯ ದೇವಾಲಯವೊಂದರಲ್ಲಿ ನೆರೆದ ಸಮಸ್ತ ಜನಗಳೆದುರು ತೀರ್ಪು ಕೊಟ್ಟು ಬರುವುದುಂಟು. ಎಲ್ಲ ಮತೀಯರ ಜಗಳಗಳೂ ಇತ್ಯರ್ಥವಾಗುವುದುಂಟು. ಶ್ರೀಗಳವರು ತೀರ್ಮಾನ ಹೇಳಿದಮೇಲೆ ಯಾರೂ ಅಲ್ಲಗಳೆಯುವಂತಿಲ್ಲ. ನ್ಯಾಯತೀರ್ಮಾನಕ್ಕೆ ಮಠದಲ್ಲೊ ಹಳ್ಳಿಯಲ್ಲೊ ಕಾಲವನ್ನು ಗೊತ್ತುಮಾಡುವುದು; ಅನಂತರ ಯಾರು ಯಾರಿಗೆ ಜಗಳವಿದೆಯೊ ಅವರಿಬ್ಬರಿಗೆ ಇಂಥ ದಿನ ಇಂಥ ಸ್ಥಳದಲ್ಲಿ ವ್ಯಾಜ್ಯ ಬಗೆಹರಿಸಲಾಗುವುದು; ಸಂಬಂಧಪಟ್ಟ ಕಾಗದ ಪತ್ರ ಸಾಕ್ಷಿ ಇತ್ಯಾದಿಗಳೊಡನೆ ಬರುವುದು ಎಂದು ಮೊದಲೇ ತಿಳಿಸಿರುತ್ತಾರೆ. ಗೊತ್ತಾದ ದಿನ ಗೊತ್ತಾದ ಸ್ಥಳಕ್ಕೆ ವಾದಿ ಪ್ರತಿವಾದಿಗಳಿಬ್ಬರೂ ಬಂದ ಮೇಲೆ ಎಲ್ಲ ವಿಷಯವನ್ನೂ ಕೂಲಂಕಷವಾಗಿ ತಿಳಿದು ಅನಂತರ ತೀರ್ಪು ಹೇಳುವರು. ಶ್ರೀ ಮಠವೇ ತೀರ್ಮಾನಮಾಡುವ ಸ್ಥಳವಾದರೆ ಅಲ್ಲಿಗೆ ಎರಡು ಪಕ್ಷಗಳವರೂ ಬಂದ ಮೇಲೆ ಅವರಿಗೆ ಮೊದಲು ಶ್ರೀಮಠದಲ್ಲಿ ಊಟ ತಿಂಡಿಗಳನ್ನು ಮಾಡಿಸಿ ಮನಸ್ಸಮಾಧಾನಪಡಿಸಿ ಅನಂತರ ವ್ಯಾಜ್ಯ ತೀರ್ಮಾನಕ್ಕೆ ಕೂಡುವರು. ಮಠದ ಪ್ರಸಾದ ಪ್ರಭಾವವೋ ಅಥವಾ ಶ್ರೀಗಳವರ ಪರುಷ ದೃಷ್ಟಿಕಾರಣವೋ ಹತ್ತಾರುವರ್ಷಗಳವರೆಗೆ ಹೆಣಗಿ ಸತ್ತು ಸುಣ್ಣವಾಗಿ ತೀರ್ಮಾನದ ಮುಖಕಾಣದ ಜಟಿಲವಾದ ವ್ಯಾಜ್ಯಗಳೂ ಸುಲಭವಾಗಿ ತೀರ್ಮಾನಗೊಳ್ಳುವುವು. ಪುನಃ ಎರಡೂ ಪಕ್ಷಗಳಲ್ಲಿ ಮೈತ್ರಿ ಸೌಹಾರ್ದಗಳನ್ನುಂಟುಮಾಡಿ ಆಶೀರ್ವದಿಸಿ ಕಳಿಸಿಬಿಡುವರು. ಆಮೇಲೆ ಎಂದಿನಂತೆ ಗ್ರಾಮೀಣ ಜನರಲ್ಲಿ ಶಾಂತಿ. ಶ್ರೀ ಸಿದ್ಧಗಂಗಾ ಶ್ರೀಗಳು ವ್ಯಾಜ್ಯ ತೀರಿಸಿದ್ದಾರೆಂದರೆ ಎರಡೂ ಪಕ್ಷಗಳಿಗೊಂದು ದೊಡ್ಡ ಹೆಮ್ಮೆ. ಶ್ರೀಗಳವರ ಡೈರಿಯನ್ನು ಅವಲೋಕಿಸಿದವರಿಗೆ ಶ್ರೀಗಳವರು ಈ ವಿಷಯದಲ್ಲಿ ಎಷ್ಟರಮಟ್ಟಿಗೆ ಸಾಮಾಜಿಕ ಸಮತೆಯನ್ನು ಕಾಪಾಡುವುದರಲ್ಲಿ ಆಸಕ್ತಿ ಹೊಂದಿದ್ದಾರೆಂಬುದರ ಅರಿವಾಗದಿರದು.

ಶ್ರೀಗಳವರನ್ನು ಸರ್ವಮತೀಯರೂ ತಮ್ಮವರೇ ಎಂಬ ಆತ್ಮೀಯತೆಯಿಂದ ಕಾಣುತ್ತಾರೆ—

ಸಿದ್ಧಗಂಗಾ ಕ್ಷೇತ್ರವಾಗಲಿ, ಶ್ರೀಗಳವರಾಗಲಿ ಒಂದೇ ಸಮಾಜಕ್ಕೆ ಮೀಸಲಾದವರಲ್ಲ. ಅವರು ಸರ್ವಧರ್ಮಸಿದ್ಧಾಂತಗಳನ್ನು ಮನ್ನಿಸುತ್ತಾರೆ. ಅವರವರು ತಮ್ಮ ತಮ್ಮ ಧರ್ಮ ಸಿದ್ಧಾಂತಗಳನ್ನು ಶ್ರದ್ಧೆಯಿಂದ ಪಾಲಿಸಿದರೆ ಎಲ್ಲೆಲ್ಲೂ ನೆಮ್ಮದಿ ಇರುತ್ತದೆ ಎನ್ನುತ್ತಾರೆ. ಆದರೆ ತಮ್ಮ ತಮ್ಮ ಧರ್ಮಸಿದ್ಧಾಂತಗಳನ್ನು ಶ್ರದ್ಧೆಯಿಂದ ಪಾಲಿಸಬೇಕಷ್ಟೆ. ಧರ್ಮಶ್ರದ್ಧೆ

ಯಿಲ್ಲದವರಲ್ಲೇ ದ್ವೇಷಾಸೂಯೆಗಳು ಹುಟ್ಟಲು ಅವಕಾಶವಾಗುತ್ತದೆ ಎನ್ನುತ್ತಾರೆ.

ಸಾಮಾನ್ಯವಾಗಿ ಶ್ರೀಗಳವರು ಜೈನ, ಬೌದ್ಧ, ಅಗ್ನಿವಂಶಕ್ಷತ್ರಿಯ, ಒಕ್ಕಲಿಗ, ಮಹಮ್ಮದೀಯ, ದ್ವೈತಾದ್ವೈತ, ವಿಶಿಷ್ಟಾದ್ವೈತ, ಬ್ರಹ್ಮಸಮಾಜ, ದಾಸಕೂಟ, ರಾಮಮಂದಿರ, ವೀರಶೈವ ಸಂಘಗಳಲ್ಲೆಲ್ಲ ಆಯಾ ಸಮಾಜಗಳ ವೇದಾಂತ ಪರಿಷತ್, ವಿವೇಕಾನಂದ ಜಯಂತಿ, ಹನುಮಜ್ಜಯಂತಿ, ಗೀತಾ ಜಯಂತಿ—ಇವೇ ಮೊದಲಾದ ಅನೇಕ ಕೋಮುಗಳ ಸಂಘ ಸಂಸ್ಥೆಗಳವರ ಆಹ್ವಾನವನ್ನು ಅಂಗೀಕರಿಸಿ ಅಲ್ಲೆಲ್ಲಾ ದಯಮಾಡಿಸಿ ಸಕಾಲಿಕ ಸೂಕ್ತ ಸಲಹೆಗಳನ್ನು ಕೊಟ್ಟು ಎಲ್ಲರ ಪ್ರೀತಿ ವಿಶ್ವಾಸಗಳಿಗೂ ಕಾರಣರಾಗಿದ್ದಾರೆ. ಇದು ಅವರ ಸರ್ವಧರ್ಮಸಮತೆಯ ದ್ಯೋತಕವಾಗಿದೆ. ಸಾಮಾನ್ಯವಾಗಿ ಶ್ರೀಗಳವರು ಪ್ರತಿ ತಿಂಗಳೂ ಸರಾಸರಿ 20–25 ಸಭಾಸಂಘಗಳಲ್ಲಿ ಭಾಗವಹಿಸಿ ತಮ್ಮ ವಿಶ್ವಕಲ್ಯಾಣವೂ, ಅನುಭವಪೂರ್ಣವೂ ಆದ ಉಪದೇಶವನ್ನು ಮಾಡಿಬರುತ್ತಾರೆ. ಕರ್ನಾಟಕದ ಮೂಲೆಮೂಲೆಗಳ ಅನೇಕ ಜನರ ಜೀವನ ಪರಿಚಯ, ಸಮಸ್ಯೆಗಳ ಪೂರ್ಣ ಅರಿವು ಸನ್ನಿಧಿಯವರಿಗೆ ಆಗಿದೆ. ಎಲ್ಲ ಬಗೆಯ ಸಂಘ ಸಂಸ್ಥೆಗಳವರೂ ಶ್ರೀಗಳವರನ್ನು ಬರಮಾಡಿಕೊಂಡು ಆಶೀರ್ವಾದ ಪಡೆಯುವುದೊಂದು ದೊಡ್ಡ ಪುಣ್ಯವೆಂದು ಭಾವಿಸಿ ಕರೆಯಿಸಿಕೊಳ್ಳುತ್ತಾರೆ. ಈ ಕಾರ್ಯಕ್ರಮಗಳ ಬಾಹುಳ್ಯದಲ್ಲಿ ಇತ್ತೀಚೆಗೆ ಶ್ರೀಗಳವರಿಗೆ ವಿರಾಮವೂ ಕೂಡ ಇಲ್ಲವಾಗಿದೆ.

### ಶ್ರೀಗಳವರು ಎಲ್ಲ ಪ್ರಕಾರದ ಸಂಘಸಂಸ್ಥೆಗಳಲ್ಲೂ ಭಾಗವಹಿಸಿ ಉಪದೇಶ ಭಾಷಣ ಮಾಡಿದ್ದಾರೆ.

1) ಶಾಲಾ ಕಾಲೇಜುಗಳ ಪ್ರಾರಂಭ, ಮುಕ್ತಾಯ ಭಾಷಣಗಳು 2) ಶಾಲಾ ಕಾಲೇಜುಗಳ ಉದ್ಘಾಟನಾ ಸಮಾರಂಭಗಳು 3) ಸ್ವಾತಂತ್ರ್ಯ ದಿನಾಚರಣೆ, ರಿಪಬ್ಲಿಕ್ ಡೇ ಸಮಾರಂಭಗಳು 4) ಆಸ್ಪತ್ರೆಗಳ ಉದ್ಘಾಟನೆ 5) ಮಿಲ್ಲುಗಳು ಕಾರ್ಖಾನೆಗಳ ಉದ್ಘಾಟನೆ 6) ಶಾರದಾಪೂಜಾ ಸಮಾರಂಭ 7) ವೇದಾಂತ ಪರಿಷತ್ತು 8) ವಿಶ್ವಹಿಂದೂ ಪರಿಷತ್ ಸಭಾ ಸಂಘಗಳು 9) ರಾಷ್ಟ್ರೀಯ ಸ್ವಯಂಸೇವಕ ಸಂಘದ ಕಾರ್ಯಕ್ರಮಗಳು 10) ಗೀತಾ ಜಯಂತಿ 11) ಮಡಿವಾಳಮಾಚಿದೇವ ಜಯಂತಿ 12) ರಾಮೋತ್ಸವಗಳು 13) ದಾಸ ಕೂಟಗಳು 14) ಪೋಷಕ ಬೋಧಕ ಸಂಘಗಳು 15) ಕರ್ನಾಟಕ ಸಂಘಗಳು 16) ವಿದ್ವತ್ಸಮ್ಮೇಲನಗಳು 17) ಅಖಿಲಭಾರತ ಶಿವಾನುಭವನ ಸಮ್ಮೇಲನಗಳು 18) ಮಾಧ್ವ ಸಮ್ಮೇಲನಗಳು 19) ಸರ್ವಧರ್ಮ ಸಮ್ಮೇಲನಗಳು 20) ಶಿವಾನುಭವ ಸಮ್ಮೇಲನಗಳು 21) ಬಸವ ಜಯಂತಿ, ಅಕ್ಕನ ಜಯಂತಿ, ತರಳಬಾಳು ಹುಣ್ಣಿಮೆ ಜಯಂತಿಗಳು 22) ಅಖಿಲಭಾರತ ಖಾದಿ ಮತ್ತು ಕೈಗಾರಿಕಾ ಸಭೆ ಸಮ್ಮೇಲನಗಳು 23) ಜೈನ, ಬೌದ್ಧ ವೇದಾಂತ ಸಮ್ಮೇಲನಗಳು 24) ಒಕ್ಕಲಿಗ, ಅಗ್ನಿವಂಶಕ್ಷತ್ರಿಯ, ಮಹಮ್ಮದೀಯ ಸಂಘ ಸಂಸ್ಥೆಗಳು 25) ಜಾತ್ರೆಗಳು ದನಗಳ ಪ್ರದರ್ಶನಗಳು ಸಂಘ ಸಂಸ್ಥೆಗಳು 26) ವಿದ್ಯಾದಾನ ಭೂದಾನ ಚಳುವಳಿಯ ಚಟುವಟಿಕೆಗಳು 27) ರಾಜ್ಯದ ಕಡ್ಡಾಯ ಪ್ರಾಥಮಿಕ ಶಾಲಾ ಶಿಕ್ಷಣ ಸಭೆಗಳು 28) ವಿದ್ಯುಚ್ಛಕ್ತಿಯ ಆರಂಭೋತ್ಸವಗಳು 29) ಸಂಸ್ಕೃತ ಕಾಲೇಜು-ಪಾಠಶಾಲೆಗಳ ಆರಂಭ ಮುಕ್ತಾಯ ಭಾಷಣಗಳು 30) ಕವಿಕಾವ್ಯ ಜಯಂತಿ ಸಮ್ಮೇಲನಗಳು 31) ಶೈವ ಸಂಘ ಸಭೆಗಳು 32) ಭಾರತ ಸಾಧು ಸಮ್ಮೇಲನಗಳು 33) ಬ್ರಹ್ಮ ಸಮಾಜದ ಸಂಘ ಸಂಸ್ಥೆಗಳು 34) ಗಣಪತಿ ಮಹೋತ್ಸವಗಳು 35) ಅತ್ಯುತ್ತಮ ನಾಟಕ ಸಭಾ ಸಂಘಗಳು 36) ಸಾಹಿತ್ಯ ಸಮ್ಮೇಲನಗಳು—ಇವೇ ಮೊದಲಾದ ವಿವಿಧ ಬಗೆಯ ಸಂಘ ಸಂಸ್ಥೆಗಳವರು ಶ್ರೀಗಳವರನ್ನು ಬರಮಾಡಿಕೊಂಡು ಅವರ ಕೃಪಾಶೀರ್ವಾದಕ್ಕೆ ಪಾತ್ರರಾಗಿದ್ದಾರೆ. ಶ್ರೀಗಳವರ ಭಾಷಣದಿಂದ ಪ್ರಭಾವಿತರಾಗದವರಿಲ್ಲ. ದೊಡ್ಡವರಾಗಲಿ, ಚಿಕ್ಕವರಾಗಲಿ, ಮಕ್ಕಳಾಗಲಿ ಎಲ್ಲರಿಗೂ ಅರ್ಥವಾಗುವ ಸೆರೆಹಿಡಿಯುವ ಪ್ರಸಾದ ವಾಣಿ. ಸಭೆಯಲ್ಲಿ ಎಷ್ಟರ ಮಟ್ಟಿಗೆ ಶ್ರೀಗಳವರ ಉಪದೇಶ ಪ್ರಭಾವವಾಗುತ್ತಿತ್ತೆಂಬುದಕ್ಕೆ ಈ ಕೆಳಗಿನ ಒಂದು ದೃಷ್ಟಾಂತ ಸಾಕು—ಒಮ್ಮೆ ಕುಣಿಗಲ್ ತಾಲ್ಲೂಕಿನ ಶಾಲೆಯೊಂದರ ವಾರ್ಷಿಕೋತ್ಸವದಲ್ಲಿ ವಿದ್ಯಾರ್ಥಿಗಳನ್ನು ಕುರಿತು ಭಾಷಣ ಮಾಡುತ್ತಿದ್ದಾಗ "ವಿದ್ಯಾರ್ಥಿಗಳು ತಂದೆತಾಯಿಗಳಿಗೆ ಮೋಸ ಮಾಡಬಾರದು. ಸುಳ್ಳು ಹೇಳಬಾರದು" ಎಂಬ ಉಪದೇಶವನ್ನು ಕೇಳಿದ ವಿದ್ಯಾರ್ಥಿಯೊಬ್ಬನು ಬಿಕ್ಕಿ ಬಿಕ್ಕಿ ಅಳುತ್ತ ಬಂದು ಶ್ರೀಗಳವರ ಪಾದವನ್ನು ಗಟ್ಟಿಯಾಗಿ ಹಿಡಿದುಕೊಂಡನು. ಶ್ರೀಗಳವರು "ಏನು ಸಮಾಚಾರ" ಎಂದು ಕೇಳಿದಾಗ ಆ ಹುಡುಗನು "ನಾನು ನಮ್ಮ ತಂದೆಯವರ ಜೇಬಿನಿಂದ ಹತ್ತು ರೂಪಾಯಿಗಳ ನೋಟ್ ಒಂದನ್ನು ಕದ್ದು ಸುಳ್ಳು ಹೇಳಿದೆನು. ಈ ಪಾಪದಿಂದ ವಿಮುಕ್ತನಾಗುವುದು ಹೇಗೆ? ತಾವು ಭಾಷಣದಲ್ಲಿ ಮೋಸಮಾಡಬಾರದೆಂದು ಉಪದೇಶವಿತ್ತಿರಿ" ಇತ್ಯಾದಿಯಾಗಿ ತಿಳಿಸಿದಾಗ, ಶ್ರೀಗಳವರು ಅವನಿಗೆ ಸಮಯೋಚಿತ ತಿಳುವಳಿಕೆ ಹೇಳಿದ ಪ್ರಸಂಗವನ್ನು ಪತ್ರಿಕೆಯವರೂ ಹಿಂದೆ ರಿಪೋರ್ಟ್ ಮಾಡಿದ್ದರು.

ಹೀಗೆ ಶ್ರೀಗಳವರ ಉಪದೇಶ ಎಲ್ಲ ಬಗೆಯ ಜನರಿಗೂ ದೇಶ ಕಾಲ ವರ್ತಮಾನಗಳನ್ನನುಸರಿಸಿ ಸಾಂತ್ವನಗೊಳಿಸುವ ಸತ್ಯಶುದ್ಧ ಸಾತ್ವಿಕ ಉಪದೇಶ. ಮನಃ ಪರಿವರ್ತನಗೊಳಿಸುವ ದಿವ್ಯೋಪದೇಶ. ಶ್ರೀಗಳವರು ಸಭಾ ಸಂಘಗಳಲ್ಲಿ ಭಾಗವಹಿಸಿದ ಸಣ್ಣನಗರ, ಪಟ್ಟಣಗಳು ಅಸಂಖ್ಯಾತ, ಮುಖ್ಯವಾಗಿ ಈ ಕೆಳಗೆ ಕಾಣಿಸಿದ ದೊಡ್ಡ ದೊಡ್ಡ ಊರುಗಳನ್ನು ಹೆಸರಿಸಬಹುದು. ಬೊಂಬಾಯಿ ಮೊದಲ್ಗೊಂಡು ಕೊಯಮತ್ತೂರುವರೆಗೆ ಪೂರ್ವ ಸಮುದ್ರದಿಂದ ಪಶ್ಚಿಮ ಸಮುದ್ರದವರೆಗೆ.

### ಶ್ರೀಗಳವರು ಉಪದೇಶಕ್ಕಾಗಿ ದಯಮಾಡಿಸಿದ ಮುಖ್ಯವಾದ ಕೆಲವು ದೊಡ್ಡ ದೊಡ್ಡ ಊರುಗಳು

ಶಿರ್ಶಿ, ಹಾವೇರಿ, ಚಿತ್ರದುರ್ಗ, ಹಿರಿಯೂರು, ಚಳ್ಳಕೆರೆ, ಜಗಳೂರು, ಮೈಸೂರು, ಚಾಮರಾಜಪೇಟೆ, ನಂಜನಗೂಡು, ಮರ್ಕೆರಾ, ಬಾಗಲಕೋಟೆ, ಬಾದಾಮಿ, ಹಾಸನ, ಧಾರವಾಡ, ಹುಬ್ಬಳ್ಳಿ, ನವಿಲುಗುಂದ, ನರಗುಂದ, ಧರ್ಮಸ್ಥಳ, ಮುಂಬಯಿ, ನಾಗಪುರ, ಕಡೂರು, ಹರಪನಹಳ್ಳಿ, ಬಳ್ಳಾರಿ, ತುಮಕೂರು, ಶಿವಮೊಗ್ಗ, ಸೋಮವಾರಪೇಟೆ, ಕೊಡಲಿಪೇಟೆ, ಸಕಲೇಶಪುರ, ಮೂಡಿಗೆರೆ, ಉಡುಪಿ, ಕೂಡಲಸಂಗಮ, ಕಲಬುರ್ಗಿ, ವಿಜಾಪುರ, ಲಚ್ಚ್ಯಾಣ, ಬೆಂಗಳೂರು, ಯಶವಂತಪುರ, ಕೊಳ್ಳೇಗಾಲ, ದಾವಣಗೆರೆ, ಅರಸಿಕೆರೆ, ನೀಲಗಿರಿ (ಕುನಾಡ), ಮಳವಳ್ಳಿ, ಮಂಡ್ಯ, ಮದ್ದೂರು, ತಿಪಟೂರು, ಗೋಡೆಗೆರೆ, ದೊಡ್ಡಬಳ್ಳಾಪುರ, ಚಿಕ್ಕಬಳ್ಳಾಪುರ, ನೊಣವಿನಕೆರೆ, ಗುಬ್ಬಿ, ಶಿರಾ, ಕುಣಿಗಲ್ಲು, ಮಾಗಡಿ, ಬೆಳಗಾಂವಿ, ಸವದತ್ತಿ, ಸೊಂಡೂರು, ಹಿರೇಕ್ಯೂರು, ಸಿರಿಗೆರೆ, ಸಾತ್ನೂರು, ಕಾನಕಾನಹಳ್ಳಿ, ಗೌರಿಬಿದನೂರು, ಹಿಂದೂಪುರ, ಚೆನ್ನಪಟ್ಟಣ, ತಲಕಾಡು, ಶಿವಯೋಗಮಂದಿರ, ಕೋಲಾರ, ಚಿಂತಾಮಣಿ, ಮಧುಗಿರಿ, ಕೊರಟಗೆರೆ, ಪಾವಗಡ, ಶಿವಗಂಗೆ, ಕೆ. ಆರ್ ನಗರ, ರಾಮನಗರ, ಕೃಷ್ಣರಾಜಪುರ, ಮಾಯಕೊಂಡ, ಅಜ್ಜಂಪುರ, ಬೀರೂರು, ರಾಣಿಬೆನ್ನೂರು, ಹರಿಹರ — ಇತ್ಯಾದಿ ಸಹಸ್ರ ಸಹಸ್ರ ಸಂಖ್ಯೆಯ ಊರುಗಳ ಪಟ್ಟಿಗಿಂತ ಕೆಲವು ಮುಖ್ಯ ಊರುಗಳ ಹೆಸರನ್ನು ಮಾತ್ರ ದಿಗ್ದರ್ಶನಾರ್ಥವಾಗಿ ಕೊಡಲಾಗಿದೆ. ಇಷ್ಟೊಂದು ಗ್ರಾಮ, ನಗರ, ಪಟ್ಟಣಗಳನ್ನು ಸಂದರ್ಶಿಸಿ ಸಭಾ ಸಂಘಗಳಲ್ಲಿ ಭಾಗವಹಿಸಿ ಉಪದೇಶ ಭಾಷಣಮಾಡಿ ಅಲ್ಲಲ್ಲಿಯ ಜನಜಂಗುಳಿಯ ಕೈಂಕರ್ಯ ಸೇವೆಗಳನ್ನು ಸ್ವೀಕರಿಸಿದ ಶ್ರೀಗಳವರ ದೃಢವಾದ ಆರೋಗ್ಯ, ತಾಳ್ಮೆ, ಶ್ರಮಗಳ ಬಗೆಗೆ ಬರೆಯುವುದೇ ಅನವಶ್ಯಕ. ಶ್ರೀಗಳವರ ಅದ್ಭುತ ಜಿತೇಂದ್ರಿಯತ್ವ, ಆಹಾರ ವಿಹಾರ ವಿಷಯದಲ್ಲಿನ ಶಾಸ್ತ್ರಗಾಮಿತ್ವ, ಕಟ್ಟುನಿಟ್ಟಾದ ತ್ರಿಕಾಲ ಪೂಜಾ ಪುನಸ್ಕಾರಗಳು ಅವರ್ಣನೀಯವಾದುವುಗಳು. ಜಿಹ್ವಾಚಾಪಲ್ಯವನ್ನು ಶ್ರೀಗಳವರು ಆಶ್ರಮಸ್ವೀಕಾರ ನಿರ್ಧಾರದಿಂದಲೇ ದೂರವಾದವರು. ಶ್ರೀಗಳವರ ಇಂಥ ಅದ್ಭುತ ತೇಜಸ್ಸಿಗೆ ಮಾರುಹೋಗಿ ಧಾರವಾಡದ ಮೃತ್ಯುಂಜಯಪ್ಪಗಳು ತಮ್ಮ ಜೀವಿತಾವಧಿಯವರೆಗೆ ಶ್ರೀಗಳವರ ಉನ್ನತಾದರ್ಶವನ್ನು ಮನಸಾರೆ ಕೊಂಡಾಡುತ್ತಿದ್ದರು.

## ಶ್ರೀ ಮೃತ್ಯುಂಜಯಪ್ಪಗಳು ಒಮ್ಮೆ ಶ್ರೀ ಕ್ಷೇತ್ರಕ್ಕೆ ದಯಮಾಡಿಸಿದಾಗಿನ ಒಂದು ಹೃದಯಸ್ಪರ್ಶೀ ಪ್ರಸಂಗ

ಧಾರವಾಡದ ಮೃತ್ಯುಂಜಯಪ್ಪಗಳು ಒಮ್ಮೆ ಎಡೆಯೂರು ಶ್ರೀ ತೋಂಟದ ಸಿದ್ಧಲಿಂಗೇಶ್ವರ ದರ್ಶನಕ್ಕೆಂದು ತಮ್ಮೊಡನೆ ಇಪ್ಪತ್ತು ಮೂವತ್ತು ಜನ ವಿರಕ್ತ ಮೂರ್ತಿಗಳೊಡನೆ ದಯಮಾಡಿಸಿ ಗದ್ದುಗೆಯ ದರ್ಶನ ಪಡೆದು, ಸಿದ್ಧಲಿಂಗೇಶ್ವರರ ಪ್ರತ್ಯಕ್ಷ ಪ್ರತಿನಿಧಿಯಂತಿರುವ ಶ್ರೀ ಶಿವಕುಮಾರ ಸ್ವಾಮಿಗಳವರ ದರ್ಶನಾಶೀರ್ವಾದ ಪಡೆದು ಬರೋಣವೆಂದು ಎಲ್ಲರನ್ನು ಕರೆದುಕೊಂಡು ನೂರಾರು ಜನ ಭಕ್ತಮಹೇಶ್ವರರೂ ಸಮೇತವಾಗಿ ದಯಮಾಡಿಸಿದರು. ಆ ತಂಡದಲ್ಲಿ 20-30 ಜನ ಮೂರ್ತಿಗಳೂ ಅಲ್ಲದೆ ನೂರಾರು ಜನ ಭಕ್ತಾದಿಗಳು ಇದ್ದರು. ರಾತ್ರಿ 8 ಘಂಟೆ ಸುಮಾರಿಗೆ ಶ್ರೀ ಕ್ಷೇತ್ರಕ್ಕೆ ದಯಮಾಡಿಸಿದರು. ಆ ಸಮಯದಲ್ಲಿ ಶ್ರೀಗಳು ಮಠದಲ್ಲಿರಲಿಲ್ಲ. ಗ್ರಾಮಾಂತರ ಪ್ರದೇಶದಲ್ಲಿ ಭಿಕ್ಷಾಟನೆಗಾಗಿ ಸಂಚರಿಸುತ್ತ ಅಲ್ಲಿಯೇ ಬಿಡಾರಮಾಡಿದ್ದರು. ಶ್ರೀಗಳವರು ಮಠದಲ್ಲಿಲ್ಲವೆಂದು ಮೃತ್ಯುಂಜಯಪ್ಪಗಳಿಗೆ ಗೊತ್ತಾದೊಡನೆ ಅವರ ಮುಖದಿಂದ ನಿಟ್ಟುಸಿರಿನೊಡನೆ. "ಸ್ವಾಮಿಯ ದರ್ಶನಾಶೀರ್ವಾದಕ್ಕೆಂದು ಬಂದದ್ದಾಯಿತು. ಆದರೆ ಸ್ವಾಮಿಯ ಕೃಪೆ ಲಭ್ಯವಾಗಲಿಲ್ಲವಲ್ಲಾ" ಎಂಬ ಕೊರಗಿನ ನುಡಿ ಆ ಮಹಾಕಾರಣಿಕರ ಮುಖಾರವಿಂದ ನಿರ್ಗಮನವಾಯಿತು. "ಆಗಲಿ ಈಗ ಎಲ್ಲರೂ ಇಲ್ಲಿಯೇ ಪವಡಿಸಿ ಬೆಳಿಗ್ಗೆ ಎದ್ದು ಹೊರಡೋಣ" ಎಂದು ಹೇಳಿ ಪವಡಿಸಿದರು. ಮಠದಲ್ಲಿದ್ದವರು ಸ್ನಾನ ಶಿವಪೂಜೆಗಳನ್ನು ಮಾಡಿಸಲು ಮಾಡಿದ ಪ್ರಯತ್ನಗಳೆಲ್ಲ ವಿಫಲವಾದುವು. ಆದರೆ ಈಶ್ವರೇಚ್ಛೆ—20–25 ಮೈಲು ದೂರದಲ್ಲಿದ್ದ ಹಳ್ಳಿಯೊಂದರಿಂದ ಶ್ರೀ ಶಿವಕುಮಾರ ಸ್ವಾಮಿಗಳು ರಾತ್ರಿಯ ತಮ್ಮ ಹಳ್ಳಿಯ ಭಕ್ತರಮನೆಯಲ್ಲಿನ ಪೂಜೆ ಮುಗಿಸಿಕೊಂಡು, ಮಠಬಿಟ್ಟು ಬಹುದಿನವಾಗಿದೆ, ಪುನಃ ನಸುಕಿನಲ್ಲಿ ಬಂದರಾಯಿತೆಂದು ಆ ಹಳ್ಳಿಯಿಂದ ಹೊರಟು ರಾತ್ರಿ 12-12½ ಘಂಟೆ ಸುಮಾರಿಗೆ ಶ್ರೀ ಮಠಕ್ಕೆ ಬಂದುಬಿಟ್ಟರು. ಆ ಹಳ್ಳಿಯಲ್ಲಿ ಬೆಳಗಿನ ಪೂಜೆಗೂ ಒಪ್ಪಿಕೊಂಡಿದ್ದರು. 12–12½ ಘಂಟೆಗೆ ಮಠಕ್ಕೆ ಬಂದೊಡನೆ ಮೃತ್ಯುಂಜಯಪ್ಪಗಳು ಬಂದ ಸುದ್ದಿ ಶ್ರೀಗಳವರಿಗೆ ಅರಿಕೆಯಾಗಿ ಅತೀವಾನಂದಭರಿತರಾದರು. ಬೆಳಗಾದಮೇಲೆ ಮೃತ್ಯುಂಜಯಪ್ಪಗಳು ತಮ್ಮ ಹಿಂದೆ ಬಂದ ಸಮಸ್ತ ಮೂರ್ತಿಗಳೊಡನೆ ಭಕ್ತಾದಿಗಳೊಡನೆ ಶ್ರೀಗಳವರ ದರ್ಶನ ಪಡೆದರು. ಆಗಿನ ಮಹಾಕಾರಣಿಕರಾದ ಅವರಿಬ್ಬರ ಮುಖದಲ್ಲುಂಟಾದ ಅಪೂರ್ವ ಸಂತೋಷದ ಸನ್ನಿವೇಶವನ್ನು ನೆನೆದಾಗ ಇಂಥ ದೃಶ್ಯವನ್ನು ನೋಡಲು ಪುಣ್ಯಬೇಕೆನ್ನಿಸುತ್ತದೆ.

ಹಳೆಯ ಮಠದಲ್ಲಿ ಮೃತ್ಯುಂಜಯಪ್ಪಗಳಿಗೂ ಅವರ ಹಿಂದೆ ಬಂದ ವಿರಕ್ತ ಮೂರ್ತಿಗಳಿಗೂ ಸ್ನಾನ ಪೂಜಾ ಪ್ರಸಾದ ಕಾರ್ಯಗಳಿಗೆ ಮಿಂಚಿನ ವೇಗದಲ್ಲಿ ಸಿದ್ಧತೆಯಾಗಿಹೋಯಿತು. ಎಲ್ಲರೂ ಸ್ನಾನಮಾಡಿ ಶಿವಪೂಜೆ ಮುಗಿಯಿತು. ಇನ್ನು ಪಾದಪೂಜೆಗೆ ಕುಳಿತುಕೊಳ್ಳಬೇಕು. ಸಿದ್ಧಗಂಗಾ ಶ್ರೀಗಳು ಮೃತ್ಯುಂಜಯಪ್ಪಗಳಿಗೆ ಸಾಷ್ಟಾಂಗ ಹಾಕಿ "ನಾನು ತಮ್ಮ ಪಾದಪೂಜೆ ಮಾಡಿಕೊಳ್ಳಬೇಕು ಗದ್ದುಗೆ ಏರಿರೆಂದು" ಕೇಳಿಕೊಂಡರು. ಆ ಕೂಡಲೇ ಮೃತ್ಯುಂಜಯಪ್ಪಗಳು ಪ್ರತಿ ಸಾಷ್ಟಾಂಗಹಾಕಿ, "ಬುದ್ಧಿ, ನಾನು ಧಾರವಾಡದಿಂದ ಶ್ರೀಸ್ವಾಮಿಯ ದರ್ಶನಾಶೀರ್ವಾದಕ್ಕೆ ಬಂದಿರುವ ಭಕ್ತ ನನಗೆ ಬೇಕಾದುದು ಸ್ವಾಮಿಯ ತೀರ್ಥ ಪ್ರಸಾದ ಆದ್ದರಿಂದ ನನ್ನಮೇಲೆ ಕೃಪೆಮಾಡಿ ತಾವೇ ಗದ್ದುಗೆ ಏರಬೇಕು. ಭಕ್ತನಾದ ನಾನು ತಮ್ಮ ಪಾದಪೂಜೆ ಪ್ರಸಾದ ಸ್ವೀಕಾರ ಮಾಡಬೇಕು" ಎಂದರು; ಸರಿ ಸಿದ್ಧಗಂಗಾ ಶ್ರೀಗಳು "ಸಾಧ್ಯವಿಲ್ಲ ತಾವು ದೊಡ್ಡವರು ತಮ್ಮ ಪ್ರಸಾದ ನನಗಾಗಬೇಕು" ನಾನೇ ಭಕ್ತಿಯಿಂದ ತಮ್ಮ ಪಾದಪೂಜೆ ಮಾಡಿಕೊಂಡು ಪ್ರಸಾದ ಪಡೆಯುತ್ತೇನೆ ಎಂದರು. ಮೃತ್ಯುಂಜಯಪ್ಪಗಳು ತಮ್ಮ ಹಿಂದೆ ಬಂದಿರುವ ಎಲ್ಲ ಮೂರ್ತಿಗಳಿಗೆ ಮತ್ತು ಭಕ್ತರಿಗೆ "ಇನ್ನು ಹೊರಡಿರಿ ನನ್ನ ಭಕ್ತಿಯಲ್ಲೇ ಏನೋ ದೋಷವಿದೆ ಸ್ವಾಮಿಯ ಕೃಪೆಯಾಗಲಿಲ್ಲ. ಸ್ವಾಮಿ ನನ್ನಮೇಲೆ ಕೃಪೆಯಿಟ್ಟಿದ್ದರೆ ನನಗೆ ತೀರ್ಥ ಪ್ರಸಾದ ಸಿಗುತ್ತಿತ್ತು" ಎನ್ನುವ ಮಾತು ಕೇಳುತ್ತಲೇ



ರೋಮಾಂಚನಗೊಂಡು ಸಾತ್ವಿಕ ಭಾವಾವೇಶ ಪೂರ್ಣಗೊಂಡ ಶ್ರೀ ಶಿವಕುಮಾರ ಸ್ವಾಮಿಗಳು ಪ್ರಕೃತ ಪ್ರಸಂಗದ ಅಭೂತಪೂರ್ವ ಸನ್ನಿವೇಶವನ್ನು ಅರ್ಥಮಾಡಿಕೊಂಡು ಒಮ್ಮೆಲೆ ಗದ್ದುಗೆ ಏರಿದರು. ಸಾಕ್ಷಾತ್ ಮೃತ್ಯುಂಜಯಪ್ಪಗಳು ಪಾದಪೂಜೆಮಾಡಿ ತೀರ್ಥ ಪ್ರಸಾದ ಪಡೆದರು. ಎಲ್ಲ ಮೂರ್ತಿಗಳು ತಾಮುಂದು ಎಂದು ತೀರ್ಥಪ್ರಸಾದ ಪಡೆದರು.

ಈ ಸನ್ನಿವೇಶವನ್ನು ನೆನೆದಾಗಲೆಲ್ಲ ರೋಮಾಂಚನವೇಳುತ್ತದೆ. ಮೃತ್ಯುಂಜಯಪ್ಪಗಳ ಅಸಾಧಾರಣ ಭಕ್ತಿ ಭಾವದ ಈ ನಡೆವಳಿಕೆಯ ಹಿನ್ನೆಲೆಯಲ್ಲಿ ಇನ್ನೊಂದು ಉದ್ದೇಶವೂ ಇತ್ತು. ಪ್ರಕೃತ ಅದರ ವಿವರಣೆ ಅನಾವಶ್ಯಕ. ಮೃತ್ಯುಂಜಯಪ್ಪಗಳ ಹಾಗೆ ಮಹಾದಾರ್ಶನಿಕರೂ ವಿದ್ವಾಂಸರೂ ಆದ ಅರಮನೆ ಪಂಚಗವಿ ಮಠಾಧ್ಯಕ್ಷ ಗೌರೀಶಂಕರ ಮಹಾಸ್ವಾಮಿಗಳೂ ಶ್ರೀಗಳವರಲ್ಲಿ ವಿಶೇಷ ಭಕ್ತಿ ಭಾವವನ್ನಿಟ್ಟಿದ್ದರು. ಪದೇ ಪದೇ ನೀವು ಮಹಾ ದೊಡ್ಡವರು ಸ್ವಾಮಿ, ನಿಮ್ಮದು ದೊಡ್ಡ ಸಂಸಾರ ಎಂದು ಹೃದಯಾರ ಕೊಂಡಾಡುತ್ತಿದ್ದರು. ಹೀಗೆ ಶ್ರೀ ಸಿದ್ಧಗಂಗಾ ಶಿವಯೋಗಿಗಳವರ ಅಗಣ್ಯ ಪುಣ್ಯ ಚರಿತ್ರೆಯ ಬೃಹತ್ತು ಮಹತ್ತುಗಳ ವಿವರಣೆಗೆ ಕಾಲದೇಶವಾದೀತು. ಅವರ ಜೀವನದಲ್ಲಿ ನಡೆದುಹೋದ ಅನಂತ ಘಟನೆಗಳ ಹಿನ್ನೆಲೆಯಲ್ಲಿ ಅಗಾಧವಾದ ಮಹಿಮಾಪೂರ್ಣ ಶಕ್ತಿಯ ರಕ್ಷಾ ಕವಚವಿದೆ. ಎಂಥ ದುರ್ಧರ ಪ್ರಸಂಗದಲ್ಲೂ ಅವರನ್ನು ಆ ಶಕ್ತಿ ನಿರ್ಬಾಧಿತವಾಗಿ ರಕ್ಷಣೆ ಮಾಡಿದೆ. ಅನೇಕ ಅಗ್ನಿ ಪರೀಕ್ಷೆಗಳಲ್ಲಿ ಅವರನ್ನು ಮೇಲೆತ್ತಿ ಹಿಡಿದಿದೆ. ಉದ್ದಾನ ಶಿವಯೋಗಿಯ ಅನಂತ ಕೃಪಾವರ್ಷಧಾರೆಯಲ್ಲಿ ಅಭಿಷೇಕಗೊಂಡವರಿಗೆ ಇನ್ನೆತ್ತಣ ಲೌಕಿಕ ಬಂಧಗಳು ಮುತ್ತಲು ಸಾಧ್ಯ !

## ವಿರಕ್ತ ಜೀವನಕ್ಕೆ ಅನೇಕ ಅಗ್ನಿ ಪರೀಕ್ಷೆಗಳುಂಟು

ಜಂಗಮದೀಕ್ಷೆ ಬಡವ ಕುಡಿಯುವ ಗಂಜಿಯಲ್ಲ ಎನ್ನುತ್ತಾರೆ ಶ್ರೀಗಳವರು. ಆ ಲಾಂಛನ ಧರಿಸಿದ ಮರುಕ್ಷಣದಲ್ಲಿ ಶಿವನೇ ನಮ್ಮನ್ನು ಅನೇಕ ಒರೆಗಲ್ಲಿಗೆ ಹಚ್ಚಿ ತಿಕ್ಕುತ್ತಾನೆ. ಆತನು ನಮ್ಮನ್ನು ಕೊಲ್ಲುವೆನೆನ್ನುತ್ತಿದ್ದಾಗಲೆಲ್ಲ ನಾವು ಸತ್ಯವೆಂಬ ಕೊರಳಗಿನಿಂದ ಗೆಲ್ಲುವೆನೆಂದು ಮಾರುತ್ತರ ಕೊಡುವಷ್ಟು ಸಮರ್ಥರಾಗದಿದ್ದರೆ, ಲಾಂಛನ ಕೇವಲ ಹಾಸ್ಯಾಸ್ಪದ. ಕೊಲುವೆನೆಂದು ದೇವ ನುಡಿದರೆ ಗೆಲುವೆನೆಂದು ಭಕ್ತನು ಮಾರ್ನುಡಿ ನುಡಿಯಬೇಕಾಗುವುದು. ಇನ್ನೊಬ್ಬರ ಮೇಲೆ ವೃಥಾ ನಿಷ್ಠುರ ಹೇರಬೇಕಾಗಿಲ್ಲ. ಇನ್ನೊಬ್ಬರ ಮೂಲಕ ಬರುವ ಇಂಥ ಪ್ರಸಂಗಗಳು ದೇವನೊಡ್ಡಿದ ಬಲೆ. ಆ ಬಲೆಯಲ್ಲಿ ನಮ್ಮನ್ನು ಬೇಟೆಯ ಪ್ರಾಣಿಯನ್ನು ಸಿಕ್ಕಿಸಿದಹಾಗೆ ಸಿಕ್ಕಿಸುತ್ತಾನೆನ್ನುತ್ತಾರೆ. ದೇವನು ಒಡ್ಡಿದ ಬಲೆಯ ದಾರವನ್ನು ಹರಿಯುವ ಸಾಮರ್ಥ್ಯವನ್ನು ಆ ದೇವನ ಕೃಪೆಯಿಂದಲೇ ಪಡೆಯಬೇಕು. ಅವನ ಕೃಪೆಯಿಂದಲೇ ಅವನೊಡ್ಡಿದ ಎಲ್ಲ ಬಲೆಯ ದಾರಗಳನ್ನು ಕತ್ತರಿಸಿಹಾಕಬೇಕು. ಅದಕ್ಕಾಗಿ ಅವನನ್ನು ಕುರಿತ ಕ್ರಮವಾದ ತಪಸ್ಯೆಯ ಅವಶ್ಯಕತೆಗೆ ಎಷ್ಟು ವಿವರಿಸಿದರೂ ಕಡಿಮೆಯೆ; ಎನ್ನುತ್ತಾರೆ ಶ್ರೀಗಳವರು.

## ಶ್ರೀಗಳವರಿಗೆ ದೇವನೊಡ್ಡಿದ ದೊಡ್ಡ ಬಲೆಯೊಂದರ ಪ್ರಸಂಗ

ಶ್ರೀಗಳವರು ತಮ್ಮ ಗುರುಗಳಾದ ಉದ್ದಾನ ಸ್ವಾಮಿಗಳವರ ಕಾಲದಿಂದಲೂ ನಡೆದು ಬಂದ ಉದ್ದರಣೆ ಬರೆಯುವ ಸಂಪ್ರದಾಯವಿಟ್ಟುಕೊಂಡಿರುತ್ತಾರೆ. ವೈಜ್ಞಾನಿಕ ಯುಗದವರು ಅದರ ಸತ್ಪರಿಣಾಮವನ್ನು ಒಪ್ಪಲಿ ಬಿಡಲಿ. ಆದರೆ ಶಿವಯೋಗಿಯ ಸ್ವಹಸ್ತಲಿಖಿತ ಶಿವಪಂಚಾಕ್ಷರಿಯುಕ್ತ ಉದ್ದರಣೆ (ಯಂತ್ರ)ಯ ಬಂಧನದಿಂದ ಹಲವಾರು ಮಾನಸಿಕ ದೈಹಿಕ ಸತ್ಪರಿಣಾಮಗಳ ಬಗೆಗೆ ಸರ್ವಜನರಲ್ಲೂ ವಿಶೇಷ ನಂಬುಕೆಯಿದೆ ಒಂದುವೇಳೆ ಈ ಕ್ರಿಯೆಯನ್ನು ಶ್ರೀಗಳವರು ಕೈ ಬಿಡಲು ಮನಸ್ಸು ಮಾಡಿದರೂ ಜನ ಮಾತ್ರ ಕೈ ಬಿಡುವಂತಿಲ್ಲ. ಅಷ್ಟರಮಟ್ಟಿಗೆ ಅದರ ಪ್ರಚಾರವಾಗಿದೆ. ಶ್ರೀಗಳವರ ಅನೇಕ ಕಾಯಕಗಳಲ್ಲಿ ಅದೂ ಒಂದು ಈ ಉದ್ದರಣೆ ಬರೆಯುವ ಸ್ಥಾನವೆಂದರೆ ದಾಸೋಹ ಮಠದ ಮುಂದಿನ ಮಂಚ. ಅಲ್ಲಿ ಮಂಚದ ಸುತ್ತಮುತ್ತ ಹೆಣ್ಣು, ಗಂಡು, ಮಕ್ಕಳು ಮರಿಗಳು ಅತ್ಯಂತ ಆತ್ಮೀಯತೆಯಿಂದ ಶ್ರೀಗಳವರನ್ನು ಸುತ್ತುವರಿದಿರುತ್ತಾರೆ. ಇನ್ನೊಂದು ಕಡೆ ಅಕ್ಕಿ ರಾಗಿಗಳನ್ನು

ಹಸನು ಮಾಡುವ ಕಾರ್ಯದಲ್ಲಿ 10–12 ಜನ ಹೆಣ್ಣು ಮಕ್ಕಳು ತೊಡಗಿರುತ್ತಾರೆ. ಕೆಳಗಿನ ಕಟ್ಟೆಯ ಮೇಲೆ ನೂರಾರು ಜನ ಊಟ ಮಾಡುತ್ತಿರುತ್ತಾರೆ. ಆಗಾಗ ಪಾರಿವಾಳಗಳ ಗುಂಪು ಶ್ರೀಗಳವರ ಮಂಚದ ಮೇಲೆ ಪೂರ್ಣ ಸ್ವಾತಂತ್ರ್ಯದಿಂದ ಕುಳಿತು ಕಾಳು ಕಡ್ಡಿಗಳನ್ನು ತಿನ್ನುತ್ತಿರುತ್ತವೆ. ಇಂಥ ಅಪೂರ್ವ ಸ್ವರ್ಗೀಯ ಸೌಂದರ್ಯ ಅನ್ಯತ್ರ ಸಿಗುವುದು ದುರ್ಲಭ. ಇಂಥ ಸನ್ನಿವೇಶದಲ್ಲಿರುವ ಶ್ರೀಗಳವರ ಹತ್ತಿರ ಒಮ್ಮೆ ಈಗ್ಗೆ 15–16 ವರ್ಷಗಳ ಹಿಂದೆ ಒಬ್ಬ ಸ್ತ್ರೀ ಬಂದು ನಮಸ್ಕಾರ ಮಾಡಿದಳು. ಅವಳು 30ರ ಹರೆಯ ಒಳ್ಳೆಯ ಸ್ಫುರದ್ರೂಪಸಿ. ಜನಗಳ ಮಧ್ಯದಲ್ಲಿ ನುಗ್ಗಿ ಬಂದು ನಮಸ್ಕಾರ ಮಾಡಿದ ಅವಳನ್ನು ಕುರಿತು ಶ್ರೀಗಳು ಎಲ್ಲಿಂದ ಬಂದಿರಿ. ಊಟ ಮಾಡಿದಿರಾ, ಇತ್ಯಾದಿ ಸಮಯೋಚಿತ ಮಾತುಗಳಿಂದ ಮಾತನಾಡಿಸಿದ ಮೇಲೆ ಅವಳು ಸ್ವಲ್ಪ ಹೊತ್ತು ಸುಮ್ಮನಿದ್ದು, "ಸ್ವಾಮಿ, ನಾನು ಈ ಮಠದಲ್ಲಿಯೇ ಇರಬೇಕೆಂದು ಬಂದಿದ್ದೇನೆ" ಎಂದಳು. ಶ್ರೀಗಳವರು "ಅಮ್ಮಾ, ಮಠಕ್ಕೆ ನೀವು ಬರಬಹುದು ಸೇವಾದಿಕಾರ್ಯ ಮುಗಿಸಿಕೊಂಡು ನಿಮ್ಮ ಊರಿಗೆ ಹೋಗಬೇಕೆ ವಿನಾ ಮಠದಲ್ಲಿ ಇರಲು ಅವಕಾಶವಿಲ್ಲ." ಎನ್ನಲು ಅವಳು "ಸ್ವಾಮಿ, ನನ್ನ ಹತ್ತಿರ ಹಲವಾರು ತೊಲ ಬಂಗಾರವಿದೆ, ದುಡ್ಡಿದೆ. ಅವೆಲ್ಲವನ್ನೂ ತಮಗರ್ಪಿಸಿ ನಿಮ್ಮ ಪಾದಸೇವೆ ಮಾಡಿಕೊಂಡು ಇಲ್ಲಿಯೇ ಇರಲು ಅವಕಾಶ ಕೊಡಿ'' ಎನ್ನಲು, ಶ್ರೀಗಳವರು "ಇಲ್ಲಿ ನಾವು ನಿಮ್ಮಿಂದ ಪಾದಸೇವೆ ಮಾಡಿಸಿಕೊಳ್ಳಬೇಕಾದುದಿಲ್ಲ. ಅಲ್ಲದೆ ಗೃಹಿಣಿಯಾಗಿರುವ ನೀವು ನಿಮ್ಮ ಐಶ್ವರ್ಯ ಬಂಗಾರ ಇತ್ಯಾದಿಗಳನ್ನು ನಿಮ್ಮ ಮನೆತನದ ಬಳಕೆಗೆ ಇಟ್ಟುಕೊಂಡು ಜೀವಿಸಬೇಕಲ್ಲದೆ ನಮಗೆ ಕೊಡಬಾರದು" ಎಂದರು. ಅವಳು ದುಷ್ಟೋದ್ದೇಶಪೂರ್ಣವಾದ ಅನೇಕ ಮಾತುಗಳಿಗೆ ಪ್ರಾರಂಭಿಸಿದಳು. ಅವಳ ಮಾತಿನಲ್ಲಿ ಗುಹ್ಯಲಂಪಟತ್ವವು ಧ್ವನಿತವಾಗುತ್ತಿತ್ತು. ಅವಳಿಂದ ಈ ಮಾತು ಬರುತ್ತಿದ್ದ ಹಾಗೆಯೇ ಶ್ರೀಗಳವರು ಅವಳಿಗೆ ಯಾವ ಪ್ರತ್ಯುತ್ತರವನ್ನೂ ಕೊಡದೆ, ದುಷ್ಟೋದ್ದೇಶಪೂರ್ಣಳಾದ ಅವಳನ್ನು ಹೊರಳಿಯೂ ನೋಡದೆ, ಹಳೆ ಮಠದತ್ತ ನಡೆದು ಅಲ್ಲಿ ಸ್ನಾನ ಶಿವಪೂಜೆಯಲ್ಲಿ ಮಗ್ನರಾಗಿಬಿಟ್ಟರು. ಹೋಗುವಾಗ ಮಠದ ಒಬ್ಬ ವ್ಯವಸ್ಥಾಪಕರನ್ನು ಕರೆದು ಆ ಸ್ತ್ರೀಗೆ ಊಟಮಾಡಿಸಿ ಮಠ ಬಿಟ್ಟು ಹೊರಡುವಂತೆ ತಿಳಿಸಿರೆಂದು ಅಪ್ಪಣೆ ಮಾಡಿದರು. ಇಂಥ ಒಂದು ಘಟನೆ ಶ್ರೀಗಳವರ ಜೀವನದಲ್ಲಿ ಆದುದು ಇದೇ ಒಂದು ಸಲ. ಪರಮಾತ್ಮನ ಅನಂತ ಲೀಲೆಯನ್ನು ನೆನೆಯುತ್ತ ದೇವನೊಡ್ಡಿದ ಈ ಬಲೆಯ ಹಗ್ಗಗಳನ್ನು ಕತ್ತರಿಸಿ ಕೊನೆಗೆ ಅವನ ಕಾರುಣ್ಯವನ್ನೇ ಕೇಳಿ ಪಡೆದು ನಿಶ್ಚಿಂತರಾದರು. ಪುರಾಣಗಳಲ್ಲಿ ಬರುವ ಇಂಥ ಅನೇಕ ಪ್ರಸಂಗಗಳನ್ನು ನೆನೆಯುತ್ತ ಲೋಕ ವೃತ್ತದ ಜಿಹ್ವಾಗುಹ್ಯ ಚಾಪಲ್ಯದ ಅಗಾಧ ದುಷ್ಪರಿಣಾಮಗಳಲ್ಲಿ ಇಂಥ ಅನೇಕ ಪ್ರಸಂಗಗಳು ತಪಸ್ವಿಗಳಿಗೆ ಉಂಟಾಗುತ್ತಿರುತ್ತವೆ. ಶಿವಕಾರುಣ್ಯದ ಪೂರ್ಣ ರಕ್ಷಾ ಕವಚ ಧರಿಸಿದ ಅದ್ಭುತ ಚೇತಸ್ಸುಗಳಿಗೆ ಇಂಥ ಪ್ರಸಂಗಗಳಿಂದ ಯಾವ ಬಾಧಕವೂ ಉಂಟಾಗಲಾರದು ಆದರೆ ಅಂಥ ದುರ್ಧರ ಪ್ರಸಂಗಗಳಿಂದ ಶಿವನೇ ಪಾರುಗೊಳಿಸಬೇಕಲ್ಲದೆ ಅನ್ಯಥಾ ಇಲ್ಲ. ಉದ್ದಾನ ಶಿವಯೋಗಿಗಳವರ ಕೃಪಾಶೀರ್ವಾದ ರಕ್ಷಾಕವಚ ತೊಟ್ಟ ಶ್ರೀಗಳವರಿಗೆ ಇಂಥ ಪ್ರಸಂಗಗಳು-ಯಾವ ಜಯವನ್ನು ತಾನೆ ಗಳಿಸಲು ಶಕ್ತಿಯೀಯಲಾರವು ? ತ್ರಿಕಾಲದಲ್ಲಿ ಶ್ರದ್ಧಾಭಕ್ತಿ ವಿಶ್ವಾಸದಿಂದ ಲಿಂಗಲೀಲಾವಿನೋದ ಚಿತ್ತರಪ್ಪ ಯಾವ ಮಹಾತ್ಮರಿಗೆ ಈ ರೀತಿಯ ಭವಬಂಧನವಾಗಲು ಶಕ್ಯ ?

ಶ್ರೀ ಮಠದ ಘನತೆ ಗೌರವಗಳು ಅದರ ಸಾರ್ವಕಾಲಿಕ ಲೋಕೋದ್ಧಾರೈಕ ದೃಷ್ಟಿಯ ಪರಿಣಾಮವಾಗಿ ಸರ್ವವರ್ಗದ ಜನತೆಯನ್ನೂ ಆಕರ್ಷಿಸಿವೆ. ಭಿಕ್ಷುಕ ಮೊದಲ್ಗೊಂಡು ಲಕ್ಷಾಧೀಶನ ವರೆಗೆ ಆಳು ಮೊದಲ್ಗೊಂಡು ಅರಸನವರೆಗೆ ಎಲ್ಲರೂ ಅಲ್ಲಿಗೆ ಆಗಮಿಸಿ ಶ್ರೀ ಸ್ವಾಮಿಗಳವರ ದರ್ಶನಾಶೀರ್ವಾದ ಪಡೆದು ಪ್ರಸಾದ ಪ್ರಸನ್ನ ಪರಿಣಾಮಗಳಾಗಿ ಹೋಗಿದ್ದಾರೆ. ಜೀವನದ ದುರ್ಧರ ಪ್ರಸಂಗಗಳಿಂದ ಜರ್ಜರಿತರಾದವರು, ಅಶಾಂತಿಯಲ್ಲಿ ಮುಳುಗಿ ದಿಕ್ಕು ತೋಚದವರು ದೀನರು, ದಲಿತರು ಆ ಸ್ಥಾನಕ್ಕೆ ಬಂದು ಪ್ರಭಾವಿತರಾಗಿ ತಮ್ಮ ಕಷ್ಟಗಳನ್ನು ಮರೆತಿದ್ದಾರೆ. ಈಗಲೂ ಮರೆಯುತ್ತಿದ್ದಾರೆ. ಅನಾರೋಗ್ಯದಿಂದ ನರಳುವವರು ಅಲ್ಲಿ ಬಂದು ಕೆಲ ದಿನಗಳಿದ್ದು ಆರೋಗ್ಯವಂತರಾಗಿದ್ದಾರೆ. ಇದು ನೆಲದ ಗುಣ. ನೆಲಕ್ಕೆ ಆ ಗುಣ ಅಲ್ಲಿನ ಪುಣ್ಯ ಜೀವಿಗಳೆರೆದ ಪುಣ್ಯ ಫಲ.



## ಶ್ರೀಮಠಕ್ಕೆ ಆಗಮಿಸಿ ಮನವಾರೆ ಕೊಂಡಾಡಿದ ಭಾರತ ಪ್ರಮುಖ ವ್ಯಕ್ತಿಗಳು

ಸಿದ್ಧಗಂಗಾ ಮಠದ ಕೀರ್ತಿ ಬಹುಕಾಲದಿಂದಲೂ ದಿಗಂತ ವಿಶ್ರಾಂತವಾದುದು. "ಸಿದ್ಧಗಂಗೆಯ ಊಟ-ಶಿವಗಂಗೆಯ ನೋಟ"ಎಂಬ ಗಾದೆ ಜನಜನಿತ. ಮಠದ ಕೀರ್ತಿ ವಿಶೇಷವನ್ನೂ ಅದರ ಲೋಕೋಪಕಾರಕ ಕಾರ್ಯ ಬಾಹುಳ್ಯವನ್ನೂ ಕೇಳಿ ಭಾರತದ ಮತ್ತು ಅನ್ಯ ದೇಶೀಯರು ಬಂದು ಮನವಾರೆ ಕೊಂಡಾಡಿದ್ದಾರೆ. ಒಮ್ಮೆ ಪಾಶ್ಚಾತ್ಯ ಪ್ರವಾಸಿಗಳು ಬಂದು ಮಠದ ಕಾರ್ಯಕಲಾಪಗಳನ್ನು ಕಂಡು ಮಠದ ಉತ್ಪತ್ತಿ ಖರ್ಚು ವೆಚ್ಚಗಳನ್ನು ವಿಚಾರಿಸಿ, ಆಶ್ಚರ್ಯದಿಂದ ಮಠಕ್ಕೆ ಸಾಲ ಇತ್ಯಾದಿಗಳು ಇಲ್ಲತಾನೆ? ಎಂದು ವಿಚಾರಿಸಿದ್ದುಂಟು. ಅವರು ಮಠದ ಪ್ರಚಾರ ದೊಡ್ಡ ಪ್ರಮಾಣದಿಂದ ಅಗತ್ಯವೆಂದು ಸೂಚಿಸಿದರು ಆದರೆ ಶ್ರೀಗಳವರು ಆ ವಿಷಯದಲ್ಲಿ ಉತ್ಸಾಹ ತೋರಲಿಲ್ಲ.

ಸಾಮಾನ್ಯವಾಗಿ ಶ್ರೀ ಮಠಕ್ಕೆ ಮೈಸೂರು ರಾಜ್ಯದ ಮಂತ್ರಿವರ್ಗ ಕಾಂಗ್ರೆಸ್ ಸಂಸ್ಥೆಯ ಪ್ರಮುಖರು ಆಗಮಿಸಿ ಶ್ರೀಗಳವರ ದರ್ಶನಾಶೀರ್ವಾದ ಪಡೆದು ಮಠದ ಕಾರ್ಯ ಕಲಾಪಗಳನ್ನೂ ಅಲ್ಲಿನ ಸರ್ವ ಧರ್ಮೀಯರ ಕ್ಷೇಮಾಭಿವೃದ್ಧಿಯ ಬಗೆಗೂ ಕೊಂಡಾಡಿದ್ದಾರೆ. ಹಿಂದೆ ದಿವಾನರಾಗಿದ್ದ ಮಿರ್ಜಾ ಇಸ್ಮಾಯಿಲ್, ರಾಮಸ್ವಾಮಿ ಮೊದಲಿಯಾರ್ ಮೈಸೂರು ಮಹಾರಾಜರಾದ ಶ್ರೀ ಜಯಚಾಮರಾಜ ಒಡೆಯರ್ ಅವರುಗಳು ಬಂದು ದರ್ಶನಾಶೀರ್ವಾದ ಪಡೆದಿದ್ದಾರೆ. ರಾಷ್ಟ್ರಾಧ್ಯಕ್ಷ ಬಾಬು ರಾಜೇಂದ್ರ ಪ್ರಸಾದ್, ಪಿ. ಎಸ್. ಪಿ. ಮುಖಂಡ ಆಚಾರ್ಯ ಕೃಪಲಾನಿ, ಆರ್. ಆರ್. ದಿವಾಕರ, ಪಂಜಾಬಿನ ಗವರ್ನರ್ ಡಿ ಸಿ. ಪಾವಟೆ, ಸದ್ಯದ ಕೇಂದ್ರದ ಶಿಕ್ಷಣ ಮಂತ್ರಿ ವಿ. ಕೆ. ಆರ್, ವಿ. ರಾವ್, ಕೆ. ಸಿ. ರೆಡ್ಡಿ, ಎಸ್. ನಿಜಲಿಂಗಪ್ಪನವರೇ ಮೊದಲಾದವರು ಕ್ಷೇತ್ರದ ಸಮಸ್ತ ಕಾರ್ಯಕ್ರಮಗಳನ್ನು ಕಂಡು ಮನವಾರೆ ಹೊಗಳಿದ್ದಾರೆ. ಇವರಲ್ಲದೆ ಶೃಂಗೇರಿ ಜಗದ್ಗುರು ಪೀಠದ ಶ್ರೀ ಅಭಿನವ ವಿದ್ಯಾತೀರ್ಥ ಸ್ವಾಮಿಗಳವರು ಶ್ರೀ ಮಠಕ್ಕೆ ದಯಮಾಡಿಸಿ ಶ್ರೀಗಳ ಅದ್ಭುತವಾದ ಈ ಯುಗದ ಪವಾಡವನ್ನು ಕಂಡು ಕೊಂಡಾಡಿ ಶಾಲು ಜೋಡಿಗಳಿಂದ ಸನ್ಮಾನಿಸಿದರು (1962). ಇವರಲ್ಲದೆ ದ್ವೈತ ಸಂಪ್ರದಾಯದ ಉಡುಪಿ ಪೇಜಾವರ ಮಠದ ಶ್ರೀಗಳವರೂ, ಚಿತ್ರದುರ್ಗದ ಜಗದ್ಗುರು ಪೀಠದ ಶ್ರೀಗಳವರಾದ ಜಯದೇವ ಸ್ವಾಮಿಗಳೂ ಮಠಕ್ಕೆ ದಯಮಾಡಿಸಿ ಸ್ವಾಮಿಗಳವರ ಅನಂತ ಲೋಕೋದ್ಧಾರ ಕಾರ್ಯಕ್ಕಾಗಿ ಕೊಂಡಾಡಿದ್ದಾರೆ.

ಹೀಗೆ ಸರ್ವ ವಿಧದ ಪ್ರಮುಖ ಜನರ ಮನ್ನಣೆ, ಗೌರವಾದರಗಳಿಗೆ ಪಾತ್ರವಾಗಿರುವ ಸಿದ್ಧಗಂಗಾ ಮಠದ ಬೃಹತ್ತು ಮಹತ್ತುಗಳ ಬಗೆಗೆ ಎಷ್ಟು ವಿವರಿಸಿದರೂ ಕಡಿಮೆಯೆ: ಶ್ರೀ ಶಿವಕುಮಾರ ಸ್ವಾಮಿಗಳವರ ದಿವ್ಯ ತಪೋಜೀವನ, ಕಾರ್ಯನಿಷ್ಠೆಯ ಫಲವಾಗಿ ಉತ್ತರೋತ್ತರ ಮಠದ ಕೀರ್ತಿ ಗೌರವಗಳು ಶತಾಧಿಕವಾಗಿ ಬೆಳೆದು ಬಾಳುವಲ್ಲಿ ಯಾವ ಅನುಮಾನವೂ ಇಲ್ಲ.

### ರಾಮಕೃಷ್ಣ ಪರಮಹಂಸರ ಉಪದೇಷ

ಪಂಚಾಂಗದಲ್ಲಿ ಇಪ್ಪತ್ತು ಮೂವತ್ತು ಹದಗಳ ಪ್ರಮಾಣದ ಮಳೆಗಳೆಲ್ಲಾ ಸೂಚಿಸಲ್ಪಟ್ಟಿದ್ದರೂ. ಅದನ್ನು ಎಷ್ಟು ಹಿಂಡಿದರೂ ಒಂದು ತೊಟ್ಟು ನೀರು ಬೀಳುವುದಿಲ್ಲ. ಹಾಗೆಯೇ ಶಾಸ್ತ್ರಗಳತುಂಬ ಉಪದೇಶವಿದ್ದರೂ, ಕೇವಲ ಅದನ್ನು ಓದುವುದರಿಂದ ಜ್ಞಾನವಾಗುವುದಿಲ್ಲ. ಶಾಸ್ತ್ರಗಳಲ್ಲಿ ಹೇಳಿರುವ ಸಾಧನೆಗಳನ್ನು ಅನುಷ್ಠಾನ ಮಾಡಲೇಬೇಕು.

—oOo—

# ಇಹಪರದ ಪುಣ್ಯಪುರುಷ

—ಹೆಚ್. ಬಿ. ಪುಟ್ಟಸ್ವಾಮಪ್ಪ.

ಶ್ರೀಯುತ ಹೆಚ್. ಬಿ. ಪುಟ್ಟಸ್ವಾಮಪ್ಪನವರು, ಶ್ರೀ ಮ|| ನಿ| ಪ್ರ|| ಶಿವಕುಮಾರಸ್ವಾಮಿಗಳವರು ಪೂರ್ವಾಶ್ರಮದಲ್ಲಿ ವಿದ್ಯಾರ್ಥಿಗಳಾಗಿದ್ದಾಗ ಅವರ ಸಮಿಪವರ್ತಿಗಳಾಗಿದ್ದು ಶ್ರೀ ಶ್ರೀಗಳವರ ಆಪ್ತ ಮಿತ್ರರಲ್ಲೊಬ್ಬರಾಗಿದ್ದರು. ಶ್ರೀಯುತರು ಶ್ರೀಗಳವರ ವಿದ್ಯಾರ್ಥಿಜೀವನದಲ್ಲಿಯೇ ಎದ್ದುಕಾಣುತ್ತಿದ್ದ ಶ್ರದ್ಧಾ ಭಕ್ತಿವಿಶ್ವಾಸಗಳ ಬಗೆಗೆ, ಅಚಲ ನಿರ್ಧಾರಗಳ ಬಗೆಗೆ ಸೂಕ್ಷ್ಮವಾಗಿ ಅನೇಕ ಅಂಶಗಳನ್ನು ಈ ಲೇಖನದಲ್ಲಿ ನಿರೂಪಿಸಿದ್ದಾರೆ. ಶ್ರೀ ಪುಟ್ಟಸ್ವಾಮಪ್ಪನವರು ಅಸಿಸ್ಟೆಂಟ್ ಕಮಿಷನರ್ ಹುದ್ದೆಯಿಂದ ನಿವೃತ್ತರಾಗಿ ಬೆಂಗಳೂರಿನಲ್ಲಿ ವಾಸಿಸುತ್ತಿದ್ದಾರೆ.

—ಸಂ.

ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಪೂರ್ವಾಶ್ರಮದ ಹೆಸರು ಶ್ರೀ ಎಚ್. ಶಿವಣ್ಣನವರೆಂದು. ಅವರ ಸಹಪಾಠಿಯಾದ ನನಗೆ ಪ್ರಥಮ ಪರಿಚಯವಾದದ್ದು ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ. ನಾನು ಈ ಪುಟ್ಟ ಲೇಖನದಲ್ಲಿ ಹೇಳಬೇಕೆಂದಿರುವ ವಿಷಯವು 1927 ರಿಂದ 1930 ರ ವರೆಗಿನ ಮೂರು ವರ್ಷಗಳಿಗೆ ಸಂಬಂಧಪಟ್ಟುದು. ಈ ಮೂರು ವರ್ಷಗಳಲ್ಲಿಯೂ ನಾವಿಬ್ಬರೂ ಕಾಲೇಜಿನಲ್ಲಿ ಭೌತಿಕ ಶಾಸ್ತ್ರ ಮತ್ತು ಗಣಿತ ಶಾಸ್ತ್ರಗಳನ್ನು ಐಚ್ಛಿಕ ವಿಷಯಗಳನ್ನಾಗಿ ಆರಿಸಿಕೊಂಡು ಬಿ.ಎ. ತರಗತಿಯಲ್ಲಿ ಓದುತ್ತಿದ್ದೆವು. ಜೊತೆಯಾಗಿ ಕಾಲೇಜಿನಲ್ಲಿ ಓದುತ್ತಿದ್ದುದಲ್ಲದೆ ರಾವ್ ಬಹದ್ದೂರ್ ಗುಬ್ಬಿ ತೋಟದಪ್ಪನವರ ವಿದ್ಯಾರ್ಥಿ ನಿಲಯದಲ್ಲಿ ಒಂದೇ ರೂಮಿನಲ್ಲಿದ್ದುಕೊಂಡು ವ್ಯಾಸಂಗ ಮಾಡುತ್ತಿದ್ದೆವು. ಸಕಲೇಶಪುರದ ಜನತೆಗೂ ಮತ್ತು ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೂ ಬಹಳ ವರ್ಷಗಳಿಂದ ನಿಕಟ ಸಂಬಂಧವಿದೆ. ಸಕಲೇಶಪುರದ ಕಡೆಯಿಂದ ಅನೇಕ ಭಕ್ತರು ಆಗಾಗ್ಗೆ ಕ್ಷೇತ್ರಕ್ಕೆ ಬಂದು ಹೋಗುತ್ತಿರುತ್ತಾರೆ. ನಾನು ಸಕಲೇಶಪುರದ ಕಡೆಯವನಾದುದರಿಂದ ಶ್ರೀ ಕ್ಷೇತ್ರದ ಪರಿಚಯವು ನನಗೆ ಚೆನ್ನಾಗಿದ್ದಿತು. ಶ್ರೀ ಶಿವಣ್ಣನವರು (ಸ್ವಾಮಿಗಳವರ ಪೂರ್ವಾಶ್ರಮದ ಹೆಸರು) ಬೆಂಗಳೂರು ಸೆಂಟ್ರಲ್ ಕಾಲೇಜಿಗೆ ಬರುವ ಮೊದಲು ಕೆಲವು ಕಾಲ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿಯೇ ವ್ಯಾಸಂಗ ನಡೆಸುತ್ತಿದ್ದುದರಿಂದ ಅವರಿಗೂ ಕ್ಷೇತ್ರದ ಪರಿಚಯ ಚೆನ್ನಾಗಿತ್ತು. ನಮ್ಮ ವಿದ್ಯಾಭ್ಯಾಸದ ಕಾಲದಲ್ಲಿ ಮಹಾತಪಸ್ವಿಗಳಾದ ಶ್ರಿ ಶ್ರೀ ಉದ್ದಾನ ಶಿವಯೋಗೀಶ್ವರರು ಕ್ಷೇತ್ರಾಧ್ಯಕ್ಷರಾಗಿದ್ದರು. ಅವರ ಉತ್ತರಾಧಿಕಾರಿಗಳಾಗಿ ಆರಿಸಲ್ಪಟ್ಟಿದ್ದ ಶ್ರಿ ಮರುಳಾರಾಧ್ಯಸ್ವಾಮಿಗಳವರು ಶ್ರಿ ಉದ್ದಾನ ಶಿವಯೋಗೀಶ್ವರರ ನೇತೃತ್ವದಲ್ಲಿ ಕ್ಷೇತ್ರದ ಆಡಳಿತವನ್ನು ನಡೆಸುತ್ತಿದ್ದರು. ಆಗ ಸುಮಾರು ಒಂದು ನೂರು ವಿದ್ಯಾರ್ಥಿಗಳಿಗೆ ಉಚಿತ ಭೋಜನದ ಏರ್ಪಾಡಿತ್ತು. ಈ ವಿದ್ಯಾರ್ಥಿಗಳ ಪೈಕಿ ಶ್ರಿ ಶಿವಣ್ಣನವರೂ ಒಬ್ಬರಾಗಿದ್ದರು ಶ್ರೀ ಶಿವಣ್ಣನವರು ಕ್ಷೇತ್ರದಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ಶ್ರೀ ಮರುಳಾರಾಧ್ಯಸ್ವಾಮಿಗಳಿಗೆ ಅಚ್ಚುಮೆಚ್ಚಿನ ಭಕ್ತರಾಗಿದ್ದರೆಂದು ಶ್ರಿ ಉದ್ದಾನ ಶಿವಯೋಗಿ ಸ್ವಾಮಿಗಳವರೇ ಹೇಳಿದ್ದು ನನಗೆ ನೆನಪಿದೆ. ಅವರಿಬ್ಬರೂ ಬಹಳ ಆತ್ಮೀಯರಾಗಿದ್ದರು. ರಜಾಕಾಲಗಳಲ್ಲೆಲ್ಲಾ ಶ್ರಿ ಶಿವಣ್ಣನವರು ಸಿದ್ಧಗಂಗಾ ಕ್ಷೇತ್ರಕ್ಕೆ ಹೋಗಿ ಶ್ರಿ ಮರುಳಾರಾಧ್ಯಸ್ವಾಮಿಗಳವರ ಸನ್ನಿಧಿಯಲ್ಲಿ ಕಾಲಕಳೆಯುತ್ತಿದ್ದರು. ಅವರ ಜನ್ಮಸ್ಥಳವಾದ ವೀರಾಪುರ ಗ್ರಾಮಕ್ಕೆ ಹೋಗುತ್ತಿದ್ದುದು ಬಹಳ ಅಪರೂಪವಾಗಿತ್ತೆಂದು ಅವರ ಸ್ನೇಹಿತರನೇಕರು ಹೇಳುತ್ತಿದ್ದುದನ್ನು ನಾನು ಕೇಳಿದ್ದೇನೆ. ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ನಾವಿಬ್ಬರೂ ಒಟ್ಟಿಗೆ ಓದುತ್ತಿದ್ದುದರಿಂದಲೂ, ವಿದ್ಯಾರ್ಥಿನಿಲಯದಲ್ಲಿ ಇಬ್ಬರೂ ಒಂದೇ ರೂಮಿನಲ್ಲಿದ್ದುದರಿಂದಲೂ ಬಿಡು



" ಏಳು- ಎಚ್ಚರಗೊಳ್ಳು, ಗುರಿ ಮುಟ್ಟುವವರೆಗೂ ನಿಲ್ಲಬೇಡ "
ಸ್ವಾಮಿ ವಿವೇಕಾನಂದರ ಧೀರ ಗಂಭೀರ ವಾಣಿಯ ಪ್ರತಿಧ್ವನಿ

— ಶ್ರೀವಾಣಿ



ಪೂಜ್ಯ ಶ್ರೀ ಶ್ರೀಗಳವರು ಬೆಂಗಳೂರು ಅರಳೇಪೇಟೆ ದೇವಸ್ಥಾನಗಳ ಟ್ರಸ್ಟ್ ಕಮಿಟಿಯವರು ನೂತನವಾಗಿ ತಯಾರಿಸಿರುವ 'ನಂದೀಧ್ವಜ' ಬಿಡುಗಡೆ ಸಮಾರಂಭದಲ್ಲಿ ಮಾತನಾಡುತ್ತಿರುವುದು. ಶ್ರೀ ರೇಣುಕಾಚಾರ್ಯ ಲಾ ಕಾಲೇಜಿನ ಪ್ರಿನ್ಸಿಪಾಲ್ ಶ್ರೀ ಪಿ. ಶಿವಶಂಕರ್ ಅವರು ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದರು



ಪೂಜ್ಯ ಶ್ರೀ ಶ್ರೀಗಳವರು ಬಹುಮಾನ ವಿತರಣೆ ಮಾಡಿ, ವಿದ್ಯಾರ್ಥಿಗಳನ್ನು ಹರಸಿದರು.
ಶಾಲಾ ಮುಖ್ಯೋಪಾಧ್ಯಾಯ ಶ್ರೀ ಹೆಚ್. ಎಸ್. ಶ್ರೀನಿವಾಸಮೂರ್ತಿ ಅವರನ್ನು ಕಾಣಬಹುದು

## ವಾರ್ಷಿಕೋತ್ಸವ ಸಮಾರಂಭ, ನ್ಯಾಷನಲ್ ಹೈಸ್ಕೂಲ್, ಬೆಂಗಳೂರು

ವಿದ್ಯಾರ್ಥಿ ಸಂಘದ ಚಟುವಟಿಕೆಗಳನ್ನು ಶ್ರೀ ಶ್ರೀಗಳವರು ವೀಕ್ಷಿಸುತ್ತಿರುವುದು




ವಾದಾಗಲೆಲ್ಲಾ ಶ್ರಿ ಸಿದ್ಧಗಂಗಾ ಕ್ಷೇತ್ರದ ವಿಚಾರವಾಗಿ ಅನೇಕ ವಿಷಯಗಳನ್ನು ಚರ್ಚಿಸುತ್ತಿದ್ದೆವು.

ಶ್ರೀ ಶಿವಣ್ಣನವರು ವಿದ್ಯಾರ್ಥಿಯಾಗಿದ್ದಾಗಿನಿಂದಲೂ ಬಹಳ ಆಚಾರವಂತರಾಗಿದ್ದರು. ಸ್ನಾನ ಮತ್ತು ದೇವರ ಪೂಜೆ ಮಾಡದೆ ಅವರು ಏನನ್ನೂ ತೆಗೆದುಕೊಳ್ಳುತ್ತಿರಲಿಲ್ಲ. ಅಷ್ಟು ನಿಷ್ಠಾವಂತರಾಗಿದ್ದರು. ಅವರಲ್ಲಿದ್ದ ಮತ್ತೊಂದು ವಿಶೇಷ ಗುಣವೆಂದರೆ ಅವರು ಯಾವಾಗಲೂ ಹೊಟೇಲಿಗೆ ಹೋದವರಲ್ಲ. ಮಾಮೂಲುಪೇಟೆಯಲ್ಲಿ ಆಗ ಒಂದು ವೀರಶೈವ ಹೊಟೇಲಿತ್ತು. ಅಪರೂಪವಾಗಿ ಆ ಹೊಟೇಲಿಗೆ ಮಾತ್ರ ಹೋಗುತ್ತಿದ್ದರು. ನಾನೂ ಕೆಲವುವೇಳೆ ಅವರ ಜೊತೆಯಲ್ಲಿದ್ದಾಗ ಆ ಹೋಟೇಲಿಗೆ ಹೋಗುತ್ತಿದ್ದೆನು. ಅವರು ಆಚಾರ ವಿಚಾರದಲ್ಲಿ ಎಷ್ಟು ನಿಷ್ಠಾವಂತರಾಗಿದ್ದರೆಂಬುದನ್ನು ತೋರಿಸಲು ಇದೊಂದು ಉದಾಹರಣೆ ಸಾಕು. ಕಾಲೇಜುಗಳಲ್ಲಿ ಮತ್ತು ವಿದ್ಯಾರ್ಥಿನಿಲಯಗಳಲ್ಲಿ ಏನಾದರೂ ಸಮಾರಂಭಗಳೇರ್ಪಟ್ಟಲ್ಲಿ ಫಲಾಹಾರದ ವೇಳೆಯಲ್ಲಿ ಅವರ ಪಕ್ಕದಲ್ಲಿ ಕುಳಿತುಕೊಳ್ಳಲು ಅವರ ಸ್ನೇಹಿತರಾದ ನಮ್ಮಲ್ಲಿ ಪೈಪೋಟಿ ಬೀಳುತ್ತಿತ್ತು ಹಣ್ಣು ಹಂಪಲುಗಳನ್ನು ಅವರಿಗೆ ಬಿಟ್ಟು ಬಾಕಿ ತಿಂಡಿ ಪದಾರ್ಥಗಳನ್ನು ನಾವು ತೆಗೆದುಕೊಳ್ಳುತ್ತಿದ್ದೆವು. ಶ್ರಿ ಶಿವಣ್ಣನವರ ಆಚಾರ ವಿಚಾರಗಳನ್ನು ನೋಡಿ ಅವರ ಸಹಪಾಠಿಗಳಿಂದ ನಾವೆಲ್ಲರೂ ಶ್ರೀ ಶಿವಣ್ಣನವರನ್ನು ಯಾವುದಾದರೂ ಮಠಕ್ಕೆ ಅಧಿಪತಿಗಳನ್ನಾಗಿ ಮಾಡುವುದೊಳ್ಳೆಯದೆಂದು ಅನೇಕ ವೇಳೆಯಲ್ಲಿ ತಮಾಷೆ ಮಾಡಿದ್ದುಂಟು. ಅಂಥ ಸಂದರ್ಭಗಳಲ್ಲಿ ಅವರು ಸುಮ್ಮನೆ ನಕ್ಕುಬಿಡುತ್ತಿದ್ದರು. ಅವರು ಮೇಧಾವಿಗಳಾಗಿದ್ದರಲ್ಲದೆ ಕನ್ನಡ ಭಾಷೆಯಲ್ಲಿ ನಿರರ್ಗಳವಾಗಿ ಮಾತನಾಡುತ್ತಿದ್ದರು. ಕನ್ನಡ ಚರ್ಚಾ ಕೂಟಗಳಲ್ಲಿ ವಿಶೇಷ ಶ್ರದ್ಧೆವಹಿಸಿ ತಮ್ಮ ವಾದವೇ ಗೆಲ್ಲುವಂತೆ ಮಾಡುತ್ತಿದ್ದರು. ಅವರ ಜೊತೆಯಲ್ಲಿದ್ದು ವ್ಯಾಸಂಗ ಮಾಡುವ ಸಂದರ್ಭ ಒದಗಿದ್ದು ನನ್ನ ಸುಯೋಗವೆಂದು ಭಾವಿಸಿದ್ದೆನು. ಗಣಿತ ವಿಭಾಗದಲ್ಲಿ (Mathematics) ಅವರು ಅಗ್ರಗಣ್ಯರಾಗಿದ್ದರು. ಅವರ ಬುದ್ಧಿಮತ್ತೆಯಲ್ಲಿ ಪ್ರಯೋಜನವನ್ನು ನಾನು ಬಹಳಷ್ಟು ಮಟ್ಟಿಗೆ ಉಪಯೋಗಿಸಿಕೊಂಡಿದ್ದೇನೆ. ನಾವು ಬಿ.ಎ. ಕ್ಲಾಸಿನ ಮೂರನೇ ವರ್ಷದಲ್ಲಿ (Final B. A.) ದ್ದಾಗ್ಗೆ ವಿದ್ಯಾರ್ಥಿ ನಿಲಯದ ವಾರ್ಷಿಕೋತ್ಸವವನ್ನು ಆಚರಿಸಿದೆವು. ಇಂಗ್ಲಿಷ್ ಮಹಾಕವಿ ಷೇಕ್ಸ್‌ಪಿಯರ್‌ನ ನಾಟಕಗಳಲ್ಲೊಂದನ್ನು ಆಡಿದ್ದೆವು. ಅದರಲ್ಲಿ ನಾನೂ ಶಿವಣ್ಣನವರೂ ಭಾಗವಹಿಸಿದ್ದೆವು. ನಾವು ಫೈನಲ್ ಬಿ.ಎ. ಪರೀಕ್ಷೆಗೆ ತಯಾರಾಗುತ್ತಿದ್ದ ವೇಳೆಯಲ್ಲಿಯೇ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಒಂದು ಅನಿರೀಕ್ಷಿತ ಘಟನೆ ನಡೆಯಿತು.

1930ನೆಯ ಇಸ್ವಿ ಜನವರಿಯಲ್ಲಿ ಶ್ರೀ ಮರುಳಾರಾಧ್ಯ ಸ್ವಾಮಿಗಳವರು ಆಕಸ್ಮಿಕವಾಗಿ ಶಿವಸಾಯುಜ್ಯವನ್ನು ಹೊಂದಿದರು. ಈ ವಿಷಾದದ ವಾರ್ತೆಯು ಬೆಂಗಳೂರು ತಲುಪುತ್ತಿದ್ದಂತೆಯೇ ಬೆಂಗಳೂರಿನ ಭಕ್ತಶಿರೋಮಣಿಗಳು ಆ ಕೂಡಲೆ ಅಂದರೆ ರಾತ್ರಿ ಸುಮಾರು ಹನ್ನೊಂದು ಘಂಟೆಯ ವೇಳೆಯಲ್ಲಿ ಸಿದ್ಧಗಂಗಾಕ್ಕೆ ಹೊರಟರು ಉಳಿದ ನಾವೆಲ್ಲರೂ ಮಾರನೆಯ ದಿನ ಬೆಳಿಗ್ಗೆ ಹೋಗಿ ಸೇರಿದೆವು. ಮಠದ ತುಂಬಾ ಜನಸಂದಣಿ ನೆರೆದಿತ್ತು. ಎಲ್ಲರ ಬಾಯಲ್ಲಿಯೂ ಶ್ರೀ ಮರುಳಾರಾಧ್ಯ ಸ್ವಾಮಿಗಳವರ ಗುಣಗಾನದ ಮಾತುಗಳೇ ಕೇಳಿ ಬರುತ್ತಿದ್ದುವು. ಒಂದು ಕಡೆಯಲ್ಲಿ ತುಮಕೂರು ಡಿಸ್ಟ್ರಿಕ್ಟಿನ ವಿದ್ಯಾಧಿಕಾರಿಗಳಾಗಿದ್ದ (D.E.O.) ಶ್ರೀ ದಾವುದ್ ಸಾಹೇಬರವರು ಶ್ರೀ ಶಿವಣ್ಣನವರಿಗೆ ಕೆಲವು ಹಿತವಚನಗಳನ್ನಾಡುತ್ತಿದ್ದರು. ಶ್ರೀಮರುಳಾರಾಧ್ಯ ಸ್ವಾಮಿಗಳಿಗೆ ಶ್ರೀ ಶಿವಣ್ಣನವರು ಬಹಳ ಆತ್ಮೀಯರಾಗಿದ್ದುದರಿಂದ ಅವರೇ ಶ್ರೀ ಮರುಳಾರಾಧ್ಯ ಸ್ವಾಮಿಗಳ ಸ್ಥಾನಕ್ಕೆ ಅರ್ಹರೆಂಬ ತೀರ್ಮಾನಕ್ಕೆ ಬಂದು ಶ್ರೀ ದಾವುದ್ ಸಾಹೇಬರವರ ಭಾಷಣವು ಪುಷ್ಟೀಕರಿಸುತ್ತಿತ್ತು. ಈ ವಿಷಯವಾಗಿ ಶ್ರೀ ಶಿವಣ್ಣನವರನ್ನು ಯಾರೂ ನೇರವಾಗಿ ಪ್ರಶ್ನಿಸಲಿಲ್ಲ. ಆದರೂ ಅಲ್ಲಿ ಸೇರಿದ್ದ ಮಹಾಜನಗಳ ದೃಷ್ಟಿಯೆಲ್ಲವೂ ಶ್ರೀ ಶಿವಣ್ಣನವರ ಮೇಲೆ ಕೇಂದ್ರೀಕೃತವಾಗಿತ್ತು. ಶ್ರೀ ಮರುಳಾರಾಧ್ಯ ಸ್ವಾಮಿಗಳವರ ಅಂತ್ಯಸಂಸ್ಕಾರದ ಕೆಲಸ ಕಾರ್ಯಗಳನ್ನೆಲ್ಲಾ ಶ್ರೀ ಶಿವಣ್ಣನವರೇ ನೆರವೇರಿಸಬೇಕಾದ ಸಂದರ್ಭ ಬಂದೊದಗಿತು. ಸಂತೋಷ

ದಿಂದಲೆ ಅವರು ಅವರಿಗೆ ವಹಿಸಿದ್ದ ಅಂತ್ಯಸಂಸ್ಕಾರದ ಕೆಲಸಗಳನ್ನೆಲ್ಲಾ ನೆರವೇರಿಸಿದರು. ಸಂಸ್ಕಾರದ ಕೆಲಸಗಳೆಲ್ಲಾ ನಡೆದ ಮೇಲೆ ಸಮಾಧಿಯ ಮೇಲೆ ಮತ್ತು ಸುತ್ತೆಲ್ಲಾ ಕರ್ಪೂರವು ಜಾಜ್ವಲ್ಯಮಾನವಾಗಿ ಉರಿಯುತ್ತಿತ್ತು. ಬಂಡೆಮಠದ ಸ್ವಾಮಿಗಳವರು ಸಮಾಧಿಯ ಮೇಲೆ ನಿಂತಿದ್ದರು. ಶ್ರೀ ಶಿವಣ್ಣನವರು ಅವರ ಪಾದ ಪೂಜೆಯನ್ನು ಮಾಡಿ ಪೂರೈಸಿದ ಕೂಡಲೆ ಸಭೆಯಲ್ಲಿದ್ದ ಕೆಲವು ಗಣ್ಯ ಮಹನೀಯರು ಭಾಷಣಗಳನ್ನು ಮಾಡಿದರು. ಶ್ರೀ ಶಿವಣ್ಣನವರೇ ಶ್ರೀ ಶ್ರೀ ಉದ್ದಾನ ಶಿವಯೋಗಿ ಸ್ವಾಮಿಗಳವರ ಉತ್ತರಾಧಿಕಾರಿಗಳಾಗಬೇಕೆಂಬ ವಿಷಯವೂ ಸೇರಿತ್ತು. ಆವಾಗಲೂ ಸಹ ಶ್ರೀ ಶಿವಣ್ಣನವರು ಒಂದು ಮಾತನ್ನೂ ಆಡಲಿಲ್ಲ. ಎಲ್ಲೆಲ್ಲಿಯೂ ಮೌನವು ಆವರಿಸಿತ್ತು. ಶ್ರೀ ಶ್ರೀ ಉದ್ದಾನ ಶಿವಯೋಗಿ ಸ್ವಾಮಿಗಳವರು ಎಲ್ಲಿಯೋ ಹೊರಗೆ ಹೋಗಿದ್ದವರು ಸಮಾಧಿಯ ಸ್ಥಳಕ್ಕೆ ದಯಮಾಡಿಸಿದರು. ಆಗ ಅಲ್ಲಿ ನೆರೆದಿದ್ದವರ ಪೈಕಿ ಒಬ್ಬ ಮಹನೀಯರು ಸ್ವಾಮಿಗಳವರ ಅಪ್ಪಣೆಯನ್ನು ಬೇಡಿದರು. ಸಭೆಯಲ್ಲಿ ಸೇರಿದ್ದ ಜನರೆಲ್ಲರೂ ಉತ್ಸುಕತೆಯಿಂದ ಶ್ರೀ ಶಿವಣ್ಣನವರನ್ನೇ ನೋಡುತ್ತಿದ್ದರು. ಶ್ರೀ ಶ್ರೀ ಉದ್ದಾನ ಶಿವಯೋಗಿ ಸ್ವಾಮಿಗಳು ಶ್ರೀ ಶಿವಣ್ಣನವರನ್ನು ತಮ್ಮ ಉತ್ತರಾಧಿಕಾರಿಗಳಾಗಲು ಸಮ್ಮತಿ ಕೊಡಬೇಕೆಂದು ಕೇಳಿಕೊಂಡ ತಕ್ಷಣದಲ್ಲಿಯೇ ಶ್ರೀ ಶಿವಣ್ಣನವರು ತಮ್ಮ ಒಪ್ಪಿಗೆಯನ್ನು ಸೂಚಿಸುವುದರ ಮೂಲಕ ಸಾಷ್ಟಾಂಗ ನಮಸ್ಕಾರ ಹಾಕಿದರು. ಜಯಘೋಷವಾಯ್ತು. ಜಯಘೋಷದ ಮಧ್ಯದಲ್ಲಿ ಶ್ರೀ ಶ್ರೀ ಸ್ವಾಮಿಗಳವರು ಮುಂದಿನ ಕರ್ತವ್ಯ ಭಾರವನ್ನೆಲ್ಲಾ ಶ್ರೀ ಶಿವಣ್ಣನವರಿಗೆ ವಹಿಸಿದರು. ಆ ಕೂಡಲೆ ಶ್ರೀ ಶಿವಣ್ಣನವರು ಮಠದ ಜವಾಬ್ದಾರಿಯನ್ನು ಹೊತ್ತು ಮೂರು ನಾಲ್ಕು ದಿನಗಳು ಮಠದಲ್ಲಿಯೇ ಇದ್ದು ಅನಂತರ ಸ್ವಾಮಿಗಳವರ ಅಪ್ಪಣೆಯನ್ನು ಪಡೆದು ವ್ಯಾಸಂಗವನ್ನು ಮುಂದುವರಿಸಲು ಬೆಂಗಳೂರಿಗೆ ಹಿಂದಿರುಗಿದರು. ಒಂದು ದಿನ ಕನ್ನಡ ತರಗತಿ ನಡೆಯುತ್ತಿದ್ದಾಗ ಕನ್ನಡ ಪ್ರೊಫೆಸರರಾಗಿದ್ದ ದಿವಂಗತ ಎ. ಆರ್. ಕೃಷ್ಣಶಾಸ್ತ್ರಿಗಳವರು ವೀರಶೈವ ಮಠ ವಿಚಾರವಾಗಿಯೂ ವಿರಕ್ತಾಶ್ರಮದ ಮಹತ್ವದ ಬಗ್ಗೆಯೂ ಕೆಲವು ಉತ್ತೇಜಕ ಮಾತುಗಳನ್ನಾಡಿದರು. ಶ್ರೀ ಶಿವಣ್ಣನವರು ಈ ಚಿಕ್ಕ ವಯಸ್ಸಿನಲ್ಲಿ ವಿರಕ್ತಾಶ್ರಮವನ್ನು ಸ್ವೀಕರಿಸಲು ಸಂತೋಷದಿಂದ ಒಪ್ಪಿದುದಕ್ಕಾಗಿ ಅವರನ್ನು ಅಭಿನಂದಿಸಿದರು.

ಶ್ರೀ ಶಿವಣ್ಣನವರು ಶ್ರೀ ಸಿದ್ಧಗಂಗಾ ಕ್ಷೇತ್ರದ ಉತ್ತರಾಧಿಕಾರಿಗಳಾಗಿ ಚುನಾಯಿಸಲ್ಪಟ್ಟರೆಂದು ಮಠದ ಭಕ್ತವೃಂದಕ್ಕೆಲ್ಲಾ ತಿಳಿಯಿತು. ಅದಕ್ಕಾಗಿ ಅನೇಕರು ತಮ್ಮ ಅಭಿನಂದನೆಗಳನ್ನು ಕಳುಹಿಸಿದರು.

ಜನಬಾಹುಳ್ಯವಾಗುಳ್ಳ ಒಂದು ಸಂಸಾರದಲ್ಲಿ ಒಬ್ಬರೇ ಒಬ್ಬ ವ್ಯಕ್ತಿ ವಿದ್ಯಾವಂತರಾಗಿದ್ದು ಮುಂದೆ ಸಮಾಜದಲ್ಲಿ ಒಂದು ಗಣ್ಯಸ್ಥಾನವನ್ನು ಪಡೆಯತಕ್ಕವರಾದ ಇವರು ಪ್ರಪಂಚದ ವ್ಯಾಮೋಹವನ್ನೆಲ್ಲಾ ಬಿಟ್ಟು ವಿರಕ್ತಾಶ್ರಮವನ್ನು ಸ್ವೀಕಾರ ಮಾಡುವುದೆಂದರೆ ಅವರ ಬಂಧು ವರ್ಗದವರು ವಿರೋಧಿಸುವುದು ಸ್ವಾಭಾವಿಕ. ಶ್ರಿ ಶಿವಣ್ಣನವರು ಅಂಥ ಕುಟುಂಬವರ್ಗಕ್ಕೆ ಸೇರಿದವರು. ಇವರ ಮನೆಯಲ್ಲಿ ತಾಯಿ ತಂದೆ ಮತ್ತು ಏಳು ಜನ ಸಹೋದರರಿದ್ದರು. ಆ ಪೈಕಿ ಇವರೊಬ್ಬರೇ ವಿದ್ಯಾವಂತರಾಗಿ ಮುಂದುವರಿದಿದ್ದವರು. ಆ ಕಾರಣದಿಂದ ಅವರ ತಂದೆ ಮತ್ತು ಸಹೋದರರುಗಳು ಶ್ರಿ ಶಿವಣ್ಣನವರು ಸನ್ಯಾಸಾಶ್ರಮವನ್ನು ಪಡೆಯುವುದನ್ನು ವಿರೋಧಿಸಿದರು. ಇವರ ತಾಯಿ, ತಂದೆ, ಸಹೋದರರೊಂದಿಗೆ ಇನ್ನೂ ಇವರ ಅನೇಕ ಬಂಧುವರ್ಗದವರು ಸೇರಿ ಶ್ರಿ ಶಿವಣ್ಣನವರ ಮನಸ್ಸನ್ನು ಪರಿವರ್ತಿಸಲು ಪ್ರಯತ್ನಪಟ್ಟರು. ಪ್ರತಿದಿನವೂ ನಮ್ಮ ಕೊಠಡಿಗೆ ಜನರು ಬಂದು ಶ್ರಿ ಶಿವಣ್ಣನವರಿಗೆ ಉಪದೇಶಕೊಡಲು ಪ್ರಾರಂಭಿಸಿದರು. ಅವರ ಹಿರಿಯಣ್ಣನವರಂ ಬಂದು ಒಂದು ರಾತ್ರಿಯೆಲ್ಲಾ ಪ್ರಯತ್ನಪಟ್ಟರು: ಆದರೆ ಯಾರಿಂದಲೂ ಅವರ ಮನಸ್ಸನ್ನು ಬದಲಾಯಿಸಲು ಸಾಧ್ಯವಿರಲಿಲ್ಲ. ಅವರು ಸ್ಥಿರಪ್ರತಿಜ್ಞರು; ಹಿಡಿದ ಹಠವನ್ನು ಸಾಧಿಸತಕ್ಕವರು. ಅವರ ಬಂಧುಗಳ ಹಿತವಚನಗಳಿಗೆ ಅವರು ಮರುಳಾಗಲಿಲ್ಲ. ಅವರ ತಂದೆ ಮತ್ತು ಸಹೋದರರ ಮಾತುಗಳಿಗೆ ಬೇಸತ್ತು ಅತ್ಯಂತ ವ್ಯಾಕುಲಚಿತ್ತದಿಂದ ಈ ಕೆಳಗೆ ನಮೂದಿಸಿದಂತೆ ಹೇಳಿದರು.

"ನನ್ನನ್ನು ಹೆತ್ತು ಸಾಕಿ, ಸಲಹಿ ಈ ವರೆಗೂ ನನ್ನನ್ನು ಕಾಪಾಡಿಕೊಂಡು ಬಂದಿರಿ ಅದಕ್ಕಾಗಿ ನಾನು ನಿಮಗೆ ಚಿರರುಣಿ. ಶ್ರಿ ಸಿದ್ಧಗಂಗಾ ಸ್ವಾಮಿಗಳವರಿಗೆ ಮಾತುಕೊಟ್ಟದ್ದಾಯ್ತು. ಆ ಮಾತನ್ನು ಹಿಂತೆಗೆದುಕೊಳ್ಳಲು ಸಾಧ್ಯವಿಲ್ಲದ ಮಾತು ನಿಮ್ಮಗಳ ವಾತ್ಸಲ್ಯಕ್ಕೆ ಜೋತುಬಿದ್ದು ನಾನು ಕೊಟ್ಟ ವಾಗ್ದಾನಕ್ಕೆ ವಿರುದ್ಧವಾಗಿ ನಡೆದರೆ ಅದರಿಂದ ನನಗೆ ತುಂಬಾ ಕೇಡಾಗುತ್ತದೆ. ಆದಕಾರಣ ನನ್ನ ದಾರಿ ನನಗೆ ನಿಮ್ಮ ದಾರಿ ನಿಮಗೆ. ನೀವು ನನ್ನ ಸುಖವನ್ನು ಬಯಸುವುದಾದರೆ ಈ ವಿಷಯದಲ್ಲಿ ಇನ್ನು ಹೆಚ್ಚು ಪ್ರಸ್ತಾಪ ಮಾಡಬಾರದು" ಎಂದು ಹೇಳಿದರು. ಅವರ ತಂದೆ ಮತ್ತು ಹಿರಿಯ ಸಹೋದರರು ಮುಂದೆ ಏನನ್ನೂ ಮಾತನಾಡಲಾರದೆ ಕಣ್ಣೀರು ತುಂಬಿಕೊಂಡು ರೂಮಿನಿಂದ ಹೊರಗೆ ಹೊರಟು ಹೋದವರು ಪುನಃ ಬರಲಿಲ್ಲ. ಅನಂತರ ಮಠಕ್ಕೆ ಹೋಗಿ ಶ್ರಿ ಉದ್ದಾನ ಶಿವಯೋಗಿ ಸ್ವಾಮಿಗಳಲ್ಲಿ ಶ್ರೀ ಶಿವಣ್ಣನವರನ್ನು ಬಿಟ್ಟುಕೊಡಬೇಕೆಂದು ಪ್ರಾರ್ಥಿಸಿಕೊಂಡರು ಇದನ್ನು ಕೇಳಿದ ಕೂಡಲೆ ಆದಷ್ಟು ಶೀಘ್ರದಲ್ಲಿಯೇ ತಮಗೆ ಆಶ್ರಮ ವಹಿಸಿಕೊಟ್ಟಲ್ಲಿ ಈ ತೊಂದರೆಗಳೆಲ್ಲಾ ತಪ್ಪುವುವೆಂದು ಶ್ರೀ ಶ್ರೀ ಉದ್ದಾನ ಸ್ವಾಮಿಗಳವರಿಗೆ ಪತ್ರ ಬರೆದರು ಅಂತೆಯೇ ಎಲ್ಲಾ ಸಿದ್ಧತೆಗಳೂ ನಡೆದುವು. ತಾ॥ 3-3-1930 ನೇ ದಿವಸ ಶ್ರೀ ಶಿವಣ್ಣನವರು ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳೆಂಬ ನಾಮಾಂಕಿತವನ್ನು ಹೊಂದಿ ಶ್ರೀಶ್ರೀ ಉದ್ದಾನ ಸ್ವಾಮಿಗಳವರಿಂದ ವಿರಕ್ತಾಶ್ರಮ ದೀಕ್ಷೆಯನ್ನು ಪಡೆದರು. ಸಮಾರಂಭವು ಅತಿ ವಿಜೃಂಭಣೆಯಿಂದ ನಡೆಯಿತಂ. ಈ ಸಮಾರಂಭದಲ್ಲಿ ಅವರ ಪೂಜ್ಯ ತಂದೆಯವರೂ ಮತ್ತು ಅವರ ಸಹೋದರರೂ ಭಾಗಿಗಳಾಗಿದ್ದರು. ಆ ದಿವಸ ನಡೆದ ಮಹಾಸಭೆಯಲ್ಲಿ ಶ್ರಿ ಶಿವಕುಮಾರ ಸ್ವಾಮಿಗಳವರು ವಿರಕ್ತಾಶ್ರಮದ ಧರ್ಮ ಮತ್ತು ಕರ್ತವ್ಯಗಳ ವಿಚಾರವಾಗಿ ಮಾಡಿದ ಭಾಷಣವು ತುಂಬಾ ಭಾವ ಗರ್ಭಿತವಾಗಿತ್ತು. ಅನಂತರ ಫೈನಲ್ ಬಿ. ಎ. ಪರೀಕ್ಷೆಗೆ ಕೂಡುವ ಸಲುವಾಗಿ ಖಾದಿ ಬಟ್ಟೆ ಧರಿಸಿ ಪುನಃ ಬೆಂಗಳೂರಿಗೆ ದಯಮಾಡಿಸಿದರು. ವ್ಯಾಸಂಗ ಮುಂದುವರಿಸಿ ಪರೀಕ್ಷೆ ತೀರಿಸಿಕೊಂಡು ಕೂಡಲೇ ಮಠಕ್ಕೆ ಹಿಂದಿರುಗಿ ತಮ್ಮ ಕಾಯಕವನ್ನು ಮುಂದುವರಿಸಿದರು. ತಮ್ಮ ಸ್ಥಾನಕ್ಕೆ ತಕ್ಕ ಅರ್ಹತೆ ಪಡೆಯಲು ಸಂಸ್ಕೃತ ವ್ಯಾಸಂಗವನ್ನು ಮಠದಲ್ಲಿ ಪ್ರಾರಂಭಿಸಿ ಸಂಸ್ಕೃತದಲ್ಲಿ ಪಾಂಡಿತ್ಯವನ್ನು ಸಂಪಾದಿಸಿ ಅಲ್ಲಿಂದೀಚೆಗೆ ಸಂಸ್ಕೃತ ಯಗ್ಸಾಮಿನೇಷ್ ಬೋರ್ಡ್ ಸದಸ್ಯರಾಗಿ,ಮಠದಲ್ಲಿಯೇ ಇರುವ ಸಂಸ್ಕೃತ ಕಾಲೇಜಿನ ಮೇನೇಜರರಾಗಿ ಮತ್ತು ಅಧ್ಯಾಪಕರಾಗಿ ಸೇವೆ ಸಲ್ಲಿಸುತ್ತಾ ಬಂದರು ತಮ್ಮ ತಪಸ್ಸು ಮತ್ತು ನಿಷ್ಠೆಗಳಿಂದ ಶ್ರೀ ಸಿದ್ಧಗಂಗಾ ಕ್ಷೇತ್ರವನ್ನು ಅಭಿವೃದ್ಧಿಗೆ ತಂದ ಶ್ರೀ ಶ್ರೀ ಉದ್ದಾನ ಶಿವಯೋಗಿ ಸ್ವಾಮಿಗಳವರ ನೇತೃತ್ವದಲ್ಲಿ ಶ್ರಿ ಮಠದ ಆಡಳಿತವನ್ನು ಬಹಳ ದಕ್ಷತೆಯಿಂದ ನಿರ್ವಹಿಸಿಕೊಂಡು ಆಗಾಗ್ಗೆ ಶ್ರೀ ಉದ್ದಾನ ಸ್ವಾಮಿಗಳವರು ನೀಡುತ್ತಿದ್ದ ಆಣತಿಗಳನ್ನೂ ಸಲಹೆಗಳನ್ನೂ ಚಾಚೂ ತಪ್ಪದೆ ಅವರಿಗೆ ವಿಧೇಯರಾಗಿದ್ದುಕೊಂಡು ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಾ ಬಂದರು. ತಾ॥ 11-1-41 ರಲ್ಲಿ ಶ್ರೀ ಶ್ರೀ ಉದ್ದಾನ ಶಿವಯೋಗೀಶ್ವರರು ಲಿಂಗೈಕ್ಯರಾದಂದಿನಿಂದೀಚೆಗೆ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು ಹಗಲೂ ರಾತ್ರಿ ದುಡಿದು ಶ್ರೀ ಸಿದ್ಧಗಂಗಾ ಕ್ಷೇತ್ರವನ್ನು ಬಹಳ ಅಭಿವೃದ್ಧಿಗೆ ತಂದಿರುವ ವಿಷಯ ಸರ್ವವಿದಿತವಾಗಿದೆ. ಅವರು ಕರ್ನಾಟಕ ರಾಜ್ಯದಲ್ಲಿ ಯಾರು ಎಲ್ಲಿಗೆ ಕರೆದರೂ ಸಾಧ್ಯವಿಲ್ಲವೆಂದು ಎಂದೂ ಹೇಳಿರುವುದಿಲ್ಲ. ಬಡವನಿಂದ ಹಿಡಿದು ಬಲ್ಲಿದವರೆಗೆ ಯಾರು ಬಂದು ಏನು ಕೇಳಿದರೂ ಇಲ್ಲವೆನ್ನುವ ಸ್ವಭಾವವುಳ್ಳವರಲ್ಲ ನಾನು ಶ್ರೀ ಸ್ವಾಮಿಗಳವರ ಸಹಪಾಠಿಯಾಗಿ ಅವರ ಜೊತೆಗೂಡಿ ಕಳೆದ ಮೂರು ವರ್ಷಗಳ ಕಾಲದಲ್ಲಿ ಅವರ ವಿದ್ಯಾರ್ಥಿ ಜೀವನದ ಬಗ್ಗೆ ನನಗೆ ತಿಳಿದುಬಂದ ಕೆಲವು ವಿಷಯಗಳನ್ನು ಮಾತ್ರ ಈ ಲೇಖನದಲ್ಲಿ ಪ್ರಸ್ತಾಪಿಸಿದ್ದೇನೆ. ಅವರು ಶ್ರೀಶ್ರೀ ಉದ್ದಾನ ಶಿವಯೋಗೀಶ್ವರರು ಕೈಲಾಸವಾಸಿಗಳಾದ ನಂತರ ನಡೆಸಿದ ಮಹತ್ಕಾರ್ಯಗಳ ಬಗ್ಗೆ ಹೆಚ್ಚು ಹೇಳಬೇಕಾಗಿರುವುದಿಲ್ಲ ನನ್ನ ವಿದ್ಯಾರ್ಥಿ ದೆಸೆಯಲ್ಲಿ ನೋಡಿದಾಗ ಕ್ಷೇತ್ರದ

ಉಚಿತ ವಿದ್ಯಾರ್ಥಿನಿಲಯದಲ್ಲಿ ಒಂದು ನೂರು ವಿದ್ಯಾರ್ಥಿಗಳಿದ್ದರು ಈಗ 3800 ವಿದ್ಯಾರ್ಥಿಗಳಿರುತ್ತಾರೆ. ಇದರ ಜೊತೆಗೆ ಪ್ರತಿದಿನವೂ ನೂರಾರು ಜನ ಭಕ್ತಾದಿಗಳು ಬಂದು ಹೋಗುತ್ತಿರುತ್ತಾರೆ. ಮಠಕ್ಕೆ ಹೋದವರು ಪ್ರಸಾದ ಸ್ವೀಕರಿಸದೆ ಹೋಗುವುದಿಲ್ಲ. ಪ್ರತಿದಿನವೂ ಬೆಳಗಿನ ಜಾವ ಎರಡು ಘಂಟೆಗೆ ಎದ್ದು ರಾತ್ರಿ ಹತ್ತು ಘಂಟೆಯವರೆಗೆ ಅಹರ್ನಿಶಿ ದುಡಿಯುತ್ತಿರುತ್ತಾರೆ. ಇದು ಸರ್ವರಿಗೂ ವೇದ್ಯವಾಗಿರುವ ವಿಚಾರವಾಗಿರುತ್ತೆ. ತುಮಕೂರು ಡಿಸ್ಟ್ರಿಕ್ಟ್‌ನಲ್ಲಿ ಮಳೆ ಬರುವುದು ಬಹಳ ಕಡಿಮೆ, ಈ ಡಿಸ್ಟ್ರಿಕ್ಟಿನಲ್ಲಿ ಯಾವ ನದಿಗಳೂ ಸಹ ಇರುವುದಿಲ್ಲ. ಆಗಾಗ ಕ್ಷಾಮಗಳು ಈ ಡಿಸ್ಟ್ರಿಕ್ಟಿನಲ್ಲಿ ಬರುತ್ತಲೇ ಇರುತ್ತವೆ. ಕ್ಷಾಮಕಾಲದಲ್ಲಂತೂ ಮಠದಲ್ಲಿ ಬಿಡುವಿಲ್ಲದೆ ಬಂದ ಜನಗಳಿಗೆಲ್ಲಾ ಊಟದ ವ್ಯವಸ್ಥೆ ನಡದೇ ಇರುತ್ತದೆ. ಇಲ್ಲಿ ನಡೆಯುತಕ್ಕ ದಾಸೋಹವು ಪುರಾತನ ಕಾಲದಿಂದಲೂ ಬಂದಿರುತ್ತದಾದ್ದರಿಂದ ಅದನ್ನು ಎಷ್ಟು ಪ್ರಯತ್ನಪಟ್ಟರೂ ಕಡಿಮೆ ಮಾಡಲು ಸಾಧ್ಯವಿಲ್ಲವಾಗಿರುತ್ತದೆ. ಶ್ರೀಶ್ರೀ ಸ್ವಾಮಿಗಳವರು ದಯಾಮಯರು; ಎಂತಹ ಸನ್ನಿವೇಶದಲ್ಲಿಯೂ ಯಾರಿಗೂ ಒಂದು ಕಠಿನ ಮಾತನ್ನಾಡಿದವರಲ್ಲ. ಮತ್ತು ತಾಳ್ಮೆಯನ್ನು ಕಳೆದುಕೊಳ್ಳುವವರಲ್ಲ. ಆದ ಕಾರಣ ಡಾಕ್ಟರ್ ಶ್ರೀ ಶಿವಕುಮಾರ ಸ್ವಾಮಿಗಳವರು ಜಾತಿ ಭೇದವಿಲ್ಲದೆ ಎಲ್ಲಾ ಜನಗಳ ಪ್ರೀತಿಗೆ ಪಾತ್ರರಾಗಿರುತ್ತಾರೆ.

## ಹರಸೂನು

ಗುರುದೇವ ನೀ ✠ ಬಂದು ಬಾವಿಯು
ಕರುಣಾಳು ಯತಿಕುಲಾಂಬುಧಿ ಸೋಮನೇ ॥ಪ॥ ದಿವವೆನ್ನಿಸಿದೆ

ಪೂರ್ವಾಶ್ರಯಂವ ಬಿಟ್ಟೆ ವಿಷಯಂ ಕುಲವನೆ ಸಂಟ್ಟೆ
ನಾಸ್ತಿಕ್ಯ ಹೃದಯಂದಲಿ ಆಸ್ತಿಕ್ಯ ನೆಟ್ಟೆ
ಗೀರ್ವಾಣವಾಣಿಯಂಲಿ ಅಧಿಕಾರವವನಂ ಕೊಟ್ಟೆ
ಪೌರಸ್ತ್ಯ ಸಂಸ್ಕೃತಿಯಂ ಹಿಡಿದುಂ ಮೇಲಿಟ್ಟೆ ॥೧॥

ಪರಮಾನಂಭವಬಂಧಿ ಉದ್ದಾನ ಗುರುವರನ
ಕರಕಮಲ ಸಂಜಾತ ಮಹಿಮಾಕರ
ಹರಶರಣರಡಿಯಿಟ್ಟ ಬಟ್ಟೆಯೊಳೆ ನೀನಡೆದೆ
ಹರಸೂನಂ ನೀ ಸಿದ್ಧಲಿಂಗೇಶ್ವರ ॥೨॥

ಜಗದ ಜಂಜಡವನ್ನು ತೃಣಕಂ ಕಡೆಯಾಗಿಸಿದೆ
ಹಗರಣವ ಪಡುವವರ ಸಂತೈಸಿದೆ
ಹಗಲಿರುಳಂ ಲೋಕಕಲ್ಯಾಣವನೆ ಚಿಂತಿಸಿದೆ
ನಿಗಮಂಗೋಚರ ನಿಜಕು, ಎಂದೆನಿಸಿದೆ ॥೩॥

ಜ್ಞಾನಾನ್ನದಾನಿ ಶಿವ–ಸಿದ್ಧಗಂಗಾಧಿಪತಿ
ಮಾನೋನ್ನತನೆ ಸಚ್ಚಿದಾನಂದನೆ
ಜೇನಾಗಿರಂವೆ ಜನಕೆ ಗುರಿಯಾಗಿರಂವೆ ಮೆನಕೆ
ನಾನಾ ಮಹತ್ತಿನ ಜಿತಾನಂಗನ್ನೈs ॥೪॥

ತಪವೆ ಘನ ವೆಂಬುದನಂ ಗಳಿಸಿ ನೀ ತೋರಿಸಿದೆ
ಜಪ–ಧ್ಯಾನಗೈವಾಗ ಪಶುಪತಿಯೆಂ ನೀನಂ
ವಿಪುಲಾಶ್ರಯವನಿತ್ತು ವಿದ್ಯಾರ್ಥಿಗಳ ಪೊರೆದೆ
ಉಪಕೃತಿಯು ಮರೆಯಂವೆನೆ ಎಂದೆಂದು ನಾನಂ ॥೫॥

✠ [......ಸ್ತುತೌ ಕವೀನಾಂ......]—ಕೆ. ಪಿ. ಶಿವಲಿಂಗಯ್ಯ



# ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಸರ್ವಧರ್ಮ ಸಮನ್ವಯ

ಲೇಖಕ: ಪಂಡಿತ ಕೊಟ್ರಪ್ಪರೆಡ್ಡಿ, ಮಾಯಕೊಂಡ.

ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿಯಾಗಿದ್ದು ಕ್ಷೇತ್ರದಿಂದ ಸ್ಫೂರ್ತಿ ಪಡೆದು ಕನ್ನಡ ನಾಡಿನ ಖ್ಯಾತ ವಿದ್ವಾಂಸರಾಗಿರುವ ಪಂಡಿತ ಕೆ. ಎ. ಕೊಟ್ರಪ್ಪರೆಡ್ಡಿ ಅವರು ಈಗ ದಾವಣಗೆರೆ ಮೋತಿ ವೀರಪ್ಪನವರ ಹೈಸ್ಕೂಲಿನಲ್ಲಿ ಕನ್ನಡ ಅಧ್ಯಾಪಕರಾಗಿ ಕೆಲಸ ಮಾಡುತ್ತಿದ್ದಾರೆ ಇವರು ಹಳಗನ್ನಡದಲ್ಲಿ ಬರೆದ ಉತ್ತರರಾಮ ಚರಿತೆ ಒಂದು ಅತ್ಯುತ್ತಮ ಪಟ್ಟದ ನಾಟಕವಾಗಿದೆ. ತಾವು ಕ್ಷೇತ್ರದಲ್ಲಿದ್ದಾಗ ಕ್ಷೇತ್ರದ ಬಗೆಗೆ ಶ್ರೀಗಳವರ ಬಗೆಗೆ ಹೊಂದಿದ್ದ ಅಪಾರ ಗೌರವವನ್ನೂ ಶ್ರೀಗಳವರ ಲೋಕಾನುಗ್ರಹಚರ್ಯೆಯನ್ನು ಈ ಲೇಖನದಲ್ಲಿ ಪ್ರಸಂಗವೊಂದನ್ನು ಆಧರಿಸಿ ಚಿತ್ರಿಸಿದ್ದಾರೆ ಅವರಿಗೆ ಧನ್ಯವಾದಗಳು.

—ಸಂ.

ಧರ್ಮವೆಂದರೆ ಸದ್ವಿಚಾರ ಪ್ರೇರಿತ ಆಚಾರ ಪರಂಪರೆಗಳ ಸಮುದಾಯವೆಂದು ಹೇಳಬಹುದು. ವಿಚಾರವಿಲ್ಲದ ಆಚಾರ, ವಿವೇಕವಿಲ್ಲದ ಸಂಪ್ರದಾಯಗಳೇ ಮೌಢ್ಯ. ಉತ್ತಮ ನೀತಿ ಮತ್ತೆಯನ್ನುಳ್ಳ ವ್ಯಕ್ತಿಯ ನೈಷ್ಠಿಕ ಅನುಷ್ಠಾನವೇ ಅಧ್ಯಾತ್ಮಶಕ್ತಿಯ ಕೇಂದ್ರ. ಪ್ರತಿ ಧರ್ಮದ ಪರಮ ಗುರಿ, ಆತ್ಮಶಕ್ತಿಯನ್ನು ಬೆಳೆಸಿ, ವ್ಯಕ್ತಿ ವಿಕಾಸವನ್ನುಂಟುಮಾಡುವುದೇ ಆಗಿದೆ. ಆತ್ಮ ಶಕ್ತಿಯು ಧರ್ಮಾಚರಣೆಯ ದ್ಯೋತಕವಾದರೆ ವ್ಯಕ್ತಿ ವಿಕಾಸವು ಸಾಮಾಜಿಕ ಹೊಂದಾಣಿಕೆಯ ಪ್ರತೀಕವಾಗುತ್ತದೆ. ಇದನ್ನೇ ಸ್ಥೂಲವಾಗಿ ಜ್ಞಾನ ಕರ್ಮಗಳ ಸಮಾಗಮವೆನ್ನಬಹುದು.

ಮಾನವನಿಗೆ ಜ್ಞಾನ ಕರ್ಮಗಳ ವಿಚಾರ, ತ್ಯಾಗಗಳ ಮಹತ್ವವನ್ನು ತಮ್ಮ ದೈನಂದಿನ ಜೀವನದ ಮೂಲಕ ತೋರಿಸುವ ಸಲುವಾಗಿಯೇ ಅನೇಕ ಮಹಾತ್ಮರ ಸಾಧುಸಂತರ ಸನ್ಯಾಸಿಗಳ ಉದಯ ಪರಂಪರೆ ಅವ್ಯಾಹತವಾಗಿ ಸಾಗುತ್ತಲೇ ಇದೆ. ಆದರೆ ಮೌಢ್ಯ, ಆಸೆ,ಆಮಿಷ ಸ್ವಾರ್ಥತೆಗಳಿಗೆ ಬಲಿಯಾದ ಬಹುಪಾಲು ಮಾನವರ ಕಣ್ಣು ಕಿವಿಗಳು ಇಂತಹವರನ್ನ ಕಂಡು ಕೇಳಿ ತಿಳಿಯಲಸಮರ್ಥವಾಗಿವೆ. ಕಾರಣ: ಮಾನವನ ಅಂತರ್ಮುಖ ಶಕ್ತಿ ಕುಂಠಿತವಾಗುತ್ತಿದೆ.

ಒಬ್ಬ ವಿದ್ಯಾರ್ಥಿಯ ಸರ್ವತೋಮುಖವಾದ ಪ್ರಗತಿಯಾಗಬೇಕಾದರೆ ಅವನ ಬೌದ್ಧಿಕ, ಮಾನಸಿಕ, ಭಾವನಾತ್ಮಕ, ಶಾರೀರಿಕ, ನೈತಿಕ ಸಾಮರ್ಥ್ಯ ಬೆಳೆಯಬೇಕು. ಇದೇರೀತಿ ಬಡವ ಬಲ್ಲಿದರು ದುರ್ಬಲ ಪ್ರಬಲರು, ದೈತ್ಯದೀನರು, ಉಚ್ಚ ನೀಚರು ಎಂಬ ಭೇದವಿಲ್ಲದೆ ಪ್ರತಿ ವ್ಯಕ್ತಿಗೂ ಪ್ರಗತಿ ಪಥದ ಮಾರ್ಗ ತೆರೆದಿದ್ದರೆ ಮಾತ್ರ ಒಂದು ದೇಶ ಉದ್ಧಾರವಾಗಬಲ್ಲದು. ಇಂತಹ ಸರ್ವಗ್ರಾಹ್ಯ ಸಮಾನವಕಾಶಗಳನ್ನು ಕಲ್ಪಿಸುವುದಕ್ಕಾಗಿಯೇ ಧರ್ಮ ಸ್ಥಾಪಕರ, ಮಹಾತ್ಮರ ಅವತಾರವಾಗುತ್ತಿದ. ಈ ಮಹಾತ್ಮರೆಲ್ಲರ ಮಾರ್ಗಗಳು ಬೇರೆ ಎಂಬಂತೆ ತೋರುಗಾಣಿಕೆಗೆ ನಮಗೆ ತೋರುತ್ತಿವೆ. ಆದರೆ ಗುರಿ ಮಾತ್ರ ಒಂದೆ.

ಒಂದು ಮಹಾಧರ್ಮದ ನೈಷ್ಠಿಕ ಅನುಯಾಯಿಯಾಗಿ ಅನುಭವ ಪಡೆದು, ತಾನು ತಿಳಿದ ವೈಚಾರಿಕ ಕಂಪನ್ನು ಅಖಂಡ ಜನತೆಗೆ ಹಂಚಿ ಉಣಬಡಿಸುವ ಕ್ರಿಯಾಶೀಲ ವ್ಯಕ್ತಿಗಳ ಅಭಾವ ಅಪರಿಮಿತವಾಗಿದೆ. ನಮ್ಮ ನಮ್ಮ ಧರ್ಮಗಳಲ್ಲಿ ನಮಗೆ ಆಳವಾದ ಅನುಭವ ತಿಳುವಳಿಕೆ ಬಂದರೆ ಇತರ ಧರ್ಮಗಳ ನಿರ್ಣಾಯಕ ಗುರಿಗಳ ಅರಿವೂ ನಮಗಾಗುತ್ತದೆ. ಇಂದು ಕಂಡು ಬರುತ್ತಿರುವ ಧರ್ಮ ವಿದ್ವೇಷಕ್ಕೆ ನಮ್ಮ ಧರ್ಮಗಳಲ್ಲಿ ನಮಗಿರುವ ಅನಾದರ ಲಘು ಭಾವನೆಗಳೇ ಕಾರಣ. ಅಂದರೆ ಸರ್ವಧರ್ಮ ಸಮನ್ವಯ ದೃಷ್ಟಿ ಜನತೆಗೆ ಬರಬೇಕಾದರೆ ಸ್ವಧರ್ಮ ಜ್ಞಾನವೇ ದಿವ್ಯೌಷಧ. ಸ್ವಧರ್ಮದ ಸಂಪೂರ್ಣ ಅರಿವಿಲ್ಲದ ನಾವು ವಿದ್ಯುಚ್ಛಕ್ತಿಯಿಲ್ಲದ ಗಾಜಿನ ಗೋಳಕಗಳ ಗೊಂಚಲಿನಂತೆ ನಿರ್ವೀರ್ಯರಾಗಿ ನಿಸ್ತೇಜರಾಗಿದ್ದೇವೆ.

ಮಹಾತ್ಮರ ತತ್ತ್ವಗಳು ಸಪ್ತಸ್ವರ ಸಂಯೋಜನಾಬದ್ಧ ವೀಣೆಯಿದ್ದಂತೆ. ಹೆಯೇ ನುಡಿಯಲಾರದು. ಕೈಯ್ಯಾಡಿಸಿ ಕೊರಳು ಬೆರಳಿನ ಶ್ರುತಿಗೂಡಿಸಿ ನುಡಿಸಬಲ್ಲ ವೈಣಿಕ ಬೇಕೇ ಬೇಕು. ಇಂತಹ ವೈಣಿಕ ದೊರೆಯದಿದ್ದರೆ ವೀಣೆಯೆ ರ್ಥವಾಗುತ್ತದೆ. ವೀಣೆಯಷ್ಟೇ ಪ್ರಾಮುಖ್ಯತೆ ವೈಣಿಕನಿಗೂ ಇದೆ. ಅದೇ ರೀತಿ ಒಂದು ಧರ್ಮದ ತತ್ತ್ವಗಳನ್ನು ವಿಮರ್ಶಿಸಿ, ಅರಿತು, ಕ್ರಿಯೆಯಲ್ಲಿ ಅಳವಡಿಸಿಕೊಂಡ ದಿವ್ಯಾತ್ಮನು ಮಾತ್ರ ಮಾನವನಿಗೆ ಆಧ್ಯಾತ್ಮ ಸಂದೇಶ ನೀಡಲು ಸಮರ್ಥ. ಒಂದು ಧರ್ಮದ ವೈಚಾರಿಕ ಕ್ರಾಂತಿಗೆ, ಭಕ್ತಿಯ ನೆಲೆಗೆ, ನೀತಿಯ ನೆಲೆಗೆ, ಭಾವಾನುಭೂತಿಯ ಬೆರಗಿಗೆ ಒಳಗಾದ ಮಹಾವ್ಯಕ್ತಿಗೆ ಇತರ ಎಲ್ಲಾ ಧರ್ಮಗಳ ಪರಮ ಗುರಿಯ ಅರಿವಾಗುವುದು ಸಾಧ್ಯ. ಶಬ್ದಾಡಂಬರಗಳಲ್ಲಿ ತೊಳಲಾಡುವ ನಮಗೆ ಪರಸ್ಪರ ವಿರೋಧದಂತೆ ಕಂಡುಬರುವ ಮಹಾತ್ಮರ ನಡೆ ನುಡಿಗಳೆಲ್ಲವೂ ಬಿಂಬ ಪ್ರತಿಬಿಂಬದಂತೆ ಪ್ರತಿಮಾನುಭೂತಿ ಸಂವೇದನೆಯನ್ನುಂಟುಮಾಡುವುವು. ಇಂತಹ ಹಿರಿಯ ಅನುಯಾಯಿಗಳು ಎಲ್ಲಾ ಧರ್ಮ ಪರಂಪರೆಯಲ್ಲಿಯೂ ಉದಯಿಸುತ್ತಲೇ ಇದ್ದಾರೆ. ಆದ್ದರಿಂದ ನಾವು ನಿರಾಶರಾಗಬೇಕಿಲ್ಲ.

ಬುದ್ಧನ ಕರುಣೆ, ಶಂಕರರ ವಿಚಾರ, ರಾಮಾನುಜರ ಮಮತೆ, ಬಸವಣ್ಣನವರ ಭಕ್ತಿ ತ್ಯಾಗಗಳನ್ನು ಮೆಚ್ಚಿ ಆನಂದಿಸಿದ ಯಾವ ವ್ಯಕ್ತಿಯು ಅಮರಜೀವಿಯಾಗಲಾರ? ಬುದ್ಧ ಸಮಾಜದ ಸಂಘಗಳು ಧರ್ಮಭೇದವಿಲ್ಲದೆ ಸಾಮಾನ್ಯ ಜನತೆಗೆ ಶೈಕ್ಷಣಿಕ ನೈತಿಕ ಮೌಲ್ಯಗಳನ್ನೊದಗಿಸಿ ವೈದ್ಯಕೀಯ ನೆರವನ್ನೂ ಒದಗಿಸುತ್ತಿದ್ದುದು ಕಂಡುಬರುತ್ತದೆ.

ಆದರೆ ವೀರಶೈವ ಸಂಪ್ರದಾಯದಲ್ಲಿ ಸ್ಥಾಪಿತವಾದ–ಮಠಗಳು ಜನಗಳ ಜೀವನದಮೇಲೆ ಅಚ್ಚಳಿಯದ ಪ್ರಭಾವ ಬೀರುತ್ತಿವೆ. ಧರ್ಮ, ಜ್ಞಾನ, ಭಕ್ತಿ ಪ್ರಸಂಗದಲ್ಲಿ ಹಿರಿಯ ಪಾತ್ರವಹಿಸಿವೆ. ಜಾತಿಭೇದವಿಲ್ಲದೆ ಸಮಾಜದಲ್ಲಿ ನೈತಿಕ ಸ್ಥಿರತೆಯನ್ನು ಕಾಪಾಡುವುದರಲ್ಲಿ ಈ ಮಠಗಳು, ಕ್ಷೇತ್ರಗಳು



ಉತ್ತಮ ಪಾತ್ರವನ್ನು ಈಗಲೂ ನೆರವೇರಿಸುತ್ತಿವೆ. ಈ ದಿಶೆಯಲ್ಲಿ ರಾಮಕೃಷ್ಣಾಶ್ರಮಗಳೂ ಸಾಕಷ್ಟು ಸೇವೆಯನ್ನು ಸಲ್ಲಿಸುತ್ತಿವೆ.

ಸಂಘ, ಆಶ್ರಮ, ಮಠ, ಕ್ಷೇತ್ರಗಳು ಸಾವಿರಾರು; ಕೆಲವು ಸಂಪ್ರದಾಯ ದ್ಯೋತಕಗಳು, ಕೆಲವು ಗುರುಭಕ್ತ ಧರ್ಮ ಪ್ರತೀಕಗಳು. ಕೆಲವು ಉತ್ಸವ ಪರಂಪರೆಗಳಿಗೆ ಮೀಸಲಾದುವುಗಳು. ಇನ್ನೂ ಕೆಲವು ಸಂಪೂರ್ಣ ಸ್ವಜಾತೀಯವಾದವುಗಳು. ಆದರೆ ಅಲ್ಲಲ್ಲಿ ಕೆಲವು ಅಖಂಡ ಜನತೆಯ ಪ್ರಾತಿನಿಧಿಕ ಸಂಸ್ಥೆಗಳಾಗಿ, ಸಾರ್ವಜನಿಕ ಭಕ್ತಿ ಕ್ಷೇತ್ರಗಳಾಗಿ, ಜ್ಞಾನಯಜ್ಞ ವೇದಿಕೆಗಳಾಗಿ ಬಾಳಿ ಬೆಳಗುತ್ತಿವೆ. ಇಂತಹ ಮಹಾಕ್ಷೇತ್ರಗಳಲ್ಲಿ ಶ್ರೀ ಸಿದ್ಧಗಂಗಾ ಕ್ಷೇತ್ರವು ಪ್ರಮುಖವಾದುದು. ಭವ್ಯ ಪ್ರಾಚೀನ ತಪೋಮಯ ವೈಶಿಷ್ಟ್ಯಮಯ ಕ್ರಿಯಾಕಲಾಪಗಳ ಚೇತನದಿಂದ ದೇಶದ ಜನತೆಯನ್ನು ಆಶೀರ್ವದಿಸುತ್ತಿದೆ.

1945 ರಲ್ಲಿ ಈಕ್ಷೇತ್ರದ ವಿದ್ಯಾರ್ಥಿಯಾಗಿದ್ದುದು ನನ್ನ ಸುಕೃತ. ಧರ್ಮಜಾತಿ ಪಂಗಡಗಳ ಭೇದವಿಲ್ಲದೆ ಅನ್ನ ಜ್ಞಾನ ದಾನ ಪಡೆಯಬಹುದು. ಎಲ್ಲರಿಗೂ ಮುಕ್ತದ್ವಾರ. ಊಟ ವಸತಿಗಳನ್ನು ಕಲ್ಪಿಸಿರುವ ಇನ್ನೂ ಕೆಲವು ಕ್ಷೇತ್ರಗಳು ನಮ್ಮ ದೇಶದಲ್ಲಿವೆ. ಆದರೆ ಸಂಸ್ಕೃತ ಭಾಷೆಯನ್ನು ಕಲಿಯಲು ಈ ಕ್ಷೇತ್ರದಲ್ಲಿ ಮಾತ್ರವೆಂಬುದು ಸತ್ಯ ಸಂಗತಿ. ಉಚಿತ ಊಟ ವಸತಿ ಬೋಧನೆ ದೊರೆಯುತ್ತಿರುವ ಈ ಕ್ಷೇತ್ರ ದೀನ ದಲಿತ ವಿದ್ಯಾರ್ಥಿಗಳ ಕಾಮಧೇನು. ಆಗ ಕೇವಲ 500 ವಿದ್ಯಾರ್ಥಿಗಳಿದ್ದೆವು. ಇಂದು 4000 ವಿದ್ಯಾರ್ಥಿಗಳಿದ್ದಾರೆ. ಇವರೆಲ್ಲರೂ ಸಂಸ್ಕೃತ ಓದಲೇಬೇಕು ಆದರೆ ಇತ್ತೀಚೆಗೆ ಕೆಲವರಿಗೆ ವಿನಾಯಿತಿ ದೊರೆತಿದೆ. ಶಿಕ್ಷಣಕ್ಷೇತ್ರದ ವೈವಿಧ್ಯಪೂರ್ಣ ಪಾಠಶಾಲೆಗಳು ಶ್ರೀಕ್ಷೇತ್ರದ ಆಶ್ರಯದಲ್ಲಿ ಬೆಳಗುತ್ತಿವೆ. ಪರಮ ಪೂಜ್ಯ ಶ್ರೀ ಶ್ರೀ ಗಳ ನೇತೃತ್ವದಲ್ಲಿ ಕ್ಷೇತ್ರದ ಸಾರಸ್ವತಪೀಠ ನಿತ್ಯ ನೂತನ ಉತ್ಸಾಹದಿಂದ ಬೆಳಗುತ್ತಿದೆ.

ಶ್ರೀ ಶ್ರೀ ಗಳವರು ಸಂಸ್ಕೃತ, ಇಂಗ್ಲೀಷ್, ಕನ್ನಡಗಳಲ್ಲಿ ಪರಿಣತರು. ಈ ಭಾಷೆಗಳಲ್ಲಿರುವ ಗಣ್ಯ ದರ್ಶನಶಾಸ್ತ್ರಗಳನ್ನು ವೈಚಾರಿಕ ದೃಷ್ಟಿಯಿಂದ ಮನನಮಾಡಿಕೊಂಡಿದ್ದಾರೆ. ಯಾವ ಧರ್ಮ ಜಾತಿಗಳ ಪಕ್ಷಪಾತವಿಲ್ಲದೆ ಎಲ್ಲಾ ವಿದ್ಯಾರ್ಥಿಗಳಲ್ಲೂ ಆದರ, ಅಭಿಮಾನಗಳನ್ನಿಟ್ಟಿದ್ದಾರೆ. ವೀರಶೈವೇತರ ಜಾತಿ ಪಂಗಡಗಳ ಮಕ್ಕಳಿಗೆ ಸಾಕಷ್ಟು ಆಶ್ರಯವಿಲ್ಲವೆಂಬ ಅನುಕಂಪದಿಂದ ಕೂಡಿದ್ದಾರೆ. ಸ್ವಧರ್ಮದ ನಾಯಕರಲ್ಲಿಯೇ ಕಾಣದ ಔದಾರ್ಯ, ಸಹಾಯ, ಆಶೀರ್ವಾದಗಳನ್ನು ಶ್ರೀ ಶ್ರೀ ಗಳವರಲ್ಲಿ ಕಂಡು ಧನ್ಯರಾದ ಹತ್ತಾರು ಸಹಸ್ರ ಶಿಷ್ಯ ಪರಂಪರೆ ಈ ಕ್ಷೇತ್ರಕ್ಕೆ ಮೀಸಲಾಗಿದೆಯೆಂದಮೇಲೆ, ಈ ಕ್ಷೇತ್ರದ ಪವಿತ್ರ ಭಾವನೆಗೆ ಮತ್ತಾವ ಸಾಕ್ಷಿಯೂ ಬೇಕಿಲ್ಲ. ಎಂತಹ ವಿಷಮ ಸಂದರ್ಭದಲ್ಲಿಯೂ ಮತ ಧರ್ಮಗಳ ಪಕ್ಷಪಾತಮಾಡದೆ ಅಚಲ ಮನಸ್ಕರಾದ ಧೀರ ಗಂಭೀರ ಕ್ರಿಯಾಶೀಲ ಯೋಗಿಗಳಾದ ಶ್ರೀ ಶ್ರೀ ಗಳವರು. ಈ ಕ್ಷೇತ್ರದ ಕುಲಪತಿಗಳಾಗಿ, ಗುರುಗಳಾಗಿ, ಬೋಧಕರಾಗಿರುವುದು ನಮ್ಮ ನಾಡಿನ ಪುಣ್ಯ ವಿಶೇಷ.

ಶ್ರೀ ಕ್ಷೇತ್ರದ ಆಸ್ತಿ ವರಮಾನಗಳಿಂದ ಕೇವಲ 200 ಅಥವಾ 300 ವಿದ್ಯಾರ್ಥಿಗಳಿಗೆ ಮಾತ್ರ ಊಟ ವಸತಿ ಕಲ್ಪಿಸಬಹುದು. ಕಾಣಿಕೆಯನ್ನು ಕೊಡಲೇಬೇಕಾದ ಯಾವ ಧಾರ್ಮಿಕ ಪಂಗಡದ ಭಕ್ತರೂ ಈ ಕ್ಷೇತ್ರಕ್ಕಿಲ್ಲ. ಕಾಣಿಕೆ ತಪ್ಪದೆ ಬರುವ ಮಠಗಳ ಆರ್ಥಿಕ ಪರಿಸ್ಥಿತಿ ಭದ್ರವಾಗಿರುತ್ತದೆ. ಕ್ಷೇತ್ರಕ್ಕೆ ಬಂದು ದರ್ಶನ ಪಡೆದು ಊಟಮಾಡಿ ಹೋಗುವ ಭಕ್ತರೇ ಬಹಳ. ಒಂದು ಸಾರಿ ಶ್ರೀಕ್ಷೇತ್ರದ ಶಿಷ್ಯರಾದರೆ ಅವರು ಆಜೀವ ಪರ್ಯಂತ ಶಿಷ್ಯರೇ. ಇವರ ಸೇವೆಯೆಂದರೆ ಆಗಾಗ ಮಠಕ್ಕೆ ಹೋಗಿ ಶ್ರೀ ಶ್ರೀ ಗಳವರ ದರ್ಶನ ಪಡೆದು, ತಮ್ಮ ವರ್ಗಾವರ್ಗಿ, ಉದ್ಯೋಗ ಕಷ್ಟಗಳನ್ನು ಬಿನ್ನವಿಸಿಕೊಂಡು ಪರಿಹಾರ ಬೇಡಿಕೊಳ್ಳುವುದು. ಮೊದಲೇ ಅವಿರಳ ಕಾರ್ಯಕಮಗಳಿಂದ ಬಳಲಿದ ಶ್ರೀ ಶ್ರೀಗಳವರಿಗೆ ಮತ್ತಷ್ಟು ಬಳಲಿಕೆಯನ್ನುಂಟುಮಾಡುವುದು. ಅಂತೂ ನಮ್ಮ ಕೆಲಸವಂತೂ ಆಗಿಯೇ ಆಗುತ್ತದೆ. ಏಕೆಂದರೆ ನಾವು ಶಿಷ್ಯರಲ್ಲವೆ? ನಮಗೆ ಗುರುಗಳಾದ್ದಕ್ಕೆ ಶ್ರೀ ಶ್ರೀ ಗಳವರು ಸಹಾಯ ಮಾಡಲೇಬೇಕು. ಅದುವರೆಗೂ



ನಾವು ಬಿಡಬೇಕಲ್ಲ. ಹೀಗೆಯೇ ಬೆಳೆದು ಬಂದಿದೆ ನಮ್ಮ ಕ್ಷೇತ್ರದ ಶಿಷ್ಯ ಪರಂಪರೆ.

ಶ್ರಿ ಶ್ರೀಗಳವರೂ "ನೀವು ಎಲ್ಲಿಯೇ ಇರಿ", ನೈಷ್ಠಿಕ ಜೀವಿಗಳಾಗಿ ಬದುಕಿರಿ. "ನಿಮಗೆ ಶ್ರೀ ಸಿದ್ಧಲಿಂಗೇಶ್ವರನ ಅನುಗ್ರಹವಿದೆ ಅನುಗ್ರಹವಾಗುತ್ತದೆ" ಎಂದು ಎದೆ ತುಂಬಿ ಹರಸುವರು. ಇಲ್ಲಿಯ ಮಹತ್ಕಾರ್ಯಗಳನ್ನು ಕಂಡ ಶ್ರೀಮಂತ ಭಕ್ತರು, ಕೆಲ ಸಾಮಾನ್ಯ ಜನತೆ ಆಗಾಗ ಕೊಡುಗೈಯಿಂದ ಕಾಣಿಕೆ ಯರ್ಪಿಸುತ್ತಾರೆ. ಆದರೆ 4000 ವಿಧ್ಯಾರ್ಥಿಗಳ ಊಟ, ದಿನದ 400–500 ಜನರ ದಾಸೋಹ ಊಟಗಳಿಗೆ ಎಷ್ಟು ಹಣ ಬೇಕು? ಇಲ್ಲಿಯ ಬೃಹತ್ ಕಟ್ಟಡ ನಿರ್ಮಾಣದ ಭಾರವೇನು? ಅಲ್ಪ ಆದಾಯದ ಮಠವು ಅನ್ನದಾನದ ಮಹಾಮನೆಯಾದುದು ಹೇಗೆ? ಅನೇಕ ಪಾಠಶಾಲೆಗಳ ಅನುಭವ ಮಂಟಪವಾದುದು ಹೇಗೆ? ಇದೊಂದು ನಮ್ಮ ಬಗೆಗಾಣದ ಒಗಟು. ಇದೊಂದು ವೈಚಾರಿಕ ಕ್ರಾಂತಿಯ ಪವಾಡವೆಂದೇ ಹೇಳಬಹುದು. ತಪೋಮಯ ವ್ಯಕ್ತಿಯ ಮಹತ್ಕಾರ್ಯವೆಂದು ಮಾತ್ರ ಹೇಳಲು ಸಾ

ಪ್ರತಿ ಸಾಯಂಕಾಲ ಸಾಮೂಹಿಕ ಪ್ರಾರ್ಥನೆ, 4000 ವಿದ್ಯಾರ್ಥಿಗಳೂ ಶಿಸ್ತಿನಿಂದ ನಮ್ರರಾಗಿ ನಿಂತಿರುವುದು. ಶ್ರಿ ಶ್ರಿ ಗಳವರು ಅಪ್ಪಣೆ ಕೊಡಿಸುವ ಭಗವದ್ಗೀತೆ ಮತ್ತು ಶಂಕರಾಚಾರ್ಯರು, ನಿಜಗುಣ ಶಿವಯೋಗಿಗಳ ಗೀತೆಗಳನ್ನು ಒಕ್ಕೊರಲಿನಿಂದ ಪಠಿಸುವುದು. ಎಂತಹ ಅಲೌಕಿಕ ಭಾವನಾತ್ಮಕ ದೃಶ್ಯ—ಕಂಡು ಕೇಳಬೇಕು ಈ ಓಂಕಾರ ನಿನಾದವನ್ನು. ಸನಿಹದ ಬೆಟ್ಟ ಮಾರ್ದನಿಗುಡುತ್ತದೆ. ನಮ್ಮೆದೆ ಮಿಡಿದು ಪ್ರತಿಧ್ವನಿಗುಡಲಾರದೆ? ಅಲ್ಲದಿದ್ದರೆ ನಾವು ಕಲ್ಲಿಗೂ ಕಠಿಣರು. ನಮ್ಮನ್ನು ಯಾವ ಧರ್ಮವೂ ಏನೂ ಮಾಡಲಾರದು.

ಬರೆಯುತ್ತ ಹೊರಟರೆ ಬಹಳವಾಗುತ್ತದೆ. ಎಷ್ಟು ಬಹಳ ಬರೆದರೂ ಕಡಿಮೆ ಎನಿಸುತ್ತದೆ. ಶ್ರಿ ಕ್ಷೇತ್ರದಲ್ಲಿ 1949 ರಲ್ಲಿ ನಡೆದ ಸರ್ವಧರ್ಮ ಸಮ್ಮೇಳನದ ಒಂದು ಘಟನೆಯನ್ನು ಚಿತ್ರಿಸಿ ಈ ಲೇಖನ ಮುಗಿಸುತ್ತೇನೆ.

ಶ್ರೀ ಶ್ರೀಗಳವರಿಗೆ ಎಲ್ಲಾ ಮಹಿಮರ ದರ್ಶನಗಳಲ್ಲಿ ಬದಳ ಆದರ. ಅಂದೂ ಇಂದೂ ಉತ್ತಮ ವಿದ್ವಾಂಸರ ಸಂಗಡ ಸಮಯ ದೊರೆತಾಗಲೆಲ್ಲಾ ವಿಚಾರ ವಿನಿಮಯ ನಡೆಸುವುದೇ ಹವ್ಯಾಸವಾಗಿದೆ. ಎಲ್ಲಾ ಧರ್ಮ ದರ್ಶನಗಳ ವಿಚಾರಪೂರಿತ ಸಭೆ ನಡೆಸಬೇಕೆಂದು ತೀರ್ಮಾನಿಸಿದರು. ಭವ್ಯವಾದ ವೇದಿಕೆ, ಸಭಾ ಮಂಟಪ ಸಿದ್ಧವಾಯಿತು. ಎಲ್ಲಾ ಧರ್ಮ ದರ್ಶನಗಳನ್ನು ಅಧಿಕೃತವಾಗಿ ಪ್ರತಿನಿಧಿಸಬಲ್ಲ ವಿದ್ವಾಂಸರಿಗೆ ಆಹ್ವಾನವಿತ್ತರು. ಸಭೆಯ ಅಧ್ಯಕ್ಷರು ಶ್ರೀ ಆರ್ಕಾಟ್ ರಾಮಸ್ವಾಮಿ ಮೊದಲಿಯಾರರು, ಉದ್ಘಾಟಕರು ಶ್ರೀ ಕೆ. ಸಿ. ರೆಡ್ಡಿಯವರು. ಸುಮಾರು 7-8 ಸಾವಿರ ಸಭಾಸದಸ್ಯರು. ಎಲ್ಲರಿಗೂ ಉಚಿತ ಅನ್ನ ಸಂತರ್ಪಣೆ. ವಿಚಾರ ಪೂರಿತ ಉಪದೇಶವಾಣಿ, ಸುಖ ಭೋಜನ, ಮತ್ತೇನು ಬೇಕು ?

ಮೊದಲನೆಯ ದಿನ ಬೌದ್ಧ, ಜೈನ, ಕ್ರೈಸ್ತ, ಇಸ್ಲಾಂ, ವೈಷ್ಣವ ಧರ್ಮ ದರ್ಶನಗಳನ್ನು ಅನೇಕ ವಿದ್ವಾಂಸರು ವಿಚಾರಪೂರಿತ, ನಿದರ್ಶನ ಪೂರ್ವಕ, ತರ್ಕ ಬದ್ಧ ವಾಣಿಯಲ್ಲಿ ಪ್ರತಿಪಾದಿಸಿದರು. ಯಾರ ಮನಸ್ಸಿಗೂ ನೋವಾಗದಂತೆ, ಯಾವ ಧರ್ಮವನ್ನೂ ಖಂಡಿಸದೆ ಗಂಭೀರ ಶೈಲಿಯಲ್ಲಿ ಪ್ರತಿಪಾದಿಸಿದರು. ಮೊದಲೇ ಪ್ರಾಸ್ತಾವಿಕ ಸಂದೇಶದಲ್ಲಿ ಶ್ರೀ ಶ್ರೀಗಳವರು

"ಮಾತು ಗಂಭೀರವಾಗಿರಲಿ, ಟೀಕೆ ಟಿಪ್ಪಣಿಗಳು ಕಟುವಾಗಿರಬಾರದು, ಔಚಿತ್ಯದ ಮೇರೆ ಮೀರಿ ಯಾವ ಧರ್ಮವನ್ನೂ ತಿರಸ್ಕರಿಸಬಾರದು, ಮಾತಿನಲ್ಲಿ ಸಂಯಮವಿರಲಿ. ಖಂಡನೆಗಿಂತಲೂ ಮಂಡನೆಯೇ ಈ ಮಹಾ ಸಭೆಯ ಗುರಿಯಾಗಿರಲಿ" ಎಂದು ಎಚ್ಚರಿಸಿದ್ದರು. ಇದರಂತೆಯೇ ಮೊದಲನೇ ದಿನದ ಕಾರ್ಯಕ್ರಮ ಯಶಸ್ವಿಯಾಯಿತು.

ಮಾರನೆಯ ದಿನ ಬೆಳಗಿನ 9 ಘಂಟೆಗೆ ಸಭೆ ಸೇರಿತು ಒಬ್ಬ ವಿದ್ವಾಂಸರು ವೀರಶೈವ ಧರ್ಮ ದರ್ಶನಗಳಲ್ಲಿ ವಿಚಾರ ಪೂರಿತ ಉಪನ್ಯಾಸ ಮಾಡಿದರು. ಆದರೆ ಕೊನೆ ಕೊನೆಗೆ ಏಕೋ ಏನೋ ಬೌದ್ಧ ಧರ್ಮದ ಮೇಲೆ ಗದಾಪ್ರಹಾರ ಮಾಡತೊಡಗಿದರು. ಪ್ರಸಿದ್ಧ ಕವಿಗಳು ಬಳಸಿದ "ಪರವಾದಿಗಳು" ಎಂಬ ಬಿರುದನ್ನು ಬೌದ್ಧರು ನಾಸ್ತಿಕರು- ಎಂದು ಹೇಳಿದರು. ಅಷ್ಟೇ ಅಲ್ಲ ಬುದ್ಧನ ನಡೆನುಡಿಗಳಲ್ಲಿ ಅನೇಕ ಸಂದೇಹಾಸ್ಪದವಾದ ಮಾತುಗಳನ್ನಾಡಲು ಪ್ರಾರಂಭಿಸಿದರು. ಆಗ ಶ್ರೀ ಶ್ರೀಗಳವರು ಅವರಿಗೆ ಉಪನ್ಯಾಸ ನಿಲ್ಲಿಸಲು ಸೂಚನೆ ಕೊಟ್ಟರು.

ಶ್ರೀ ಶ್ರೀಗಳವರು ವೇದಿಕೆಯ ಮೇಲೆ ನಿಂತು "ಪ್ರತಿಯೊಬ್ಬರೂ ತಮ್ಮ ಧರ್ಮವನ್ನು ಸಮರ್ಥಿಸಿಕೊಳ್ಳಬಹುದು ಆದರೆ ಭಗವಾನ್ ಬುದ್ಧದೇವನಂತಹ ಮಹಾ ಕಾರಣಿಕನನ್ನು ವಿಮರ್ಶಿಸಿ ತೀರ್ಮಾನ ಕೊಡಲು ಈ ವೇದಿಕೆಯನ್ನು ಉಪಯೋಗಿಸಿಕೊಳ್ಳುವುದು ಮೂರ್ಖತನ. ಇದರಿಂದ ನನಗೂ ಇತರ ವಿಚಾರವಂತರಿಗೂ ಬಹಳ ವ್ಯಥೆಯಾಗಿದೆ" ಎಂದು ತಿಳಿಸಿ ವ್ಯಗ್ರಮನದಿಂದ ಸಭೆಯನ್ನ ಮಧ್ಯಾಹ್ನಕ್ಕೆ ಮುಂದುವರಿಸಿದರು. ಶ್ರೀ ಶ್ರೀಗಳವರು ಆ ದಿನದ ಮಧ್ಯಾಹ್ನದ ಭೋಜನವನ್ನೇ ನಿರಾಕರಿಸಿದರು. 30-40 ಸಾವಿರ ರೂಪಾಯಿ ಖರ್ಚು ಮಾಡುತ್ತಿರುವುದು ವ್ಯರ್ಥವೆ? ಧರ್ಮ ವಿದ್ವೇಗದ ಹೊಗೆಯನ್ನು ನಂದಿಸಲು ಪ್ರಯತ್ನಿಸುವ ಮಹಾಮಂಟಪದಿಂದಲೇ ದ್ವೇಷದ ಕಿಡಿಗಳು ಹಾರುವದಲ್ಲಾ ಎಂದು ವ್ಯಥೆ.

ಶ್ರೀ ಶ್ರೀಗಳವರಿಗೆ ಬುದ್ಧದೇವನ ವಿಷಯದಲ್ಲಿ ಬಹಳ ಆದರ ಮಮತೆ. ಆ ಮಹಾವ್ಯಕ್ತಿಯ ಮಾನವೀಯತೆಗೆ ಮಾರುಹೋಗಿದ್ದರು. ಅಂತಹ ಮಹಾ ಮಹಿಮನಿಗೆ ಹೀನಾಯದ ಮಾತುಗಳನ್ನಾಡಿದ್ದು ಅವರ ಮನಸ್ಸಿನ ಅಧ್ಯಾತ್ಮ ಚಿಲುಮೆಯನ್ನೇ ಕೆರಳಿಸಿದಂತಾಗಿತ್ತು. ಆ ಉಪನ್ಯಾಸಕರ ಮೇಲೆ ಕಣ್ಣುಗಳು ಕಿಡಿ ಕಾರಿದರೂ, ಬಾಯಿಂದ ಬಿರುನುಡಿಗಳು ಬರಲಿಲ್ಲ. ಮಧ್ಯಾಹ್ನದ ಸಭೆಯಲ್ಲಿ ಮೊದಲು ಬುದ್ಧ ದೇವನ ಘನತೆಯ ವಿಷಯದಲ್ಲಿ ಮಾತಾಡಬೇಕೆಂದು ನನಗೆ ಆದೇಶ ಬಂದಿತು. ನಾನು ಬೆದರಿದೆ, ನಾನು ಅಸಮರ್ಥನೆಂದು ಬೇಡಿಕೊಂಡೆ. ಸನ್ನಿಧಿಯವರು ಬಿಡಲಿಲ್ಲ. "ಮಾತಾಡು" ಎಂದಪ್ಪಣೆ ಮಾಡಿದರು. ಶ್ರೀ ಶ್ರೀಗಳವರೇ ಕೆಲವು ಸೂಚನೆ ಸಲಹೆ ಕೊಟ್ಟರು.



ಮಧ್ಯಾಹ್ನ ವೇದಿಕೆಯ ಮೇಲೆ ನಿಂತೆನು. ಏನೋ ನಡುಗು, ತೊದಲು, ಕ್ಷಣಮಾತ್ರ. ಅನಂತರ ಬುದ್ಧ ದೇವನ ಘನತೆ, ತ್ಯಾಗ, ಕರುಣೆಗಳ ಬಗ್ಗೆ ನಿದರ್ಶನಗಳ ಸಮೇತ ನಿರರ್ಗಳವಾಗಿ ಮಾತಾಡಿದೆನು. ಶ್ರೀ ಶ್ರೀ ಗಳವರ ಅನಂತರ ಉಳಿದ ಇತರ ಧರ್ಮ ದರ್ಶನಗಳ ಮೇಲೆ ವ್ಯಾಖ್ಯಾನವಾಯಿತು. ಮೂರನೆಯ ದಿನ ಶ್ರೀ ಶ್ರೀಗಳವರು ಎಲ್ಲಾ ದರ್ಶನಗಳ ಸಮನ್ವಯವನ್ನು ಹೃದಯಂಗಮವಾಗಿ ವಿವೇಚಿಸಿ ವಿವರಿಸಿದರು. ಮಹಾತ್ಮರ ಹೃದಯದಲ್ಲಿ ಹರಿಯುತ್ತಿರುವ ಸಮಾನದೃಷ್ಯ, ಕಾಲಧರ್ಮವನ್ನನುಸರಿಸಿ ಹೇಗೆ ಜನತೆಗೆ ಸಂದೇಶ ನೀಡಲು ಸಮರ್ಥವಾಯಿತೆಂಬುದನ್ನು ವಿವರಿಸಿದರು.

ಮೂರನೆಯ ದಿನ ಸಮಾರಂಭ ಮುಕ್ತಾಯ...ಯಿತು. ಎಲ್ಲಾ ಧರ್ಮದ ವಿದ್ವಾಂಸರಿಗೂ ಸಂಭಾ...ನೆಗಳನ್ನು ಕೊಟ್ಟು ಆಶೀರ್ವದಿಸಿ ಆತ್ಮೀಯ ಅಕ್ಕರೆ...ಂದ ಬೀಳ್ಕೊಟ್ಟರು. ಇಂತಹ ವೈಶಾಲ್ಯತೆ, ...ೂರ್ವವಾದುದು. ಒಂದು ಮಹಾಧರ್ಮದ ಜೀವಂತ ...್ಯಗಳನ್ನು ಜೀವನದಲ್ಲಿ ಅಳವಡಿಸಿಕೊಂಡು, ಅನು...ಾವಿಗಳಾದವರಿಗೆ ಮಾತ್ರ ಇಂತಹ ವಿಶ್ವಭ್ರಾತೃತ್ವ ಭಾವನೆ ಬರಲು ಸಾಧ್ಯ. ರಾಮಕೃಷ್ಣಪರಮಹಂಸರು ಕಾಳಿಕಾದೇವಿಯ ಭಕ್ತರು. ಇವರ ಪರಮ ಧ್ಯೇಯ ಮಾತೆಯ ಸಾಕ್ಷಾತ್ಕಾರ ತಪಸ್ಸಿನ ಫಲದಿಂದ ಈ ಸಿದ್ಧಿ ಪಡೆದರು. ತದನಂತರ ಕಾಳಿಕಾದೇವಿಯ ಮೂಲಕವೇ ಇತರ ಧರ್ಮಗಳ ಪ್ರವಾದಿಗಳ ದರ್ಶನವನ್ನು ಪಡೆದರಂತೆ

ಶ್ರೀ ಶ್ರೀಗಳವರ ವಿಚಾರ ಸರಣಿಯಿಂದ ಯಾವ ಪೂರ್ವ ಪಶ್ಚಿಮ ದರ್ಶನ ಶಾಸ್ತ್ರಗಳಾಗಲಿ, ಸನಾತನ ನೂತನ ಸಂಪ್ರದಾಯಗಳಾಗಲಿ ವಂಚಿತವಾಗಿಲ್ಲ. ಅದರದರ ಸ್ಥಾನದಲ್ಲಿ ಅದರ ಮಹತ್ವವನ್ನು ಮನಮುಟ್ಟುವಂತೆ ವಿವರಿಸುವ ಅನುಭವ ಪಡೆದಿದ್ದಾರೆ. ಜೊತೆಗೆ ಶ್ರೀ ಶ್ರೀಗಳವರು ಉತ್ತಮ ಸಾಹಿತಿಗಳು. ಹಳಗನ್ನಡ ಕಾವ್ಯಗಳಲ್ಲಿ ಅಪಾರ ಅಭಿಮಾನ. ಸಂಸ್ಕೃತ, ಇಂಗ್ಲೀಷ್ ಸಾಹಿತ್ಯಗಳಲ್ಲಿ ಅಭಿರುಚಿ ಟಾಲ್‌ಸ್ಟಾಯ್ ಸಾಹಿತ್ಯವಂತೂ ಇವರ ಅತಿ ಮೆಚ್ಚುಗೆಗೆ ಪಾತ್ರವಾಗಿದೆ. ಸರ್ವಧರ್ಮ ಸಮ್ಮೇಳನ ಮಾತ್ರವಲ್ಲ 1963ರ ಡಿಸೆಂಬರ್‌ನಲ್ಲಿ ಸಾಹಿತ್ಯ ಪರಿಷತ್ತೂ ಶ್ರೀ ಕ್ಷೇತ್ರದಲ್ಲಿ ಸೇರಿತ್ತು. ಆಗ ರಂ. ಶ್ರೀ. ಮುಗಳಿಯವರು ಅಧ್ಯಕ್ಷರಾಗಿದ್ದರು. ಮೂರು ದಿನಗಳ ಈ ಕಾರ್ಯಕ್ರಮಗಳಲ್ಲಿ ಸನ್ನಿಧಿಯವರ ವ್ಯಕ್ತಿತ್ವ ಎದ್ದು ಕಾಣುತ್ತಿತ್ತು. ಬಂದವರೆಲ್ಲರಿಗೂ ಉಚಿತವಾದ ಸುಖ ಭೋಜನ, ಧರ್ಮ, ಸಾಹಿತ್ಯ, ಸಂಸ್ಕೃತಿ ಎಲ್ಲಾ ಜೀವರ ಸುಖದ ಬಯಕೆಗಳಿಗಾಗಿ ತಮ್ಮ ತಪೋಮಯ ಜೀವನವನ್ನೇ ಧಾರೆಯೆರೆದಿರುವ ಶ್ರೀ ಶ್ರೀಗಳವರಿಗೆ ನಾವು ಸಲ್ಲಿಸುತ್ತಿರುವ, ಸಲ್ಲಿಸಬೇಕಾದ ಕಾಣಿಕೆಯೇನು ? ಜನತೆಯೇ ಇದನ್ನು ಯೋಚಿಸಬೇಕು. ಅನೇಕ ತ್ಯಾಗಗಳ ಕಾರಣದಿಂದ ಕಟ್ಟಿ ಬೆಳಸಿದ ಈ ಮಹಾಸಂಸ್ಥೆಯ ಲಾಭವನ್ನು ಸರ್ವಮತಿಯರೂ ಬಳಸಿಕೊಳ್ಳಬೇಕಾದ ಹಾಗೆ ಶ್ರೀ ಕ್ಷೇತ್ರದೊಡನೆ ನಡೆದುಕೊಂಡು ಜನ ಸುಖಿಸಬೇಕು.

ಶ್ರೀ ಶ್ರೀಗಳವರು ಏನೇ ತೊಡರು, ಕ್ಲೇಶಗಳು ಶ್ರಮಗಳಾದರೂ ತಮ್ಮ ಅವ್ಯಾಹತ ಕರ್ಮಯೋಗದ ಮಹಿಮೆಯಿಂದ ಶ್ರೀಕ್ಷೇತ್ರವನ್ನು ಶಾರದೆಯ ಪೀಠವನ್ನಾಗಿಸಿದ್ದಾರೆ. ಶ್ರೀ ಕ್ಷೇತ್ರದ ತಪೋಮಯ ವಾತಾವರಣ ಶ್ರೀ ಶ್ರೀಗಳವರಿಗೆ ನಿತ್ಯ ನೂತನ ಚೇತನವನ್ನೀಯುತ್ತಿದೆ. ಇಂತಹ ಮಹತ್ಪ್ರಯತ್ನದಲ್ಲಿ ಮಗ್ನರಾದ ಯೋಗಿಗಳಿಗೆ ಜನತೆ ನಾಡು ಸರ್ವಕಾಲಕ್ಕೂ ಕೃತಜ್ಞರಾಗಿರಬೇಕೆಂಬುದೇ ನಮ್ಮ ಹಾರೈಕೆ.



## ಶ್ರೀ ಕೆ. ಮಹಾಬಲ ಭಂಡಾರಿ ಅವರ

# ಚೊಚ್ಚಿಲು ಕೃತಿ "ಸಮಾಗಮ"

ಸಮೀಕ್ಷೆ:—ಬಿ. ಕೆ. ತಿಮ್ಮಪ್ಪ, ಕಾಸರಗೋಡು.

ಶ್ರೀಯುತ ಕೆ. ಮಹಾಬಲ ಭಂಡಾರಿ ಅವರಿಂದ ರಚಿತವಾದ ‘ಸಮಾಗಮ’ ಕಾದಂಬರಿ ಅವರ ಚೊಚ್ಚಿಲು ಕೃತಿ. ಸಣ್ಣ ಕಥೆಗಳ ಸಾಲಿನಲ್ಲಿ ದೊಡ್ಡದು. ಕಾದಂಬರಿಯ ಪಂಕ್ತಿಗಳಲ್ಲಿ ಚಿಕ್ಕದು. ಈ ಕೃತಿ ರಚನೆಯಾದ ಕಾಲದಲ್ಲಿ ಉದಯೋನ್ಮುಖ ಬರಹಗಾರರ ಸಾಲಿನಲ್ಲಿ ಭಂಡಾರಿಗಳೂ ನಿಲ್ಲಬಲ್ಲ ಶಕ್ತಿಯನ್ನು ಸಂಪಾದಿಸಿಕೊಂಡಿದ್ದರು ಎನ್ನುವುದನ್ನು ಅವರ ಕಾದಂಬರಿ ಸಮರ್ಥಿಸುತ್ತದೆ. ಪ್ರಾದೇಶಿಕ ಜನಜೀವನವನ್ನು ಯಥಾವತ್ತಾಗಿ ಪಡಿಮೂಡಿಸುವ ಪ್ರಯತ್ನ ಈ ಕಾದಂಬರಿಯಲ್ಲಿ ಕಂಡು ಬರುತ್ತದೆ. ಆ ದಿಕ್ಕಿನಲ್ಲಿ ಭಂಡಾರಿ ಅವರು ಬಹುಮಟ್ಟಿಗೆ ಯಶಸ್ವಿಯಾಗಿದ್ದಾರೆಂದು ಹೇಳಬಹುದು.

ಹಳ್ಳಿಯ ಜೀವನವನ್ನು ಕುರಿತು ಅಲ್ಲಿಯ ಜನಜೀವನ ನಿರ್ಮಲ, ಪ್ರಾಮಾಣಿಕ, ಆಡಂಬರ ರಹಿತ ಜೊತೆಗೆ ಅವಿದ್ಯೆಯಿಂದಲೂ ಆವೃತ ಎಂಬ ಸಾಮಾನ್ಯ ಅಭಿಪ್ರಾಯ ಬದಲಾವಣೆಯಾಗುತ್ತಿದ್ದ ಕಾಲದಲ್ಲಿ ರಚಿತವಾದ ಕೃತಿ ಇದು. ಇದನ್ನು ವಿಮರ್ಶಿಸುವಾಗ ಅಂದಿನ ದೇಶ ಕಾಲ ಪರಿಸರಣಗಳ ಅರಿವು ಅಗತ್ಯ. ಹಳ್ಳಿಯಲ್ಲಿ ಹುಟ್ಟಿ ಹಳ್ಳಿಯಲ್ಲೇ ತನ್ನ ಬಾಳನ್ನು ಪೂರೈಸಿದ ಮುದುಕ ಮಾರಪ್ಪ ತನ್ನ ಅಂತ್ಯಕಾಲದಲ್ಲಿ ಆಡಿದ ಮಾತಿನಿಂದ ಹಳ್ಳಿಗಳು ಪ್ರಾಮಾಣಿಕತೆಯಿಂದ ದೂರ ಸರಿಯುತ್ತಿವೆ ಎಂಬ ಅಂಶ ಸೂಚ್ಯವಾಗಿ ಕಂಡು ಬರುತ್ತದೆ. ಧನಿ-ಒಕ್ಕಲುಗಳ ಜೀವನದ ಅಂತರ ವೈವಿಧ್ಯತೆಗಳು ಪ್ರಾರಂಭವಾದದ್ದು ಯಾವಾಗವೆಂದು ಗುರುತಿಸುವುದು ಕಷ್ಟವಾದರೂ ಧನಿ ಒಕ್ಕಲುಗಳ ಸ್ಥಿತ್ಯಂತರಗಳಲ್ಲಿ ಪರಿವರ್ತನೆಯಾಗತೊಡಗಿದುದನ್ನು ಗುರುತಿಸುವುದು ಕಷ್ಟವೇನಲ್ಲ. ‘ಸಮಾಗಮ’ ಇಂತಹ ಪರಿವರ್ತನೆಯ ಕಾಲದಲ್ಲಿ ರಚಿತವಾದ ಕೃತಿಯಾದರೂ ಕಾದಂಬರಿಯಲ್ಲಿ ಚಿತ್ರಿತರಾದ ವ್ಯಕ್ತಿಗಳಲ್ಲಿ ಆ ತೆರನಾದ ಪರಿವರ್ತನೆ ಕಂಡು ಬಂದಿಲ್ಲ.

"ಧನಿಯಿಂದ ಅವನ ಒಕ್ಕಲುಗಳು - ಒಕ್ಕಲುಗಳಿಂದ ಅವರ ಧನಿ." ಬಾಳುತ್ತ ಸೌಹಾರ್ದ, ಪ್ರೀತಿ ಮತ್ತು ವಿಶ್ವಾಸಗಳನ್ನು ತಲೆಮಾರಿನಿಂದ ತಲೆಮಾರಿಗೆ ಉಭಯ ಪಕ್ಷಗಳೂ ಮುಂದುವರೆಸಿಕೊಂಡು ಹೋಗುತ್ತಿದ್ದ ಕ್ರಾಂತಿ ರಹಿತ ಸಮಾಜ ಸ್ಥಿತಿಯ ಚಿತ್ರಣ ಒಂದು ಕಡೆ ಕಂಡು ಬಂದರೆ, ಸ್ವಪ್ರತಿಷ್ಠೆ ಸಾಧನೆಗಾಗಿ ಧನಿಕರು ಬೇಟೆಗೆ ತೊಡಗುತ್ತಾರೆ, ಅದಕ್ಕೆ ಬಲಿಯಾಗುವವರು ಬಡಜನರು ಎಂಬ ವಿಚಾರವನ್ನು ಕಥೆಗೆ ಅಳವಡಿಸಿಕೊಂಡಿದ್ದಾರೆ. ಮಾರಪ್ಪನ ಧನಿಗಳು ಮಾರಪ್ಪನನ್ನು ತುಂಬ ಮಮತೆಯಿಂದ ಕಂಡಿದ್ದರು. ಮಾರಪ್ಪನೂ ಭಕ್ತಿ ಗೌರವಗಳಿಂದ ಧನಿಗಳ ಮನಸ್ಸಿಗೆ ಮೆಚ್ಚಿಗೆಯಾಗಿದ್ದ. ಮಾರಪ್ಪ ತೀರಿಕೊಂಡಾಗ ಧನಿಗಳು ತಾವೇ ಅವನ ಅಂತ್ಯಯಾತ್ರೆಯ ಖರ್ಚನ್ನು ವಹಿಸಿಕೊಂಡರು

ಮಾರಪ್ಪ ತನ್ನ ಇಹಯಾತ್ರೆಯನ್ನು ಮುಗಿಸಿದಾಗ ಅವನ ಕುಟುಂಬದಲ್ಲಿ ಉಳಿದವರು ಅವನ ಮಡದಿ ನೀಲಿ, ಹಿರಿಯ ಮಗ ಮಾಧವ, ಅವನ ಹೆಂಡತಿ ಕಮಲು, ಕಿರಿಯ ಮಗ ರಾಮು. ನೀಲಿ ವ್ಯವಹಾರ ನಿಪುಣೆಯಲ್ಲ. ಗಂಡ ಗತಿಸಿದ ಬಳಿಕ ಅವಳು ನೆಲವನ್ನೆ ಆಶ್ರಯಿಸಿದ ಬಳ್ಳಿ. ಹಿರಿಯ ಮಗ ಮಾಧವ; ಹೆಸರಿಗೆ ಹಿರಿಯವನು ಅಷ್ಟೆ. ವ್ಯಕ್ತಿತ್ವದಲ್ಲಿ ಸ್ವಂತ ಅಸ್ತಿತ್ವವೇ ಕಾಣುವುದಿಲ್ಲ. ಬೆಳೆದಿದ್ದಾನೆ, ಮದುವೆಯಾಗಿದ್ದಾನೆ ಇದಿಷ್ಟೇ ಅವನ ಪಾತ್ರದಲ್ಲಿ ಕಾಣುವ ಅಂಶ. ತನ್ನ ತಮ್ಮ ಶಾಲೆಯಲ್ಲಿ ಯಾವ ತರಗತಿಯಲ್ಲಿ ಓದುತ್ತಿದ್ದಾನೆ ಎನ್ನುವುದನ್ನು ಒಮ್ಮೆಯಾದರೂ ತಿಳಿಯಲು ಆಸಕ್ತಿ ವಹಿಸದಷ್ಟು ತಟಸ್ಥ. ಮಾರಪ್ಪನ ನಿಧನಾನಂತರ ರಾಮಪ್ಪನ ವಿದ್ಯಾಭ್ಯಾಸದ ಬಗ್ಗೆ ಮಾರಪ್ಪ ಕಂಡ ಕನಸನ್ನು ನನಸನ್ನಾಗಿಸುವ ಪ್ರಯತ್ನಕ್ಕೆ ಹೋಗದಿರುವ ಅನಾಸಕ್ತ. ಮಾರಪ್ಪ ಬದುಕಿದ್ದಾಗ ಊರಜಾತ್ರೆಯ ಸಮಯದಲ್ಲಿ ಭೂತದ ಮುಂದೆ ನಿಲ್ಲುವ ಎರಡನೆಯ ಸ್ಥಾನ ಮಾರಪ್ಪನದಾಗಿತ್ತು. ಅವನ ಅನಂತರ ಅದನ್ನು ಉಳಿಸಿಕೊಳ್ಳಲು ಮನಸ್ಸು ಮಾಡದ ಜವಾಬ್ದಾರಿ ಹೀನ ಮಾಧವ. ತಹಸೀಲ್‌ದಾರರ ಮಗ ಸೋನ್ಸ್, ಪೋಲೀಸ್ ಇನ್ಸ್‌ಪೆಕ್ಟರ್ ಮಗ ಕೊಡಗಿನ ಚೆಂಗಪ್ಪ ರಾಮುನ ಸಹಪಾಠಿಗಳು. ಅವರು ಮಾರಪ್ಪನ ಮನೆಗೆ ಒಮ್ಮೆ ಬಂದಿದ್ದಾಗ ಮಾರಪ್ಪ ತೋರಿದ ಆದರ ಆತಿಥ್ಯಗಳಂತಹ ಸನ್ನಿವೇಶಗಳು ಮಾಧವನ ಜೀವನದಲ್ಲಿ ಎಲ್ಲಿಯೂ ತಲೆ ಹಾಕಿಲ್ಲ. ರಾಮು ಮಣೆಗಾರನಾಗುವುದು ಮಾರಪ್ಪನ ಹಿಂದೆಯೇ ಹೋಯಿತು.

ರಾಮುನದೇ ಕಾದಂಬರಿಯಲ್ಲಿ ನಾಯಕ ಪಾತ್ರ. ಅಣ್ಣ ಅನಾಸಕ್ತನಾದರೆ ತಮ್ಮನೂ ಅನಾಸಕ್ತನೆ? ಭೂತದ ಮುಂದೆ ನಿಲ್ಲುವ ಎರಡನೆಯ ಸ್ಥಾನಕ್ಕಾಗಿ ತನ್ನ ಗೆಳೆಯರಾದ ತಿಮ್ಮ ಹೊಲೆಯ ಭಟ್ಯ ಮಮುದೆ, ಸುಬ್ಬ ಮುಂತಾದವರ ಬೆಂಬಲದಿಂದ ಮಹಾಸಾಹಸವನ್ನೇ ಮಾಡಿದ. ತಂದೆಯ ಸ್ಥಾನವನ್ನು ಉಳಿಸಿಕೊಂಡ. ಅಳಿಯ ಸಂತಾನದ ಕಟ್ಟಳೆಯಂತೆ ತಾನೇ ಆ ಸ್ಥಾನವನ್ನು ಪಡೆಯಲು ಬಂದ ಮಂಜಪ್ಪನಿಗೆ ಊರವರಿಂದ ದಂಡ ವಿಧಿಸಲ್ಪಟ್ಟಾಗ ಮಂಜಪ್ಪನಿಗಾದ ಮುಖ ಭಂಗದ ಹಿಂದೆ ರಾಮಣ್ಣನ ಸಾಹಸ, ಅವನ ಗೆಳೆಯರ ಸಾಹಸ ಎದ್ದು ನಿಂತಿದೆ. ಮನೆತನದ ಹಕ್ಕನ್ನು ಉಳಿಸಿಕೊಂಡು ಬಂದ ವೀರ ಪುತ್ರನಿಗೆ, ಅವನ ಗೆಳೆಯರಿಗೆ ನೀಲಿ ಒಂದೇ ಹಂತಿಯಲ್ಲಿ ಊಟಕ್ಕೆ ಬಡಿಸಿದ್ದು – ಜಾತೀಯತೆಯ ಸಂಕುಚಿತ ಸ್ಥಿತಿಯನ್ನು ಮೆಟ್ಟಿ ನಿಂತ ವಿಶಾಲ ದೃಷ್ಟಿಯನ್ನು ಪ್ರತಿಬಿಂಬಿಸುತ್ತದೆ.

ರಾಮನ ವಿಜಯೋತ್ಸಾಹದ ಬೆನ್ನು ಹತ್ತಿ ಬಂತು ಮತ್ತೊಂದು ಸ್ಥಾನ. ಧನಿಗಳ ಮನೆವಾರ್ತೆಯನ್ನು ನೋಡುವ ಶಾನುಭಾಗ ರಾಮಣ್ಣನಾದದ್ದು. ಕಾದಂಬರಿಕಾರರು ಶಾನುಭಾಗರ ಸ್ಥಾನದಿಂದ ರಾಮಣ್ಣನನ್ನು ಆಡಂಬರದ ಗರ್ವದ ಸುಳಿಯಲ್ಲಿ ಎಲ್ಲಯೂ ಸಿಕ್ಕಿಹಾಕಿಕೊಳ್ಳದಂತೆ ನೋಡಿಕೊಂಡಿದ್ದಾರೆ, ಆತ ಜ್ಞಾನಿ, ತನ್ನ ತಂದೆ ಸತ್ತಾಗ ತುಂಬ ಚಿಕ್ಕವನಾಗಿದ್ದ. ಆಗಲೇ ಅವನಿಗೆ ಅತ್ಯಂತ ಗಹನ ವಿಚಾರಗಳ ಅರಿವಿತ್ತು, ಅವನಿಗೆ ಅನಿವಾರ್ಯವಾಗಿ ಬರುವ ಸಾವಿಗೆ ಎದೆಗೆಡಬಾರದು, ದುಃಖಿಸಬಾರದು ಎಂದು ತನಗೆ ತಾನೇ ಧೈರ್ಯ ತಂದುಕೊಳ್ಳುವಂತಹ ವಿವೇಕ ಅವನ ಎಳೆತನದಲ್ಲಿ ಕಂಡಿದೆ.

ನಾಗವೇಣಿ ಪಟ್ಟಣದ ಹುಡುಗಿ ಶಾನುಭಾಗರ ಮಡದಿಯಾಗಿ ಬಂದ ಮೇಲೆ ಶಾನುಭಾಗರ ಮನೆಯಲ್ಲಿ ದೊಡ್ಡ ಬಿರುಕು ಕಾಣಿಸಿಕೊಳ್ಳುತ್ತದೆ. ಅದಕ್ಕೆ ಮಾಧವನ ಹೆಂಡತಿ ಕಮಲಳ ಅಸಹನೆ ಅಸೂಯೆಯೇ ಇಡೀ ಕುಟುಂಬದಲ್ಲಿ ಹಠಾತ್ತನೆ ಎದ್ದು ಬೀಸಿದ ಬಿರುಗಾಳಿ ಕಾರಣ. ಆ ಬಿರುಗಾಳಿಗೆ ಸಿಕ್ಕಿದ ಆ ಕುಟುಂಬದ ವ್ಯಕ್ತಿಗಳು ಒಬ್ಬೊಬ್ಬರು ಒಂದೊಂದು ಕಡೆ ಚದುರಿ ಹೋಗುತ್ತಾರೆ. ತಾನೇ ಎಬ್ಬಿಸಿದ ವಿಷಜ್ವಾಲೆಯಲ್ಲಿ ತಾನೂ ಸಿಕ್ಕಿ ಕೊಳ್ಳುತ್ತಾಳೆ.

1) ಕಮಲಳಿಗಿಂತ ನಾಗವೇಣಿ ನೆರೆಹೊರೆಗೆ ಮೆಚ್ಚುಗೆ.
2) ಕಮಲಳ ಗಂಡನಿಗಿಲ್ಲದ ಸ್ಥಾನಮಾನಗಳು ನಾಗವೇಣಿಯ ಗಂಡನಿಗೆ ದೊರೆತಿವೆ.
3) ಅತ್ತೆ ಕಮಲಳಿಂದ ಮಾಡಿಸುವಷ್ಟು ಕೆಲಸವನ್ನು ನಾಗವೇಣಿಯಿಂದ ಮಾಡಿಸುವುದಿಲ್ಲ.
4) ನಾಗವೇಣಿ ಹೆಣ್ಣು ಕೂಸೊಂದನ್ನು ಹೆತ್ತು ತಾಯಿಯಾಗಿದ್ದಾಳೆ.
5) ತನಗೆ ಮಕ್ಕಳಿಲ್ಲ.

ಕಮಲಳ ಮನಸ್ಸಿನಲ್ಲಿ ಇಷ್ಟೆಲ್ಲವೂ ಎಬ್ಬಿಸಿದ ಗೊಂದಲಗಳನ್ನು ತಡೆಹಿಡಿಯುವ ಶಕ್ತಿ ಪರಿಜ್ಞಾನ ಅವಳಿಗಿಲ್ಲವಾಗುತ್ತದೆ. ಅವಳ ಅಸೂಯೆಯ ಕಿಡಿಗೆ ಬೀಸುಗಾಳಿಯಾಗಿ ಬಂದ ಭಾಗೀರಥಿಯೂ ಸಹಕಾರಿಯಾಗುತ್ತಾಳೆ. ನೀತಿವಂತೆ, ಸೌಜನ್ಯ ಮೂರ್ತಿ ನಾಗವೇಣಿ ಸಮಾಜದ ಕಣ್ಣಿನ ಮುಂದೆ ಕಮಲ ಭಾಗೀರಥಿಯರಿಂದ ಅನೀತಿವಂತೆಯ ಮುದ್ರೆಯೊತ್ತಿಸಿಕೊಂಡು ನಿಲ್ಲುತ್ತಾಳೆ. ತನ್ನ ಮಡದಿ ಅಕಳಂಕಿನಿ ಎಂಬ ನಂಬುಗೆ ಪ್ರಬಲವಾಗಿದ್ದರೂ ಜನಜನಿತವಾದ ವಾರ್ತೆಯನ್ನು ನಂಬದಿದ್ದರೂ ತನ್ನ ಮನೆಯಲ್ಲೇ

ಧನಿಗಳು ಕಾಣಿಸಿಕೊಂಡದ್ದು, ಧನಿಗಳು ಕೊಂಡ ಸೀರೆ ನಾಗವೇಣಿಯ ಪೆಟ್ಟಿಗೆಗೆ ಬಂದದ್ದು ನಾಗವೇಣಿ ಹೆಣೆದ ಬೀಸಣಿಗೆ ಧನಿಗಳ ಕೈಯಲ್ಲಿದ್ದದ್ದು ರಾಮಣ್ಣನಿಗೆ ಬಲವಾದ ಸಾಕ್ಷ್ಯವನ್ನು ನುಡಿದು ಬಿಡುತ್ತವೆ.

ಜೀವನದಲ್ಲಿ ಜಿಗುಪ್ಸೆಗೊಂಡವರಿಗೆ ತೋರುವ ದಾರಿಗಳು ಎರಡು. ಒಂದು ಆತ್ಮಹತ್ಯೆ. ಮತ್ತೊಂದು ಪಲಾಯನ. ಮನಸ್ಸಿನ ಶಾಂತಿಗಾಗಿ ಪಲಾಯನವನ್ನೇ ಆಶ್ರಯಿಸಿದ ಶಾನುಭಾಗರಿಗೆ ಮಂಜೇಶ್ವರದಿಂದ ಮಂಗಳೂರು, ಕಡೂರು, ಪುಣೆ, ಬೊಂಬಾಯಿಗಳಲ್ಲಿ ಹೊಕ್ಕು ಹಿಂದಿರುಗುವಷ್ಟರಲ್ಲಿ ಹದಿನಾಲ್ಕು ವರ್ಷಗಳು ಸಂದುಹೋಗಿರುತ್ತವೆ.

ಸತ್ಯಕ್ಕೇ ಜಯ ಎಂಬ ತತ್ವಕ್ಕೆ ಪ್ರಮಾಣವಾಗಿ ಸತ್ತು ಬದುಕಿದ ನಾಗವೇಣಿಯ ಸಮಾಗಮ ರಾಮಣ್ಣನಿಗಾಗುತ್ತದೆ. ಪಶ್ಚಾತ್ತಾಪದಿಂದ ದಗ್ಧನಾದ ರಾಮಣ್ಣ ಹದಿನಾಲ್ಕು ವರ್ಷಗಳ ನಂತರ ಪವಿತ್ರ ದೃಷ್ಟಿಯಿಂದ ಮಡದಿಯನ್ನು ಸ್ವೀಕರಿಸುತ್ತಾನೆ.

ಇನ್ನುಳಿದ ಪಾತ್ರಗಳಲ್ಲಿ ವೆಂಕಟ್ರಾಯ ಕಮ್ತಿ ಮತ್ತು ಮಮ್ಮದೆ ಗಣ್ಯರು. ತಿಮ್ಮ, ಭಟ್ಯ, ತಿಮ್ಮನ ಮಗ ನಿಂಗ ಇವರೆಲ್ಲ ಸಜೀವ ಪಾತ್ರಗಳಾಗಿ ಸೃಷ್ಟಿಸಲ್ಪಟ್ಟಿದ್ದರೂ ಮಮ್ಮದೆಯ ಪಾತ್ರ ಚಿತ್ರಣದ ಮುಂದೆ ಗಣ್ಯರಾಗಲಾರರು.

ವೆಂಕಟ್ರಾಯ ಕಮ್ತಿ :— ವ್ಯಾಪಾರದಲ್ಲಿ ಪಳಗಿದವರು ಅನೇಕ ಭಾಷೆಗಳು ಬರುತ್ತವೆ. ಕನ್ನಡದ ಮೇಲೆ ಅವರಿಗೆ ಅಪಾರ ಅಭಿಮಾನ. ಕರ್ನಾಟಕ ಏಕೀಕರಣವಾಗಬೇಕೆನ್ನುವ ಉತ್ಕಟ ಆಕಾಂಕ್ಷೆಯುಳ್ಳವರು ಕಾಸರಗೋಡನ್ನು ಕೇರಳಕ್ಕೆ ಎಂದಿಗೂ ಬಿಟ್ಟುಕೊಡುವುದಿಲ್ಲ ಎಂದು ವೇದಿಕೆಯ ಮೇಲೆ ನಿಂತು ದೊಡ್ಡಧ್ವನಿಯಲ್ಲಿ ಮಾತನಾಡಬಲ್ಲರು.

ಊರಿನ ಗಣ್ಯವ್ಯಕ್ತಿ, ಗಣ್ಯ ಎನ್ನಿಸಿಕೊಳ್ಳುವ ಹುಚ್ಚು ಕಮ್ತಿಯವರನ್ನು ಬಿಟ್ಟಿಲ್ಲ. ಗಣ್ಯಸ್ಥಾನವನ್ನು ಕಾಯ್ದುಕೊಳ್ಳಲು ಯಾವ ಅನ್ಯಾಯಕ್ಕೂ ಸಿದ್ಧ. ಸಾಲ ಕೊಡಬಲ್ಲರು ಒಂದಕ್ಕೆ ಹತ್ತು ಸುಳ್ಳು ಲೆಕ್ಕ ಬರೆಯಬಲ್ಲರು. ಸುಳ್ಳನ್ನು ಸತ್ಯ ಎಂದು ಸಾಧಿಸಬಲ್ಲರು. ಸರಳಬಡ್ಡಿಗೆ ಅವರಲ್ಲಿ ಹಣ ದೊರೆಯುವುದಿಲ್ಲ. ಚಕ್ರಬಡ್ಡಿಯೇ ಅವರ ದೃಷ್ಟಿಯಲ್ಲಿ ಸರಳ ಬಡ್ಡಿ. ಕೋರ್ಟು ವ್ಯವಹಾರದಲ್ಲಿ ಪಳಗಿದವರು. ಕಾಂಗ್ರೆಸ್ ಕಮಿಟಿಯ ಅಧ್ಯಕ್ಷರು. ಊರ ದೇವಾಲಯದ ಮೊಕ್ತೇಶ್ವರರು. ಸಹಕಾರ ಸಂಘದ ಛೇರ್ಮೇನರು. ಹೋರಾಟಗಾರರ ಸಂಘಕ್ಕೆ ಸಲಹೆಗಾರರು. ಇವೇ ಮೊದಲಾದ ಪ್ರತಿಷ್ಠೆ ಗೌರವಗಳನ್ನು ಸಂಪಾದಿಸಿಕೊಂಡಿದ್ದ ವ್ಯಕ್ತಿ, ತಿಮ್ಮನ ಮಗ ನಿಂಗನ ಪ್ರಕರಣದಿಂದ ಕಮ್ತಿಯವರ ಅನ್ಯಾಯದ ಗುಟ್ಟು ಶಾನುಭಾಗರಿಗೆ ತಿಳಿದುಬಂದಾಗ ಕಮ್ತಿ ದೈನ್ಯತೆಯ ಸಾಕಾರ ಮೂರ್ತಿ. ಅಷ್ಟು ವರ್ಷಗಳಿಂದ ಕಾಯ್ದಿರಿಸಿಕೊಂಡಿದ್ದ ಗಣ್ಯ ಸ್ಥಾನಕ್ಕೆ ನಿನ್ನೆ ಮೊನ್ನೆಯ ಹುಡುಗನಿಂದ ಅವಮಾನ! ಕಮ್ತಿಯವರಿಗೆ ಅದನ್ನು ಸಹಿಸಿಕೊಳ್ಳದೆ ಗತ್ಯಂತರವಿಲ್ಲ.

ಮಮ್ಮದೆ:- ಕಮ್ತಿಯ ಪಾತ್ರಕ್ಕೆ ಸವಾಲೋ ಎಂಬಂತೆ ಚಿತ್ರಿತವಾದ ಪಾತ್ರ ಮಮ್ಮದೆಯದು. ಮಮ್ಮದೆಯೂ ವ್ಯಾಪಾರಿ, ಭಾರಿ ವ್ಯಾಪಾರಿಯಲ್ಲ. ಸಂತೆಯಲ್ಲಿ ಬಾಳೆಹಣ್ಣಿನ ಅಂಗಡಿ ಇಟ್ಟುಕೊಂಡಿರುತ್ತಿದ್ದ ಸಾಮಾನ್ಯ ವ್ಯಾಪಾರಿ. ಆತ್ಮೀಯರ ಕಷ್ಟಸುಖಗಳಲ್ಲಿ ಭಾಗಿಯಾಗುವವನು. ಹಿಂದು ಮುಸ್ಲಿಂ ಮೈತ್ರಿಯನ್ನು ತನ್ನ ಜೀವನಕ್ಕೆ ಹಾಸುಹೊಕ್ಕಾಗಿ ಬಳಸಿಕೊಂಡವನು. ತನ್ನ ಮಿತ್ರರ ಮಾನ ರಕ್ಷಣೆಗಾಗಿ ಪ್ರಾಣ ಕೊಡಲು ಸಿದ್ಧನಾದವನು. ಅನ್ಯಾಯ, ಅನೀತಿ, ಅಧಿಕಲಾಭ, ಸುಳ್ಳು, ಮೋಸ ಅವನ ಜೀವನದಲ್ಲಿ ಎಲ್ಲಿಯೂ ಸುಳಿದಿಲ್ಲ. ತನ್ನ ಅಭಿಮಾನವನ್ನು ತಾನು ಕಾಪಾಡಿಕೊಳ್ಳಬಲ್ಲ. ಮಮ್ಮದೆಗೂ ಕಮ್ತಿಗೂ ಉಂಟಾದ ಕಲಹದಲ್ಲಿ ಮಮ್ಮದೆ ತಿಮ್ಮನ ಮಗ ನಿಂಗನನ್ನು ಕಮ್ತಿಯ ಮೇಲೆ ಸೇಡು ತೀರಿಸಿಕೊಳ್ಳುವುದಕ್ಕಾಗಿ ಉಪಯೋಗಿಸಿಕೊಂಡ, ಅದರ ಫಲವಾಗಿ ನಿಂಗ ತಂದೆಯ ಆಕ್ರೋಶಕ್ಕೊಳಗಾಗಿ ಊರುಬಿಟ್ಟು ಹೊರಟಾಗ ಮಮ್ಮದೆ ಮಮ್ಮಲ ಮರುಗಿದ್ದಾನೆ. ನಿಂಗನಿಗಾಗಲಿ ತಿಮ್ಮನಿಗಾಗಲಿ ದ್ರೋಹವೆಸಗಿದ ಪಾತಕಿಯಾಗುವುದಿಲ್ಲ ಮಮ್ಮದೆ. ತಿಮ್ಮ ತೆಂಗಿನ ಮರದಿಂದ ಬಿದ್ದು ಕಾಲುಮುರಿದುಕೊಂಡ ಸುದ್ದಿ ತಿಳಿದಾಗ ಅಂಗಡಿಯನ್ನು ಹೇಗಿತ್ತೋ ಹಾಗೆಯೇ ಬಿಟ್ಟು ಓಡಿಹೋಗಿ ತಿಮ್ಮನನ್ನು ಆಸ್ಪತ್ರೆಗೆ ಸಾಗಿಸುವ ಕಾರ್ಯದಲ್ಲಿ ತೊಡಗುತ್ತಾನೆ. ಮಮ್ಮದೆಯ ಹೃದಯಾನುಕಂಪಕ್ಕೆ ಕೃತಜ್ಞನಾಗಿ ತಿಮ್ಮ ಮಮ್ಮದೆಯನ್ನು ಅಪ್ಪಿಕೊಳ್ಳುತ್ತಾನೆ. ವೆಂಕಟ್ರಾಯಕಮ್ತಿಯವರು ಮಮ್ಮದೆಯ ಮೇಲಿನ ದ್ವೇಷದಿಂದ ಹಿಂದು ದೇಶದಲ್ಲಿರುವ ಮುಸ್ಲಿಂ ಜಾತಿಯನ್ನೇ ದ್ವೇಷಿಸುತ್ತಾರೆ. ಅವರ ದೃಷ್ಟಿ ಕೋನದಿಂದ ಮಮ್ಮದೆಯನ್ನು ನೋಡಿದರೆ ತಪ್ಪಾಗುತ್ತದೆ. ಮಮ್ಮದೆ ವಿದ್ಯಾವಂತನಲ್ಲ ನಿಜ. ಹಿಂದೂ ಮುಸಲ್ಮಾನ್ ಮೈತ್ರಿಗೆ ದೇಶ ಕಾಲಗಳನ್ನು ಮೀರಿ ನಿಂತ ಮಹಾನುಭಾವ. ಅವನೇನೂ ತತ್ವವೇತ್ತನಲ್ಲ. ಅನುಯಾಯಿಗಳಿಂದ ಅಥವಾ ಇತರ ಬೆಂಬಲಿಗರಿಂದ ಪರಿವೃತನಾದವನೂ ಅಲ್ಲ. ಅಧಿಕಾರ, ಸ್ಥಾನ, ಪ್ರತಿಷ್ಠೆಗಳಿಗಾಗಿ ಹೋರಾಡುವವನೂಅಲ್ಲ. ಅವನ ಮೇಲೆ ಯಾರ ಕಟ್ಟುಪಾಡೂ ಇಲ್ಲ. ಅವನು ಸ್ವತಂತ್ರ, ಪವಿತ್ರ, ಹೃದಯ. ಪ್ರತಿದಿನ ಮಂಜೇಶ್ವರದಿಂದ ಅಂಗಡಿ ಮುಚ್ಚಿದ ಮೇಲೆ ಮನೆಗೆ ಮರುಳುವಾಗ ಊರನವರಿಗೆಲ್ಲ ತಿಳಿಯಲೆಂದೋ ಏನೋ ದಾರಿಯಲ್ಲಿ ಯಾರು ಮಾತನಾಡಿಸದಿದ್ದರೂ ಮನೆಯ ಜನ ನಿದ್ರಿಸುತ್ತಿದ್ದರೂ ಕರೆದು ಕೂಗಿ ಒಂದೆರಡು ಹರಟೆ ಹೊಡೆಯದೆ ಹೋಗುವವನಲ್ಲ. ಯಾರೂ ಸಿಗದಿದ್ದರೆ ಬಾಯಿ ಬಾರದ ಪ್ರಾಣಿಗಳೊಡನಾದರೂ ಮಾತನಾಡಲೇಬೇಕು. ಬಹು ಜನರ ಪ್ರೀತಿಗೆ ಪಾತ್ರನಾದ ಒಬ್ಬ ನಾಗರಿಕ ಅವನು. ಸಾಮಾನ್ಯರಲ್ಲಿ ಶ್ರೇಷ್ಠವ್ಯಕ್ತಿ, ಕತ್ತಲೆಯಲ್ಲಿ ಒಂದು ಬೆಳಕು.

ಮೇಲಿನ ಸಮೀಕ್ಷೆಯಿಂದ ಭಂಡಾರಿ ಅವರು ತಮ್ಮ ಕೃತಿಗೆ ಆಯ್ದುಕೊಂಡಿರುವ ಕಥಾವಸ್ತು ಗ್ರಾಮಜೀವನಕ್ಕೆ ಹೆಚ್ಚು ಸಂಬಂಧಿಸಿದ್ದು ಎನ್ನುವುದರಲ್ಲಿ ಅನುಮಾನವಿಲ್ಲ. ಘಟನೆಗಳು ಸ್ವಕಲ್ಪಿತವೆನ್ನಿಸಬಹುದಾದರೂ ಅವು ಅಘಟಿತ ಘಟನೆಗಳೆನ್ನಲಾಗುವುದಿಲ್ಲ. ಸರಳ ಜೀವನದ ಗೊಂದಲ ಗಡಿಬಿಡಿಗಳಿಲ್ಲದ ನಿಸರ್ಗಸ್ಪಂದನದ ಒಳದನಿಯಂತಿರುವ ಹಳ್ಳಿಯ ಸಮಾಜದ ಸತ್ಯ ಚಿತ್ರವನ್ನು ಸರಳವಾದ ಭಾಷೆಯಲ್ಲಿ ಕಾದಂಬರಿಕಾರರು ನೀಡಿದ್ದಾರೆ.

ಒಟ್ಟಿನಲ್ಲಿ 'ಸಮಾಗಮ' ಕಾದಂಬರಿ ನಗರ ಮಧ್ಯದಲ್ಲಿ ಮನೋರಂಜನೆಗಾಗಿ ನಿರ್ಮಿಸಿದ ಉದ್ಯಾನವನದ ಮಧ್ಯದಲ್ಲಿ ಕಾಣುವ ಸಿಮೆಂಟು ಕೊಳದಂತಿಲ್ಲ. ಹಳ್ಳಿಯ ಸಮಸ್ತರು ಕುಡಿಯುವ ನೀರಿಗಾಗಿ ನಿರ್ಮಿಸಿಕೊಂಡ ಕೊಳದಂತೆ ಎಂದು ಹೇಳಬಹುದು.

—oOo—

## ರಾಮಕೃಷ್ಣ ಪರಮಹಂಸರ ಉಪದೇಶ

ಸೂರ್ಯನ ಬೆಳಕು ಎಲ್ಲ ವಸ್ತುಗಳ ಮೇಲೆಯೂ ಸಮವಾಗಿ ಬೀಳುತ್ತದೆ. ಆದರೆ ತಿಳಿಯಾದ ನೀರು, ಕನ್ನಡಿ, ಲೋಹ ಇಂಥವು ಮಾತ್ರ ಅದನ್ನು ಸ್ಫುಟವಾಗಿ ಪ್ರತಿಬಿಂಬಿಸುತ್ತವೆ. ಹಾಗೆಯೇ ಭಗವಂತನು ಎಲ್ಲರಲ್ಲಿಯೂ ವಾಸಿಸುತ್ತಿದ್ದರೂ ಆತನು ಸ್ಪಷ್ಟವಾಗಿ ಗೋಚರಿಸುವುದು ಸತ್ಪುರುಷರ ಹೃದಯದಲ್ಲಿಯೇ.

ರಾತ್ರಿಯ ಹೊತ್ತು ಆಕಾಶದಲ್ಲಿ ಹಲವು ನಕ್ಷತ್ರಗಳು ಕಾಣುತ್ತವೆ. ಆದರೆ ಸೂರ್ಯೋದಯವಾದ ಮೇಲೆ ಅವು ಕಾಣಿಸುವುದಿಲ್ಲ. ಆದ ಕಾರಣ ಹಗಲು ಆಕಾಶದಲ್ಲಿ ನಕ್ಷತ್ರಗಳು ಇಲ್ಲವೆನ್ನುವುದಕ್ಕೆ ಆಗುತ್ತದೆಯೆ ? ಅದರಂತೆ ಎಲೈ ಮಾನವನೇ, ಅಜ್ಞಾನದಲ್ಲಿ ನೀನು ಇರುವ ತನಕ ದೇವರು ನಿನಗೆ ಕಾಣದೆ ಇದ್ದರೂ, ದೇವರು ಇಲ್ಲವೆಂದು ನೀನು ಹೇಳದಿರ.

ಗುಬ್ಬಿಯ ಮಲ್ಲಣಾರ್ಯ ವಿರಚಿತ

# ವೀರಶೈವಾಮೃತ ಮಹಾಪುರಾಣ

—ಆರ್. ರಾಜಪ್ಪ, ಎಂ. ಎ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ವೀರಶೈವ ಕವಿಗಳು ತಮ್ಮದೇ ಆದ ಸ್ಥಾನ ಗಳಿಸಿದ್ದಾರೆ. ಅವರಲ್ಲಿ ಕಾಂತ್ರಿ ಕವಿಗಳೂ ಉಂಟು. ವೀರಶೈವ ಸಾಹಿತ್ಯದಲ್ಲಿ ಹಾಗೂ ಕನ್ನಡ ಸಾಹಿತ್ಯದಲ್ಲಿ ತನ್ನದೇ ಆದ ವೈಶಿಷ್ಟ್ಯದಿಂದ ಮೆರೆಯುತ್ತಿರುವ ಕವಿಗಳಲ್ಲಿ ಗುಬ್ಬಿಯ ಮಲ್ಲಣಾರ್ಯನ ಹೆಸರೂ ಗಮನಾರ್ಹವಾದುದು. ಈತನ ಕೃತಿಗಳು "ಭಾವಚಿಂತಾರತ್ನ" (ಸತ್ಯೇಂದ್ರ ಚೋಳ ಕೃತಿ) 'ವೀರಶೈವಾಮೃತ ಮಹಾಪುರಾಣ' ಇವಲ್ಲದೆ "ಪುರಾತನ ರಗಳೆ" ಎಂಬ ಗ್ರಂಥವನ್ನು ರಚಿಸಿರುವುದಾಗಿ ಪ್ರತೀತಿ ಇದೆ. ಆದರೆ ಅದು ಉಪಲಬ್ಧವಿಲ್ಲ. ಈ ಕವಿಯ ವೀರಶೈವಾಮೃತ ಮಹಾಪುರಾಣದ ಸೂಕ್ಷ್ಮ ಪರಿಚಯ ಮಾಡಿಕೊಡುವುದೇ ಪ್ರಸ್ತುತ ಲೇಖನದ ಉದ್ದೇಶ.

ವೀರಶೈವ ಪುರಾಣದ ಲಕ್ಷಣವೇನು? ಯಾವ ಗ್ರಂಥವನ್ನು ಪುರಾಣವೆಂದು ಕರೆಯಬೇಕು? ಸಾಮಾನ್ಯವಾಗಿ ವೀರಶೈವ ಕವಿಗಳು ತಮ್ಮ ಕೃತಿಗಳಿಗೆ ಚಾರಿತ್ರ, ಚರಿತ್ರೆ, ಪುರಾಣ, ಪ್ರಬಂಧ ಎಂಬುದಾಗಿ ಹೆಸರಿಸಿದ್ದಾರೆ. ಉದಾಹರಣೆಗೆ ಸಿದ್ಧರಾಮ ಚಾರಿತ್ರ, ಸೋಮನಾಥ ಚರಿತ್ರೆ, ಬಸವ ಪುರಾಣ, ಸಿಂಗಿರಾಜ ಪುರಾಣ, ಗಿರಿಜಾಕಲ್ಯಾಣ ಮಹಾ ಪ್ರಬಂಧ ಇತ್ಯಾದಿ ದೊರೆಯುತ್ತವೆ. ಡಾ|| ರಂ. ಶ್ರೀ. ಮುಗಳಿಯವರು ಪುರಾಣವೆಂದು ಕರೆದ ಗ್ರಂಥಗಳಲ್ಲಿ ಒಬ್ಬ ಇಲ್ಲವೇ ಅನೇಕ ಶಿವಶರಣರ ಚರಿತ್ರೆ ಪ್ರಮುಖವಾಗಿರುತ್ತದೆ. ಅವರಲ್ಲಿ ಪುರಾತನ ಮತ್ತು ನೂತನ ಶರಣರ ನಿರ್ದಿಷ್ಟ ಸಂಖ್ಯೆ ಇದೆ. ...... ಇವುಗಳಲ್ಲಿ ಬಹು ವಿಷಯಗರ್ಭಿತವಾದ ವೀರಶೈವ ಧರ್ಮಕೋಶವನ್ನು ರಚಿಸುವ ಉದ್ದೇಶವು ಪ್ರಧಾನವಾಗಿ ಕಂಡು ಬಂದಿದೆ. ಶಿವಲೀಲೆ, ವೀರಶೈವ ತತ್ತ್ವ ಸಂಪ್ರದಾಯ ಇವುಗಳ ವರ್ಣನೆಗೆ ಪ್ರಾಮುಖ್ಯತೆ ಬಂದಿದೆ. ಆದ್ದರಿಂದ ವೀರಶೈವ ಪುರಾಣದ ಕಲ್ಪನೆ ಬೆಳೆಯುತ್ತ ಹೋಗಿ ಸರ್ವ ಸಂಗ್ರಹ ಮತ್ತು ಸಂಮಿಶ್ರವಾಯಿತೆನ್ನಬಹುದು," ಎಂದು ಹೇಳಿದ್ದಾರೆ. ಸದ್ಯದಲ್ಲಿ ವೀರಶೈವ ಪುರಾಣ ಲಕ್ಷಣಕ್ಕೆ ಈ ವಿವರಣೆಯೇ ಸಾಕೆನ್ನಬಹುದು.

ಈ ತೆರನ ಪುರಾಣಗಳಲ್ಲಿ ವೀರಶೈವಾಮೃತ ಮಹಾ ಪುರಾಣಕ್ಕೆ ಪ್ರಾಧಾನ್ಯತೆ ಇದೆ. ಈ ಕೃತಿ ವಾರ್ಧಕ ಷಟ್ಪದಿಯಲ್ಲಿದೆ. ಎಂಟು ಕಾಂಡಗಳು ಒಂದು ನೂರ ಮುವತ್ತಾರು ಸಂಧಿಗಳು ಏಳು ಸಾವಿರದ ಒಂದು ನೂರ ಎರಡು ಪದ್ಯಗಳಿವೆ. ಇದಲ್ಲದೆ ಈ ಕೃತಿಯಲ್ಲಿ ಉದ್ಧರಿಸಿರುವ ಸಂಸ್ಕೃತ ಶ್ಲೋಕಗಳ ಸಂಖ್ಯೆ ಎಂಟು ನೂರ ಹದಿನೇಳಾಗುತ್ತವೆ. ಇಲ್ಲಿ ವೀರಶೈವ ಸಿದ್ಧಾಂತವು ವಿಸ್ತಾರವಾಗಿ ಪ್ರತಿಪಾದಿತವಾಗಿದೆ. ಅಲ್ಲದೆ ಶಿವನ ಪಂಚವಿಂಶತಿ ಲೀಲೆಗಳು; ಪುರಾತ ನೂತನ ಶರಣರ ಕಥೆಗಳು ಇಲ್ಲಿ ಉಕ್ತವಾಗಿವೆ.

ಕಕುದ್ಗಿರಿ ಎಂದೂ ದಕ್ಷಿಣ ಕಾಶಿ ಎಂದೂ ಪ್ರಸಿದ್ಧವಾಗಿರುವ ಶಿವಗಂಗೆಯಲ್ಲಿ ಶೀಲವಂತಾರ್ಯನ ಕರಜಾತನಾದ ಹಲಗೆಯಾರ್ಯನು ತನ್ನ ಶಿಷ್ಯ ಕೆಂಚವೀರನಿಗೆ ಬೋಧಿಸಿದ ಉಪದೇಶವನ್ನು ಪದ್ಯರೂಪವಾಗಿ ರಚಿಸು ಎಂದು ಹೇಳಲು ತಾನು ಅವರ ಆಜ್ಞಾನುಸಾರವಾಗಿ ಈ ಕೃತಿಯನ್ನು ರಚಿಸಿದುದಾಗಿ ಕವಿಯು ಹೇಳಿದ್ದಾನೆ. ಹಲಗೆಯಾರ್ಯನು ಸರ್ವಾಗಮ ವಿಶಾರದನಾಗಿಯೂ, ವಿಖ್ಯಾತನಾಗಿದ್ದ ಗುರುವೂ ಆಗಿದ್ದನೆಂದು ತಿಳಿದು ಬರುತ್ತದೆ.

ಈ ಕೃತಿಯಲ್ಲಿ ಕವಿಯು ಸ್ವವಿಷಯವನ್ನು ಹೇಳುತ್ತಾ ತನ್ನ ಪರಂಪರೆಯನ್ನು ಉಲ್ಲೇಖಿಸಿದ್ದಾನೆ. "ಅಮರ ಗುಂಡದ ಮಲ್ಲೇಶ್ವರಾಚಾರ್ಯನು; ಅವನ ಶಿಷ್ಯ ಶೂಲವೇರಿದ ಮಹತ್ವವುಳ್ಳ ಗುರುಭಕ್ತನು; ಅವನ ಮಗ ದೇಶಿಕಪಟ್ಟವರ್ಧನ ಸೌಂದರ್ಯ ಮಲ್ಲಿಕಾರ್ಜುನ ಪಂಡಿತ; ಅವನ ಮಗ ನಾಗನಾಥಾರ್ಯ; ಅವನ ಮಗ ಅಹಿಯಂ ಲಿಂಗಕೆ ಛತ್ರಮಂ ಮಾಡಿದ ಅಮರ ಗುಂಡಾರ್ಯ; ಇವನ ವಂಶದೊಳು ಗುಬ್ಬಿಯ ಮಲ್ಲಣ್ಣನು ಹುಟ್ಟ ಅನುಭವ ಯೋಗ ಷಟ್ಸ್ಥಲ ಖ್ಯಾತಮಂ ಗಣಭಾಷ್ಯ ರತ್ನಮಾಲೆಯಂ ಮಾಡಿ ವಾತೂಲಕ್ಕೆ ಟಿಪ್ಪಣವೆಸಗಿದಂ, ಅವನ ಮಗ ಗುರು ಭಕ್ತ; ಇವನ ಹೆಂಡತಿ ಸಪ್ಪೆಯಮ್ಮ; ಇವರ ಮಗ ತಾನು ಎಂದು ತಿಳಿಸುತ್ತಾನೆ.

ವಸ್ತುವಿನ್ಯಾಸದಲ್ಲಿ ಶಿವತತ್ವ ಚಿಂತಾಮಣಿ; ವೀರಶೈವಾಮೃತ ಪುರಾಣ; ಚನ್ನಬಸವ ಪುರಾಣಗಳನ್ನು ಒಂದು ವರ್ಗಕ್ಕೆ ಸೇರಿಸಬಹುದ. ಕಾರಣ ಈ ಗ್ರಂಥಗಳಲ್ಲಿ ಬಂದಿರುವ ವೀರಶೈವ ತತ್ವಬೋಧೆ ಮತ್ತು ಇದಕ್ಕೆ ಹಿನ್ನೆಲೆಯಾದ ಪರಮೇಶ್ವರನ ಪಂಚವಿಂಶತಿ ಲೀಲಾಕಥನಕ್ಕೆ ಮುಖ್ಯ ಸ್ಥಾನವಿದೆ. ಜೀವನ ಚರಿತ್ರೆ ಇದ್ದ ಪಕ್ಷದಲ್ಲಿ ಅದರ ಕಥನ ಗೌಣವಾಗಿದೆ.

ವೀರಶೈವಾಮೃತ ಪುರಾಣದಲ್ಲಿ ಶಿವತತ್ತ್ವ ಚಿಂತಾಮಣಿಯಲ್ಲಿಲ್ಲದ ಗುರುಶಿಷ್ಯ ಸಂಬಂಧವನ್ನು ಕಾಣಬಹುದು. ಕಾವ್ಯಾರಂಭದಲ್ಲಿ ಪರತತ್ವ ಸ್ವರೂಪವನ್ನು ಮುಂದೆ ಚೈತನ್ಯ ಜಂಗಮ ಮೂರ್ತಿಯನ್ನು ವಿವರಿಸಿ ಚರಾಚರಸೃಷ್ಟಿಗೆಲ್ಲ ಈ ಮೂರ್ತಿ ಮೂಲವೆಂಬುದನ್ನೂ ಆ ಸೃಷ್ಟಿ ಕ್ರಮದಲ್ಲಿ ಶಿವನ ಇಪ್ಪತ್ತೈದು ಲೀಲೆಗಳನ್ನು ಮಲ್ಲಣಾರ್ಯನು ವಿಸ್ತಾರವಾಗಿ ಹೇಳಿದ್ದಾನೆ. ಪೀಠಿಕಾಸಂಧಿಯಲ್ಲಿ, ಸಮುದ್ರ, ಕೈಲಾಸ, ಈಶ್ವರಾಸ್ಥಾನ ಮೊದಲಾದವುಗಳ ವರ್ಣನೆಯಿಲ್ಲ. ಇವು ಸಾಮಾನ್ಯವಾಗಿ ವೀರಶೈವ ಪುರಾಣಗಳಲ್ಲಿರತಕ್ಕವಾದರೂ ಮಲ್ಲಣಾರ್ಯನು ಇವುಗಳಿಗೆ ಮಾನ್ಯತೆಯನ್ನು ಕೊಟ್ಟಿಲ್ಲ.

ಕೆಂಚವೀರನೆಂಬ ಶಿವಭಕ್ತನು ತನ್ನ ಗುರುವಾದ ಶಾಂತನಂಜೇಶ್ವರನ ಬಳಿಗೆ ಹೋಗಿ "ಚಿದ್ರೂಪ ನಿರ್ಮಲಾಧಾರ ಜಂಗಮಲಿಂಗದಾದಿಮಧ್ಯಾಂತ-ವರಿವಿಚ್ಛಿಯಾಗಿರ್ದಪುದು" ಅನುಗ್ರಹಿಸಬೇಕೆಂದು ಬೇಡುತ್ತಾನೆ. ಆಗ ಆತನು ಸಾಕ್ಷಾತ್ ಪರಶಿವಮೂರ್ತಿ ಹಲಗೆಯಾಚಾರ್ಯನ ಬಳಿಗೆ ಕರೆತಂದು ಅವರಿಗೆ ತಿಳಿಸಲು ಅವರು ಮನದೊಳು ರಾಗಿಸುತ, ಹಿಂದೆ ಶೀಲವಂತಾರ್ಯ ಗುರು ತಮಗೆ ಕರುಣಿಸಿದ ನಿರೂಪವನ್ನು ತಿಳಿಸುವುದಾಗಿ,

"ಪರಶಿವ ಕ್ರೀಡಾವಿನೋದ ಕಥೆಯೆಂಬಸಾ
ಗರದೊಳಗೆ ತಾನೆನ್ನ ಶಕ್ತಿಯನು ಸಾರದಿಂ
ಪರಕಿಸಲ್ ಕೆಲಕೆಲವನರ್ಘ್ಯ ರತ್ನಂಗಳಂ ಪೋಲ್ವ
ಪ್ರಮಾಣಗಳಿನೆ

ವಿರಚಿಸಲ್ ತೆಗೆದು ಕೇಳ್ವರಿಗೆ ಭೂಷಣವೆನಿಸು
ತಿರೆವೀರಶೈವಾಮೃತಾಖ್ಯದಿಂಪೇಳ್ವೆನೆಂ
ದೆರಡು ಕರವಂ ಮುಗಿದು ಗುರುವಿನನ್ವಯವ
ಬಿತ್ತರಿಸಿದಂ ಹಲಗೇಶನು"

ಈ ಕೃತಿಯಲ್ಲಿ ಪರತತ್ತ್ವವನ್ನು ಕುರಿತು—

"ಮೊದಲಲ್ಲಿ ವಸ್ತು ನಿರ್ದೇಶವಂ ಕೇಳಾಗ
ಮದವಚನ ಮೆಂತೆನಲು ಕುರುವಿಲ್ಲದೆರಡು ವಿ
ಲ್ಲದ ಶೂನ್ಯ ವೆನಿಪ ರೂಪಿಲ್ಲ ದತಿಶಯವಾಗುತೀ
ತೆರದೊಳು ಬಳಸದಾ

ಸದಮಲಂ ಪೆಸರಿಲ್ಲ ಕುಲವಿಲ್ಲ ಶುದ್ಧವಾ
ದುದ ಬಳಿಕಲಾದಿಯಿಲ್ಲದುದೆ ಶಿವನೆಂದು ಪೇ
ಳ್ವುದು ಕಣಾಲಿಂಗ ಪೌರಾಣದೋಳ್ ಕೇಳ ಮತ್ತೆ
ಹರಿಯಜರು ನುತಿಸಿದಿರವಾ ||

ಎಂದು ವಚನಕಾರರು ಹೇಳಿರುವ ಅಭಿಪ್ರಾಯವನ್ನೆ ಹೇಳಿದೆ. ಹೆಚ್ಚಿನ ವಿವರಣೆಗಳಿಲ್ಲದೆ ಎಲ್ಲ ಮತಗಳಿಗೂ ಸಮಾನವಾದ ಮತ್ತು ಉಪನಿಷತ್ ಸಮ್ಮತವಾದ,

"...... ಶಿವನೆ ಭಕ್ತಂಕಣಾ ತದ್ಭಕ್ತನೇ ಶಿವಂತಾನಾತೆರಂ
ಒರೆವೆ ಕೇಳಾಭಕ್ತನೇ ಶಿವಂ ಭಾವಿಸುವೊ
ಡೆರಡು ಕೂಡಿದೊಡಂತದೇ ಜಂಗಮಂ ಕಣಾ"

ಎಂಬ ವಿವರಣೆಯನ್ನು ನೀಡಿದ್ದಾನೆ ಕ್ರಮವಾಗಿ ಗುರು ಲಿಂಗ ಜಂಗಮಾದಿ ಅಷ್ಟಾವರಣಗಳನ್ನು ವಿವರಿಸಿದ್ದಾನೆ

ಮುಂದೆ ಜಂಗಮ ಮೂರ್ತಿಯನ್ನು ಕುರಿತಂ ವರ್ಣಿಸುತ್ತಾ,

ಎಂಬ ಪದ್ಯಗಳಲ್ಲಿ ವ್ಯಕ್ತವಾಗುತ್ತದೆ.

ಈ ಕೃತಿಯಲ್ಲಿ ರಸವತ್ತಾದ ಲೀಲೆ ಜಲಂಧರ ಹರ ಲೀಲೆ. ಅದರ ಕಥೆ ಹೀಗಿದೆ: ಜಲಂಧರನು ಹಿಂದಿನ ಜನ್ಮದಲ್ಲಿ ನೀರ್ಕಾಗೆಯಾಗಿದ್ದನೆಂದೂ ಅದು ಭಾಗೀರಥಿಯಲ್ಲಿ ಮಿಂದು ಪಾಳು ದೇಗುಲದ ಶಿಲಾ ಸ್ತಂಭದ ಮೇಲೆ ಕುಳಿತು ಮೈಯೊಣಗಿಸಲು ರೆಕ್ಕೆಗಳನ್ನು ಬಡಿದಾಗ ನೀರ್ವನಿಗಳು ಕೆಳಗಿದ್ದ ಲಿಂಗದ ಮೇಲೆ ಬಿದ್ದುವು. ಗಂಗಾಭಿಷೇಕ ಮಾಡಿದ ಪುಣ್ಯದ ಫಲವಾಗಿ ಈತನು ವೃತ್ರಾಸುರನ ಕುಲದಲ್ಲಿ ಹುಟ್ಟಿದನು. ಇಂದ್ರನು ವೃತ್ರಾಸುರನನ್ನು ನಾಶಮಾಡಿದಾಗ ಜಲಂಧರನು ಉಳಿದುಕೊಂಡು ಬ್ರಹ್ಮನನ್ನು ಕುರಿತು ತಪಸ್ಸುಮಾಡಿ ವರ ಪಡೆದನು. ವರ ಪಡೆದಾದಮೇಲೆ ಬ್ರಹ್ಮನನ್ನೇ ಯುದ್ಧಕ್ಕೆ ಕರೆವನು ಆಗ ಬ್ರಹ್ಮನು ಅವನನ್ನು ಕುರಿತು.

> ಶತವೃದ್ಧ ನಾನು ಬಡಪಾರ್ವನೆನ್ನಂ ಯುದ್ಧ
> ದತಿಶಯಕೆ ಕರೆವುದುಚಿತವೇ ನೀಂಪರಾಕ್ರಮೋ
> ನ್ನತನಾದೆಯಾದೊಡೆ ವೈಕುಂಠಪತಿ ದೈತ್ಯವೈರಿ
> ನಿಮ್ಮನ್ನಯುವನು
> ಹತಿಸುವಗ್ಗಳ ವಿಷ್ಣುಗಳ್ಕಿಯೆನ್ನಂ ಕರೆಯೆ
> ಸತಿಜನರು ನಗರೆ.........................॥

ಎಂದು ನೆವ ಹೇಳಿ ಜಾರಿಕೊಳ್ಳುವನು. ಮುಂದೆ ಜಲಂಧರನು ದೇವೇಂದ್ರನ ಮೇಲೂ ವಿಷ್ಣುವಿನ ಮೇಲೂ ದಂಡೆತ್ತಿ ಹೋಗಿ ಅವರನ್ನು ಸೋಲಿಸಿ ಲೋಕತ್ರಯಕ್ಕೆ ತಾನೇ ಅಧಿಪತಿಯಾಗಿ ಸುಖದಿಂದ ರಾಜ್ಯಭಾರ ಮಾಡುವನು. ಆಗ ನಾರದನು ತಂತ್ರಹೂಡಿ ಇವನನ್ನು ಶಿವನ ಮೇಲೆ ಯುದ್ಧಮಾಡಲು ಪ್ರೇರೇಪಿಸುವನು. ಇಲ್ಲಿ ಕೈಲಾಸದ, ಶಿವನ ಪರಾಕ್ರಮದ ವರ್ಣನೆ ಬರುತ್ತದೆ. ಯುದ್ಧದ ವರ್ಣನೆ ಮಾತ್ರ ಎಷ್ಟುಬೇಕೋ ಅಷ್ಟೇ ಬಂದಿದೆ. ಇದು ಕವಿಯ ಸಮಯಜ್ಞಾನದ ಪ್ರತೀಕವಾಗಿದೆ. ಶಿವನು ತನ್ನ ಫಾಲನೇತ್ರದಿಂದ ಅವನ ಸೈನ್ಯವೆಲ್ಲವನ್ನೂ ಸುಟ್ಟುಹಾಕುವನು. ಆಗ ಜಲಂಧರನು ಹೆದರದೆ ತಾನು ಏಕಾಂಗವೀರ, ಅಸಾಹಯ ಶೂರ, ಎಂದು ಭುಜಹೊಯ್ದು ನಿಲ್ಲುವನು ಶಿವನು ಅವನ ಕೆಚ್ಚನ್ನು ಮೆಚ್ಚಿ, "ಎಲೆದನುಜ ನಿನ್ನಯ ಪರಾಕ್ರಮಕ್ಕೆ ಎಣೆಯಾರು ವೀರವೆಮಗಿಲ್ಲ ನಿನಗಿನ್ನುಮಂ ನಾವು ಬಲುಕಪ್ಪಮಂ ತೆರುವೆವು" ಎಂದು ಸಮುದ್ರ ಪ್ರದೇಶದಲ್ಲಿ ಅಂಗುಷ್ಠ ರೇಖೆಯಲ್ಲೊಂದು ಚಕ್ರವನ್ನು ಬರೆದು "ಇದು ನಮ್ಮಾಯುಧಂಕಣಾನಿನಗಿದಂ ಕೊಟ್ಟೆವು" ಎಂದು ಆಯುಧವನ್ನು ಒಪ್ಪಿಸಿದಂತೆ ನಟಿಸುವನು. ಜಲಂಧರನು ಅದನ್ನು ಎತ್ತಹೋಗಿ ತಿಣಿಕಿ ನಾಲ್ಕಂಗುಲದಷ್ಟು ಎತ್ತುತ್ತಾನೆ. ಇದನ್ನು ಕಂಡ ನಾರದ ಅವನನ್ನು ಹೀಯಾಳಿಸುವನು. ಚಕ್ರವನ್ನು ಎತ್ತದಿದ್ದರೆ ಅಪಖ್ಯಾತಿ ಬರುವುದೆಂದು ಬಲ ಪ್ರಯೋಗ ಮಾಡಿ ಎತ್ತಹೋಗಿ ಕೊರಳರಿದು ಬೀಳುವನು.

ಹೀಗೆ ಈ ಕಥಾನಕದಲ್ಲಿ ಮಲ್ಲಣಾರ್ಯನ ಅಸಾಧಾರಣ ಕವಿತಾ ಚಾತುರ್ಯ ವ್ಯಕ್ತವಾಗಿದೆ.

ಒಟ್ಟಿನಲ್ಲಿ ವೀರಶೈವಾಮೃತ ಪುರಾಣವು ವೀರಶೈವ ಮಹಾಸಾಗರ. ಇದರಲ್ಲಿ ಪರತತ್ವಸ್ವರೂಪ, ಸೃಷ್ಟಿಯ ಕ್ರಮ, ಅಷ್ಟಾವರಣಗಳು, ಪಂಚವಿಂಶತಿ ಲೀಲೆಗಳು, ಶಿವಾಧಿಕ್ಯಸ್ಥಾಪನೆ, ಪುರಾಣಗಳೊಳಗಿನ ಕತೆಗಳು, ಅದ್ವೈತ ವೇದಾಂತ, ಶೈವಸಿದ್ಧಾಂತ, ಬಸವಾದಿಗಳ ಚರಿತ್ರೆ, ಅರವತ್ತಮೂರು ಪುರಾತನರು, ನೂತನ ಪುರಾತನರು, ವಿರಕ್ತರು, ಆಗಿನ ಕಾಲದ ಶರಣರು-ಪವಾಡ ಪುರುಷರು, ಪವಾಡಗಳು, ಷಟ್ಸ್ಥಲಾದಿಗಳು, ಹದಿನೆಂಟು ಯುಗಗಳ ರಾಜರು ಮೇಲೇರಿದ ಕಥೆಗಳು ಬಂದಿವೆ. ಹೀಗಾಗಿ ಇದನ್ನು ವೀರಶೈವದ ವಿಶ್ವಕೋಶವೆಂದು ಕರೆಯಬಹುದಾಗಿದೆ. ಸಾಹಿತ್ಯ, ಚರಿತ್ರೆ, ಪುರಾಣ, ಸಿದ್ಧಾಂತ, ವೇದಾಂತಾದಿ ಶಾಸ್ತ್ರವಿಚಾರಗಳನ್ನು ಕಾವ್ಯಮಯವನ್ನಾಗಿ ಮಾಡಿದ ಮಲ್ಲಣಾರ್ಯನ ಸತ್ಕವಿತ್ವದ ಹಿರಿಮೆಯನ್ನು ಮನಗಾಣಿಸುವ ಮಹತ್ವಪೂರಿತವಾದ ಹಿರಿಯ ಕೃತಿ ವೀರಶೈವಾಮೃತ ಮಹಾಪುರಾಣ.

★



# ಸಿದ್ಧಗಂಗೆಯಲ್ಲಿ ಸಿದ್ಧರು "ಕ್ರಾಪ್" ಬಿಟ್ಟರು

—ಶ್ರೀ ವಿದ್ಯಾವಿಭೂಷಣ. ಸಾಹಿತ್ಯಭೂಷಣ ಓ. ಎನ್. ಲಿಂಗಣ್ಣಯ್ಯ. ಬಿ. ಎ. (ಆನರ್ಸ್)
ಮೈಸೂರು.

ನಲತ್ತಾರು ವರ್ಷದ ಹಿಂದಿನ ಮಾತು. ಆಗ ನನಗೆ 14 ವರ್ಷ ವಯಸ್ಸು. 1924 ನೆಯ ಮೇ 24 ನೆಯ ದಿನ ನಾನು ಸಿದ್ಧಗಂಗೆಯನ್ನು ಮೊಟ್ಟ ಮೊದಲು ನೋಡಿದೆನು. ಬಹುಶಃ ಅಂದು ಬುಧವಾರವೇನೊ! ಸರಿಯಾಗಿ ನೆನಪಿಲ್ಲ. ಅಂದುಪ್ರಾತಃಕಾಲ 7 ಘಂಟೆ ಸಮಯ. ತುಮಕೂರಿನಿಂದ ಬರುವ ದಾರಿ ಬಂಡೆಪಾಳ್ಯವನ್ನು ದಾಟಿ ಸಿದ್ಧಗಂಗೆಗೆ ಬರುತ್ತದೆ. ದೂರದಿಂದಲೇ ಸಿದ್ಧಗಂಗೆ ಬೆಟ್ಟ ಭಕ್ತರನ್ನು ನೋಡುತ್ತಿರುತ್ತದೆ. ಆ ಬೆಟ್ಟದ ನಡುವಿನಲ್ಲಿ ಸಿದ್ಧಲಿಂಗೇಶ್ವರ ಸ್ವಾಮಿಯ ಗುಡಿ—ಗುಡಿಯ ಗೋಪುರ ಬೆಳ್ಳಗೆ ಕಾಣುತ್ತವೆ. ಪಾಳ್ಯವನ್ನು ಬಿಟ್ಟು ತಗ್ಗಿಗಿಳಿದರೆ, ದಾರಿಯ ಪಕ್ಕದಲ್ಲಿ ಬಲಗಡೆ ವಿಶಾಲವಾದ ಕಲ್ಯಾಣಿ ! ಎಡಗಡೆ ದೊಡ್ಡ ದೊಡ್ಡ ಮರಗಳು ಬೆಟ್ಟದಡಿಯ ಬಯಲಿನಲ್ಲಿ ದಾರಿಗರಿಗೆ ನೆಳಲು ನೀಡುತ್ತನಿಂತಿವೆ. ಎದುರಿಗೆ ಮಹಾನವಮಿಯ ಮಂಟಪ! ಆ ಮಂಟಪದ ಬಲಬದಿಯಲ್ಲಿ ಅಗಲವಾದ ಕಲ್ಲು ಕಟ್ಟಡದ ಬಾವಿ. ಆ ಬಾವಿಯಿಂದ ಹತ್ತಾರು ವಿದ್ಯಾರ್ಥಿಗಳು ಆ ಸಮಯದಲ್ಲಿ ನೀರೆಳೆಯುತ್ತಿದ್ದರು. ಆ ನೀರು ಮಠದ ದಾಸೋಹ ಶಾಲೆಗೆ, ಅಡುಗೆ ಮನೆಗೆ ಮತ್ತು ಸ್ನಾನದ ಮನೆಗೆ ಒದಗುತ್ತಿತ್ತು! ಆ ವಿದ್ಯಾರ್ಥಿಗಳೆಲ್ಲ ಆ ಮಠದ ವಟುವೃಂದ. ಅವರ ಹಣೆಯಲ್ಲಿ ವಿಭೂತಿ ಆ ಎಳೆ ಬಿಸಿಲಿನಲ್ಲಿ ಬೆಳ್ಳಗೆ ಹೊಳೆಯುತ್ತಿತ್ತು! ಅದು ದೂರಕ್ಕೆ ಕಾಣುತ್ತಿತ್ತು. ಬೆಳ್ಳನೆಯ ಪಂಚೆಯುಟ್ಟು, ಬೆಳ್ಳನೆಯ ಉತ್ತರೀಯಂಗಳನ್ನು ಹೊದ್ದಿದ್ದ ಆ ವಟುವೃಂದ ಬಿಳಿಯ ಕೊಕ್ಕರೆಯ ಹಿಂಡಿನಂತೆ ಕಾಣುತ್ತಿತ್ತು ! ಅಲ್ಲಿಯೇ ಮಾವಿನ ತೋಪು. ತೆಂಗಿನ ತೋಟ! ಹಕ್ಕಿಗಳ ಕಲರವದಿಂದ ಪ್ರಕೃತಿ ದೃಶ್ಯ ಆನಂದದಾಯಕವಾಗಿತ್ತು! ನಾನು ಆ ಬಾವಿಯ ಹತ್ತಿರಕ್ಕೆ ಬಂದೆ ! ಎಲ್ಲರೂ ಹೊಸಬನಾದ ನನ್ನನ್ನು ನೋಡುತ್ತ ನಿಂತರು. ನಾನು ಉಟ್ಟಿದ್ದ ಪಂಚೆ, ತೊಟ್ಟಿದ್ದ ಅಂಗಿ, ಇಟ್ಟಿದ್ದ ಕುಲಾವಿ, ಆ ಕುಲಾವಿಯ, ಕೆಳಗೆ ನನ್ನ ಕತ್ತಿನ ಮೇಲೆ ಕುಳಿತಿದ್ದ ಕೂದಲಿನ ಗಂಟು, ಹಿಡಿದಿದ್ದ ಕೊಡೆ, ಭುಜದ ಮೇಲಿದ್ದ "ಟವಲು" —ಇವೆಲ್ಲಾ ನಾನು ಹಳ್ಳಿಯ ಹುಡುಗ ಎಂಬುದನ್ನು ಅವರಿಗೆ ಹೇಳುತ್ತಿದ್ದವು. ಇವೆಲ್ಲಕ್ಕಿಂತಲೂ, ನಾನು ಕಾಲಿಗೆ ಹಾಕಿಕೊಂಡಿದ್ದ ಬೆಳ್ಳಿಯ ಕಾಲಂದಿಗೆ ಅವರಿಗೆ ಹೆಚ್ಚು ಸೋಜಿಗವಾಗಿ ತೋರಿರಬಹುದು! ನಾನು ತುಮಕೂರು ರೈಲ್ವೆ ಸ್ಟೇಷನ್‌ನಲ್ಲಿಯ ನೀರಿನಲ್ಲಿ ಮುಖ ತೊಳೆದುಕೊಂಡು ವಿಭೂತಿ ಧರಿಸಿಕೊಂಡು ಬಂದಿದ್ದೆನು. ನನ್ನ ವಿಭೂತಿ ಪಟ್ಟೆಗಳು ಆ ಮಠದ ಹುಡುಗರ ವಿಭೂತಿ ಪಟ್ಟೆಗಳಿಗಿಂತಲೂ ಕಮ್ಮಿಯೇನು ಆಗಿರಲಿಲ್ಲ. ನಾನು ವಿಭೂತಿಯನ್ನು ನೀರಿನಲ್ಲಿ ಕಲಸಿ ಧರಿಸಿಕೊಂಡಿದ್ದೆ; ಅದು ನಿತ್ಯಾಲಂಕಾರವೇ ಆಗಿತ್ತು. ನಾನು ಮಾಹೇಶ್ವರನ ಸಂಪ್ರದಾಯದ ವಾತಾವರಣದಲ್ಲಿ ಬೆಳೆಯುತ್ತಿದ್ದವನು! ಆ ವಿದ್ಯಾರ್ಥಿಗಳಲ್ಲಿ ಒಬ್ಬನು ನನ್ನ ಹತ್ತಿರಕ್ಕೆ ಬಂದು ಮಾತನಾಡಿಸಿದರು.

"ಯಾವೂರ್ರಿ! ಏನು ಬಂದದ್ದು ? ನಿಮ್ಮ ಹೆಸರೇನು' ? — ಎಂದು ಪ್ರೀತಿಯಿಂದ ಕೇಳಿದರು.

ನಮ್ಮ ಊರು ಇಲ್ಲಿಗೆ ಮೂರು ಗಾವುದ ಇದೆ. ಅದರ ಹೆಸರು ಹೇಳಿದೆ, ನನ್ನ ಹೆಸರೂ ಹೇಳಿದೆ. ನಾನು ಇಂಗ್ಲೀಷ್ ಓದಲು ಮಠದಲ್ಲಿರಬೇಕೆಂದು ಬಂದಿದ್ದೇನೆ. ನನಗೆ ಕನ್ನಡ ಲೋಯರ್ ಸೆಕೆಂಡರಿ ಪರೀಕ್ಷೆ ಆಗಿದೆ. ಸಂಸ್ಕೃತ ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿಯೂ ಪಾಸ್ ಆಗಿದ್ದೇನೆ—ಎಂದು ತಿಳಿಸಿದೆನು.

"ಇಲ್ಲಿ ಪ್ರತಿಯೊಬ್ಬರೂ ಸಂಸ್ಕೃತ ಓದಲೇಬೇಕು. ನಿಮಗೆ ಸಂಸ್ಕೃತ ಬರುವುದರಿಂದ ನಿಮ್ಮನ್ನು ಧಾರಾಳವಾಗಿ ಸೇರಿಸಿಕೊಳ್ಳುತ್ತಾರೆ. ಈಗ ಇನ್ನೂ

ಬೇಸಿಗೆ ರಜಾ ಇದೆ. ಇನ್ನೇನು 8–10 ದಿನಕ್ಕೆ ಸ್ಕೂಲು ಬಾಗಿಲು ತೆಗೆಯುತ್ತೆ. ವಿದ್ಯಾರ್ಥಿಗಳು ಇನ್ನೂ ಬಂದಿಲ್ಲ ಅಲ್ಲಿ ಮಠದ ಮುಂದೆ ದೊಡ್ಡ ಸ್ವಾಮಿಗಳು ಮಂಚದ ಮೇಲೆ ಕುಳಿತಿದ್ದಾರೆ, ನೀವು ಹೋಗಿ ಅವರಿಗೆ ನಮಸ್ಕಾರ ಮಾಡಿ. ನಮಸ್ಕಾರ ಅಂದರೆ ಅವರ ಮುಂದೆ ಅಡ್ಡ ಬೀಳಬೇಕು. ಯಾವೂರು ಅಂತ ಕೇಳ್ತಾರೆ, ನೀವು ಎಲ್ಲಾ ವಿಚಾರವನ್ನು ಹೇಳಿಕೊಳ್ಳಿರಿ. ಸ್ವಾಮಿಗಳನ್ನು "ಬುದ್ಧಿ" ಎಂದು ಹೇಳಬೇಕು. ಅವರು ಒಂದೊಂದು ಮಾತನ್ನು ಎರಡೆರಡು ಸಲ ಆಡುತ್ತಾರೆ, ಗಟ್ಟಿಯಾಗಿ ಗದರಿಸಿಕೊಂಡು ಮಾತಾಡುತ್ತಾರೆ. ನೀವು ಗಾಬರಿ ಬೀಳಬೇಡಿ, ಹೆದರಿಕೊಳ್ಳಬೇಡಿ. ಸ್ವಾಮಿಗಳು ತುಂಬಾ ಒಳ್ಳೆಯವರು" ಎಂದು ಹಿನ್ನೆಲೆಯನ್ನು ಚಿತ್ರಿಸಿದರು. ಅದರಿಂದ ನನಗೆ ತುಂಬಾ ಉಪಕಾರವಾಯಿತು. ನಾವು ಮಾತನಾಡುತ್ತಿದ್ದಾಗ ಆ ಹುಡುಗರು ತಮ್ಮ ಕಾರ್ಯದಲ್ಲಿ ನಿರತರಾಗಿದ್ದರು. ಸ್ವಾಮಿಗಳ ಹೆಸರೇನು? ಎಂದು ಕೇಳಿದೆನು. ಅವರ ಹೆಸರು ಉದ್ದಾನ ಸ್ವಾಮಿಗಳು ..... ಎಂದು ಅವರು ಹೇಳಿದರು. '. ಹುಡುಗರು ದಿನವೂ ಬಾವಿಯಿಂದ ನೀರೆಳೆಯಬೇಕೆ "? " ಹೌದು; ದಿನವೂ ವಿದ್ಯಾರ್ಥಿಗಳು ಬೆಳಿಗ್ಗೆ ನೀರಳೆಯಬೇಕು. ಯಾತ್ರಿಕರಿಗೆ, ಸ್ವಾಮಿಗಳ ಸ್ನಾನಕ್ಕೆ ಮೊದಲು ನೀರು ಬೇಕೇ ಬೇಕು. " ಎಂದರು. ಅಂದ ಹಾಗೆ, ನಿಮ್ಮ ಹೆಸರೇನು ? ನೀವು ಏನು ಓದುತ್ತಿದ್ದೀರಿ ನಿಮ್ಮ ನಿಮ್ಮದು ಯಾವೂರು "? ಎಂದು ಕೇಳಿದೆ ನಾನು. "ನನ್ನ ಹೆಸರು ರೇವಣ್ಣ; ಅದಲಗೆರೆ ನಮ್ಮೂರು. ನಾನು ಈ ಸಾರಿ ಹೈಸ್ಕೂಲಿಗೆ ಸೇರಬೇಕು. ನಾನು ಇಲ್ಲಿಗೆ ಬಂದು ಎರಡು ವರ್ಷವಾಯಿತು" ಎಂದರು.

ನಾನು ಬಾವಿಯ ಹತ್ತಿರದಿಂದ ಮಠದ ಮುಂದುಗಡೆಗೆ ಹೋದೆ ಅಲ್ಲಿ ಮಠದ ಕೈಸಾಲೆಯಲ್ಲಿ ಬಲಗಡೆ ಜಗಲಿಯ ಮೇಲೆ ದೊಡ್ಡ ಮಂಚದಮೇಲೆ ಉದ್ದಾನ ಸ್ವಾಮಿಗಳು ಮಂಡಿಸಿದ್ದರು. ಶ್ಯಾಮಲ ವರ್ಣ! ಕಾವಿಯ ಕಫನಿಯನ್ನು ಧರಿಸಿ, ತಲೆಗೆ ಕಾವಿಯ ಪಾಗು ಸುತ್ತಿದ್ದರು. ಭಕ್ತವೃಂದ ಆ ವಿರಕ್ತಮೂರ್ತಿಯ ಕಾಲುಮುಟ್ಟಿ ಕಣ್ಣಿಗೆ ಒತ್ತಿಕೊಳ್ಳುತ್ತಿತ್ತು; ಅನೇಕ ಹೆಣ್ಣುಮಕ್ಕಳು ಕೈಜೋಡಿಸಿಕೊಂಡು ಅಲ್ಲಲ್ಲಿ ನಿಂತಿದ್ದರು.



ಶ್ರೀಗಳು ಯಂತ್ರ ಬರೆಯುತ್ತಿದ್ದರು; ಆಗಾಗ ಯಂತ್ರ ಬರೆಯುವ ತಗಡುಗಳನ್ನು ಅವರೇ ಕತ್ತರಿಯಿಂದ ಪ್ರಮಾಣಾನುಸಾರವಾಗಿ ಕತ್ತರಿಸಿಕೊಳ್ಳುತ್ತಿದ್ದರು; ಎಡಗಡೆ ಕೈಸಾಲೆಯಲ್ಲಿ ಎರಡು-ಮೂರು ರಾಗಿ ಕಲ್ಲುಗಳನ್ನು ಹಿಡಿದು ಹೆಂಗಸರು ರಾಗಿ ಬೀಸುತ್ತಿದ್ದರು !

ನಾನು ಕಂಬದ ಮರೆಯಲ್ಲಿ ಸ್ವಲ್ಪಹೊತ್ತು ನಿಂತುಕೊಂಡು ಆ ವಿರಕ್ತಮೂರ್ತಿಯನ್ನು ನೋಡಿದೆ. ನನ್ನಲ್ಲಿ ಭಯಭಕ್ತಿ ಸಮ್ಮಿಶ್ರ ಮನೋಭಾವ ಮೂಡಿತು ; ಅವಕಾಶ ಲಭಿಸಿತು. ನಾನು ಮುಂದೆಬಂದು ಶ್ರೀಗಳವರ ಎದುರಿಗೆ ಅಡ್ಡಬಿದ್ದು–ಸಾಷ್ಟಾಂಗ ಹಾಕಿ ಎದ್ದುನಿಂತುಕೊಂಡೆ.

"ಯಾರು? ಯಾರು? ಯಾವೂರು? ಯಾವೂರು? ಏನು ಬಂದದ್ದು? ಏನು ಏನು?" ಸ್ವಾಮಿಗಳಿಂದ ಬಂದ ಸ್ವಾಗತ; ಗಂಡುಧ್ವನಿ, ವಿರಕ್ತಹೃದಯ !

"ನನ್ನ ಹೆಸರು ಲಿಂಗಣ್ಣಯ್ಯ, ನಮ್ಮ ಊರು ಮುಂದಗೆರೆ ಶ್ರಾವಂಡನಹಳ್ಳಿಯಿಂದ ಬಂದೆ. ಮಠದಲ್ಲಿ ಸೇರಿ ಇಂಗ್ಲಿಷ್ ಓದಬೇಕೆಂದು ಬಂದಿದ್ದೇನೆ. ನಮ್ಮ ಊರಿನಲ್ಲಿ ಇಂಗ್ಲಿಷ್ ಸ್ಕೂಲ್ ಇಲ್ಲ. ನಾನು ಕನ್ನಡ ಮತ್ತೆ ಸಂಸ್ಕೃತ ಲೋಯರ್ ಸೆಕೆಂಡರಿ ಪರೀಕ್ಷೆ ಪಾಸ್‌ಮಾಡಿದ್ದೇನೆ." ಎಂದು ಬಿನ್ನವಿಸಿದೆ. 'ಶಬಾಸ್ ! ಸಂಸ್ಕೃತ ಓದಿದ್ದೀಯಾ! ಅಮರ ಪಾಠ ಆಗಿದೆಯೋ ?"

"ಆಗಿದೆ ; ಬುದ್ಧೀ !"
"ಕಾಲೋದಿಷ್ಟೋಽಪ್ಯನೇಹಾಪಿ"–ಹೇಳು
"ಕಾಲೋದಿಷ್ಟೋಽಪ್ಯನೇಹಾಪಿ ಸಮಯೋಽಪ್ಯಥ ಪಕ್ಷತಿಃ
ಪ್ರತಿಪದ್ವೇಇಮೇ ಸ್ತ್ರೀ ತ್ವೇತದಾದ್ಯಾಸ್ತಿಥಯೋ ದ್ವಯೋಃ॥

—ಎಂದು ನಿರರ್ಗಳವಾಗಿ ನಾಲ್ಕು ಸಾಲು ಹೇಳಿದೆ.

"ಭೇಷ್ ; ಭೇಷ್ ; ಗಂಡಕ್ಷರ, ಹೆಣ್ಣಕ್ಷರ ಎಲ್ಲಾ ಚೆನ್ನಾಗಿ ಉಚ್ಚರಿಸುತ್ತಾನೆ " ಎಂದು "ಮರುಳಯ್ಯಾ ! ಮರುಳಯ್ಯ"! "ಎಂದು ಯಾರನ್ನೋ ಕರೆದರು. ನಾನು ಸುತ್ತಲೂ ನೋಡಿದೆ, ಎದುರುಗಡೆಯ ಪಾಠಶಾಲೆಯಿಂದ ಎತ್ತರವಲ್ಲದ ಒಬ್ಬ ವ್ಯಕ್ತಿ ಕೈಲಿ ಬೆತ್ತ ಹಿಡಿದುಕೊಂಡು ಬಂದರು. ಅವರು ಮುಂದೆ ಆ ಮಠದ ಸ್ವಾಮಿಯಾಗತಕ್ಕವರೆಂದು ಆ ಮೇಲೆ ನನಗೆ ಗೊತ್ತಾಯಿತು.

ನೋಡು ನೋಡು ! ಇವನಿಗೆ ಸಂಸ್ಕೃತ ಬರುತ್ತಂತೆ! ಅಮರ ಚೆನ್ನಾಗಿ ಹೇಳ್ತಾನೆ. ಇವನನ್ನು ಪಾಠಶಾಲೆಗೆ ಸೇರಿಸಿಕೊಳ್ಳಬಹುದು" ಎಂದು ಹೇಳಿದರು. ಅಷ್ಟುಹೊತ್ತೂ ರೇವಣ್ಣ ಮಠದ ಮುಂದುಗಡೆಯೇ ಮರೆಯಲ್ಲಿ ನಿಂತುಕೊಂಡು ಇವನ್ನೆಲ್ಲಾ ನೋಡುತ್ತಿದ್ದನಂತೆ !

ಮಠದಲ್ಲಿ ಸ್ನಾನಮಾಡಿದೆ. ಪ್ರಸಾದವೂ ಆಯಿತು. ನಾನು ಅಂದಿನಿಂದ ಮಠದ ವಿದ್ಯಾರ್ಥಿಯಾದೆ! ಅನೇಕ ಸಿದ್ಧರಲ್ಲಿ ನಾನೂ ಸಿದ್ಧನಾದೆ! ಸ್ವಾಮಿಗಳು ಹುಡುಗರನ್ನು "ಸಿದ್ದಪ್ಪ" ಎಂದೇ ಕರೆಯುತ್ತಿದ್ದರು.

ಮಠದ ನಾಯಿಯ ಹೆಸರೂ "ಸಿದ್ಧ"! ಗಾಡಿಯ ಎತ್ತುಗಳ ಹೆಸರೂ "ಸಿದ್ಧ"! ಎಲ್ಲ ಹುಡುಗರ ಹೆಸರೂ ಅವರಿಗೆ ಪರಿಚಯವಿರಲಿಲ್ಲ! ಆದ್ದರಿಂದ ಅವರಿಗೆ ನಾವೆಲ್ಲ "ಸಿದ್ಧ"ರೇ ಆಗಿದ್ದೆವು.

ಸ್ವಾಮಿಗಳ ಎದುರಿನಲ್ಲಿ ಯಾವ ವಿದ್ಯಾರ್ಥಿಯೂ ಸುಳಿಯುತ್ತಿರಲಿಲ್ಲ. ಅವರನ್ನು ಕಂಡರೆ ನಮಗೆಲ್ಲಾ ಭಯ! ಅಕಸ್ಮಾತ್ ಅವರಿಗೆ ಎದುರಾಗಿ ಸಿಕ್ಕಿದರೆ ಬಾ! ಇಲ್ಲಿ "ಸ್ವರವ್ಯಯಂ ಸ್ವರ್ಗನಾಕ" ಹೇಳು ಎಂದಾಗಲಿ, "ಲಕ್ಷ್ಮೀಃ ಪದ್ಮಾಲಯಾ ಪದ್ಮಾ" ಹೇಳು ಎಂದಾಗಲಿ, "ಈಶ್ವರ ಶ್ಯರ್ವ ಈಶಾನ" ಹೇಳು ಎಂದಾಗಲಿ, ಅವರಿಗೆ ಇಷ್ಟಬಂದ ಯಾವುದೋ ಸಾಲನ್ನು ಅಮರದಿಂದ ಉದ್ಧರಿಸಿ, ಅದನ್ನು ಪೂರ್ತಿ ಹೇಳುವಂತೆ ಹುಡುಗರನ್ನು ಕೇಳುತ್ತಿದ್ದರು. ಸರಿಯಾಗಿ ಹೇಳಿದರೆ ಬದುಕಿದರು! ಇಲ್ಲವಾದರೆ ಬಿಸಿಬಿಸಿ ನಾಲ್ಕು ಏಟು ತಪ್ಪುತ್ತಿರಲಿಲ್ಲ! ನನಗೆ ಒಂದು ಕಾಂಡ ಅಮರ ಹೃದ್ಗತವಾಗಿತ್ತು. ಎಲ್ಲಿ ಕೇಳಿದರೂ ಸ್ಪಷ್ಟವಾಗಿ ತಡೆಬಡೆಯಿಲ್ಲದೆ ಹೇಳುತ್ತಿದ್ದೆ. ಇದನ್ನು ತಿಳಿದಿದ್ದ ಸ್ವಾಮಿಗಳು ನಾನು ಎದುರಾಗಿ ಸಿಕ್ಕಿದರೂ ನನ್ನನ್ನು ಕೇಳುತ್ತಿರಲಿಲ್ಲ!

ರಾತ್ರಿ 9 ಘಂಟೆ ಆದ ಮೇಲೆ ಸ್ವಾಮಿಗಳು ವಿದ್ಯಾರ್ಥಿಗಳ ಕೊಠಡಿಗಳ ಹತ್ತಿರ ಬಂದು ಕಿಟಕಿಯಲ್ಲಿ ಇಣಕಿ ನೋಡುತ್ತಿದ್ದರು. ಅವರು ಎಂದು, ಎಷ್ಟು ಹೊತ್ತಿಗೆ ಎಲ್ಲಿಗೆ ಬರುತ್ತಾರೆಂಬುದನ್ನು ಯಾರೂ ಊಹಿಸುವಂತಿರಲಿಲ್ಲ! ಯಾವ ವಿದ್ಯಾರ್ಥಿಯೇ ಆಗಲಿ ತೂಕಡಿಸುತ್ತಿದ್ದರಾಗಲಿ, ಹರಟೆ ಹೊಡೆಯುತ್ತಿದ್ದರಾಗಲಿ ಅವರಿಗೆ ವಾಗ್ದಂಡನೆ ತಪ್ಪುತ್ತಿರಲಿಲ್ಲ. ಒಂದೊಂದು ಕೊಠಡಿಯಲ್ಲಿಯೂ ನಾಲ್ಕು-ಐದು ಜನ "ಸಿದ್ಧ" ರಿರುತ್ತಿದ್ದರು. ಬೆಳಗಿನಜಾವ ಎಲ್ಲರೂ ಎದ್ದು ಓದಬೇಕಾಗಿತ್ತು. ಆಗ ಸುಮಾರು ೪೦ ಮಂದಿ ವಿದ್ಯಾರ್ಥಿಗಳಿದ್ದರು. ಅರಸೀಕೆರೆ ಬಸಪ್ಪ, ಅಜ್ಜಗಾನಹಳ್ಳಿ ಸಿದ್ಧಲಿಂಗಯ್ಯ ಇವರಿಬ್ಬರೂ ವಯಸ್ಸಾದ ವಿದ್ಯಾರ್ಥಿಗಳು. ಅವರು ಆಗ ಎಫ್. ಎ. ತರಗತಿಯಲ್ಲಿದ್ದರು. ಅವರು ಸುಮಾರು 25 ವರ್ಷದ ತರುಣರಾಗಿದ್ದರು. ಸ್ವಾಮಿಗಳು ಅವರನ್ನು ಯಾವಾಗಲೂ ದಂಡಿಸುತ್ತಿರಲಿಲ್ಲ. ಸ್ವಾಮಿಗಳ ಸ್ನಾನವಾದಮೇಲೆ ಇವರಿಗೆ ದಿನವೂ ಸ್ನಾನಕ್ಕೆ ಬಿಸಿ ನೀರು ; ಸ್ವಾಮಿಗಳ ಊಟವಾದ ಮೇಲೆ ದಿನವೂ ಇವರಿಗೆ ಖಾಸಾ ಅಡುಗೆಯ ಪ್ರಸಾದ ಸಿಕ್ಕುತಿತ್ತು ! ಅಡುಗೆಯ ನಂಜುಂಡಯ್ಯನಿಗೆ ಇವರಿಬ್ಬರ ಮೇಲೆ ಅಪಾರ ವಿಶ್ವಾಸವಿತ್ತು !

ಪ್ರತಿ ಭಾನುವಾರ ಮಧ್ಯಾಹ್ನ 3 ಘಂಟೆಗೆ ಸ್ವಾಮಿಗಳು ಮಂಚದ ಮೇಲೆ ಮಂಡಿಸಿರುತ್ತಿದ್ದರು. ಮಠದ ಮುಂಭಾಗದಲ್ಲಿ ನಾವೆಲ್ಲಾ ಸಾಲಾಗಿ ನಿಲ್ಲುತ್ತಿದ್ದೆವು. ಶ್ರೀ ಉದ್ದಾನ ಶಿವಯೋಗೀಶ್ವರರೆಂದರೆ ಆರು ಅಡಿ ಎತ್ತರದ ನಿಲುವು! ಶಿವಯೋಗ ಕಾಂತಿ ಮುಖದಲ್ಲಿ! ಶಿವದೃಷ್ಟಿ ಕಣ್ಣುಗಳಲ್ಲಿ! ಕಾವಿಯ ಮುಕುಟ ಶಿರದಲ್ಲಿ! ಕಾವಿಯ ಕಫಿನಿ ಧರಿಸಿ, ಕೈಯಲ್ಲಿ ಹೊಗೆಸೊಪ್ಪನ್ನು ಉಜ್ಜುತ್ತ ಅಧ್ಯಕ್ಷರಾಗಿರುತ್ತಿದ್ದರು. ಅವರು ಆರಿಸಿದ ವಿದ್ಯಾರ್ಥಿ ಅವರೆದುರಿಗೆ ಅವನಿಗೆ

ಷ್ಟವಾದ ವಿಚಾರವನ್ನು ಕುರಿತು ಉಪನ್ಯಾಸ ಮಾಡಬೇಕಾಗಿತ್ತು! ಅವನು ಉಪನ್ಯಾಸವನ್ನು ಬರೆದುಕೊಂಡು ಬಂದಿದ್ದರೂ ಅದನ್ನು ಓದಬಹುದಾಗಿತ್ತು. ಆ ಕಾಲದಲ್ಲಿ "ಪ್ರಬಂಧ ರಚನೆ" ಎಂಬ ಒಂದು ಪುಸ್ತಕ ಯಾವುದೋ ತರಗತಿಗೆ ಪಠ್ಯ ಪುಸ್ತಕವಾಗಿತ್ತು. ಅದನ್ನು ಬಲ್ಲ 'ಸಿದ್ಧರು' ಆದರಿಂದ ಯಾವುದಾದರೂ ಒಂದು ಪ್ರಬಂಧವನ್ನು ಬರೆದುಕೊಂಡು ಬಂದು ಓದುತ್ತಿದ್ದರು. ನಾನೂ ಅದೇ ಗುಂಪಿಗೆ ಸೇರಿದ್ದೆ. ಆದರೆ, ನಾನು ಆ ವಿಷಯವನ್ನು ಕಂಠ ಪಾಠ ಮಾಡಿಕೊಂಡು ಬಂದು, ನನ್ನ ಸ್ವಂತ ಭಾಷಣದಂತೆ ಮಾತನಾಡುತ್ತಿದ್ದೆ. ಇದರಿಂದ ನನ್ನ ಜ್ಞಾಪಕ ಶಕ್ತಿ ಕುದುರಿತು. ಎಲ್ಲರಿಗಿಂತಲೂ ಚೆನ್ನಾಗಿ "ಬಸಪ್ಪ–ಬಸಪ್ಪ ಟೀಚರ್ ಮಾಡುತ್ತಾನೆ, ಟೀಚರ್ ಮಾಡುತ್ತಾನೆ" ಎಂದು ಸ್ವಾಮಿಗಳು ಪ್ರಶಂಸೆ ಮಾಡುತ್ತಿದ್ದರು. ಲೆಕ್ಚರ್ ಮಾಡುತ್ತಾನೆಂಬುದನ್ನು ಟೀಚರ್ ಮಾಡುತ್ತಾನೆ ಅಂತ ಹೇಳುತ್ತಿದ್ದರು. ಅವರು ವಿದ್ಯಾವಂತರಲ್ಲ; ಶಿವಾನುಭವ ವಿದ್ಯಾಗರಿಷ್ಠರು! ಆ ಕಾಲದಲ್ಲಿ ಜಹರುದ್ದೀನ್ ಮೆಕ್ಕೆ ಸಾಹೇಬರು, ತುಮಕೂರು ಜಿಲ್ಲಾ ಡೆಪ್ಯೂಟಿ ಕಮಿಷನರ್. ಅವರು ಒಮ್ಮೆ ಜಾತ್ರೆಯಲ್ಲಿ ಶ್ರೀ ಮಠಕ್ಕೆ ಬಂದಿದ್ದರು. ಸ್ವಾಮಿಗಳು ನನ್ನನ್ನು ಕರೆದು ಅವರಿಗೆ ತೋರಿಸಿ, "ಇವನು ಬಸಪ್ಪ. ಕನ್ನಡದಲ್ಲಿ ಚೆನ್ನಾಗಿ ಟೀಚಿಂಗ್ ಮಾಡುತ್ತಾನೆ" ಎಂದು ಪರಿಚಯ ಮಾಡಿಸಿದರು. ಅಂದು ಅವರ ಎದುರಿಗೆ "ಸಿದ್ಧಗಂಗಾ ಜಾತ್ರೆ" ಎಂಬ ವಿಚಾರವಾಗಿ ನನ್ನ ಭಾಷಣವೂ ಆಯಿತು. ಅವರೂ ಸಂತೋಷಪಟ್ಟರು. ನಾನು ಆಗ ಹೈಸ್ಕೂಲ್ ನಾಲ್ಕನೇ ಫಾರಂನಲ್ಲಿ ಓದುತ್ತಿದ್ದೆ. ನನಗೆ ಹದಿನಾರು ವರ್ಷ ವಯಸ್ಸು. ನಾನು ಸ್ವಾಮಿಗಳ ಮೆಚ್ಚುಗೆಗೇನೋ ಪಾತ್ರನಾಗಿದ್ದೆ! ಅವರ ಎದುರಿಗೇ ಸುಳಿದಾಡುವ ಸ್ವಾತಂತ್ರ್ಯವೂ ನನಗೆ ಲಭಿಸಿತ್ತು! ನನಗೆ ಅದೊಂದು ಹೆಮ್ಮೆಯೂ ಆಗಿತ್ತು. ಆದರೆ ಈ ನನ್ನ ಹೆಮ್ಮೆ ಒಂದು ಸಾರಿ ಅಪಾಯಕ್ಕೆ ಸಿಕ್ಕಿ ಪಾರಾಯಿತು!

ಆಗ ಮಠದಲ್ಲಿ ಗದ್ದಿಗೆ ಅಯ್ಯನವರು ಎಂಬ ಒಬ್ಬ ವಿರಕ್ತರು ಉಗ್ರಾಣದ ಯಜಮಾನರಾಗಿದ್ದರು. ಅವರ ಹೆಸರು ಶ್ರೀ ನಂಜುಂಡಸ್ವಾಮಿಗಳೆಂದು. ಅವರು ಮಠದ ಮುಂದಿರುವ ಗದ್ದುಗೆಯ ಪೂಜೆ ಮಾಡುತ್ತಿದ್ದುದರಿಂದ ಅವರು ಎಲ್ಲರಿಗೂ ಗದ್ದುಗೆ ಅಯ್ಯನವರಾಗಿದ್ದರು. ನಿಟ್ಟೂರು ಅಡವಪ್ಪ, ಹುಚ್ಚಪ್ಪ, ಬಸಪ್ಪ, ಕೋರದ ಸಿದ್ಧಲಿಂಗಯ್ಯ, ಕಂಬಾಳು ಸಿದ್ದಪ್ಪ, ಬಾಣವಾಡಿ ಶಿವಣ್ಣ, ಬಿ. ಗಂಗಪ್ಪ ಇವರೆಲ್ಲಾ ನನ್ನ ಸಹಪಾಠಿಗಳಾಗಿದ್ದರು. ಇನ್ನೂ ಅನೇಕ ವೀರಶೈವೇತರ ವಿದ್ಯಾರ್ಥಿಗಳೂ ಅಲ್ಲಿದ್ದರು. ಹಬ್ಬಗಳಲ್ಲಿ ಮಾಲ್ದಿ, ಪಾಯಸ ತಪ್ಪುತ್ತಿರಲಿಲ್ಲ. ಸ್ವಾಮಿಗಳೇ ನಮಗೆ ಮಾಲ್ದಿ ಪುಡಿಯನ್ನು ಬಡಿಸಿ ತಣಿಯುತ್ತಿದ್ದರು. ಅವರು ವಿದ್ಯಾರ್ಥಿಗಳನ್ನು ಎಷ್ಟೇ ದಂಡಿಸಿದರೂ, ಅವರಿಗೆ ಸಂತೃಪ್ತಿಯಾಗಿ ಪ್ರಸಾದವಿಟ್ಟು ಸಂತೈಸುತ್ತಿದ್ದರು. ಒಂದು ದಿನ ಕೆಲವರು ನಾಲ್ಕಾರು ಹಿರಿಯ "ಸಿದ್ಧರು" ತಲೆಗೂದಲನ್ನು ಕತ್ತರಿಸಿ ಹಾಕಿ 'ಕ್ರಾಪ್' ಬಿಡಿಸಬೇಕೆಂದು ನಿರ್ಧರಿಸಿದರು. ನಾನೂ ಅವರಲ್ಲಿ ಸೇರಿದ್ದೆ. ಕ್ರಾಪ್ ಮಾಡಿಸಿಕೊಂಡಿದ್ದ ಅನೇಕ ವಿದ್ಯಾರ್ಥಿಗಳನ್ನು ನಾವು ತುಮಕೂರು ಹೈಸ್ಕೂಲಿನಲ್ಲಿ ನೋಡುತ್ತಿದ್ದೆವು. ಅಲ್ಲದೆ ನಮ್ಮ ತಲೆಯಲ್ಲಿ ಹೇನು, ಸೀರೂ ಇರುತ್ತಿದ್ದುವು. ಮಠದಲ್ಲಿ ಕೆಲಸ ಮಾಡುತ್ತಿದ್ದ ಕಾಮಕ್ಕ ಎಂಬ ಅಜ್ಜಿ ಆಗಾಗ ನಮ್ಮ ತಲೆಗಳನ್ನು ಚೊಕ್ಕ ಮಾಡುತ್ತಿದ್ದಳು. ನಾವು ಕ್ರಾಪ್ ಬಿಡಿಸುವುದಂತೂ ಸ್ವಾಮಿಗಳಿಗೆ ತಿಳಿಯುವಂತಿಲ್ಲ. ಅವರಿಗೆ ತಿಳಿದರೆ ಮಠದಿಂದ ಓಡಿಸಿ ಬಿಡುತ್ತಾರೆ! ಒದೆಗಳಂತೂ ತಪ್ಪಿದ್ದಲ್ಲ! ಏನಾದರೂ ಆಗಲಿ ಕ್ರಾಪ್ ಮಾಡಿಸಲು ನಿರ್ಧರಿಸಿದೆವು.

ಕಾರ್ತಿಕ ಮಾಸ; ಭಾನುವಾರ. ನಾವು ನಾಲ್ಕೈದು ಜನ ಯಾರಿಗೂ ತಿಳಿಯದಂತೆ ಬೆಟ್ಟದ ತಪ್ಪಲಿಗೆ ಹೋದೆವು. ಬಂಡೇಪಾಳ್ಯದ ಹಜಾಮ "ಸಿದ್ದಪ್ಪ" — ಹೆಸರು ಸರಿಯಾಗಿ ನೆನಪಿಲ್ಲ — ನಮಗೆಲ್ಲಾ ಬೆಟ್ಟದ ಬುಡದಲ್ಲಿ, ಹಳೆಯ ಮಠದ ಆಚೆಯ ತೋಪಿನಲ್ಲಿ, ಜುಟ್ಟುಗಳನ್ನು ಕತ್ತರಿಸಿ 'ಕ್ರಾಪ್' ಮಾಡಿಯೇ ಬಿಟ್ಟ! ಒಬ್ಬೊಬ್ಬರೂ ಅವನಿಗೆ ಒಂದೊಂದಾಣೆ ಕೊಟ್ಟೆವು! ಅವನ ಕನ್ನಡಿಯಲ್ಲಿಯೇ ನಮ್ಮ ನಮ್ಮ ಮುಖಗಳನ್ನು ನೋಡಿಕೊಂಡು ಹಿಗ್ಗಿದೆವು. ಎಲ್ಲರೂ ಹಳೆಯ ಮಠದ ಬಾವಿಯ ಹತ್ತಿರ ನೀರು ಸೇದಿಕೊಂಡು ಸ್ನಾನ ಮಾಡಿದೆವು. ಶಿವಪೂಜೆಯೂ ಆಯಿತು. ತಲೆಯ ಮೇಲೆ ಮುಸುಕು ಹಾಕಿಕೊಂಡು ಹೊಸ ಮಠದ ಅಡುಗೆ ಮನೆಯತ್ತ ಸಾಗಿದೆವು. ಅನೇಕರು ಆಗಲೇ ಊಟ ಮಾಡಿದ್ದರು. ನಾವೂ ಅತ್ತ ಇತ್ತ ನೋಡಿಕೊಂಡು ಅಡುಗೆ ಮನೆಗೆ ಹೋಗಿ ಕತ್ತಲೆಯ ಜಾಗದಲ್ಲಿ ಊಟಕ್ಕೆ ಕುಳಿತೆವು. ಸ್ವಾಮಿಗಳ ದಂಡನೆಯನ್ನಾದರೂ ತಪ್ಪಿಸಿಕೊಳ್ಳಬಹುದಾಗಿತ್ತು. ಅಡುಗೆಯ ನಂಜುಂಡಯ್ಯನ ಕಾಟವನ್ನು ತಪ್ಪಿಸಿಕೊಳ್ಳಲು ಯಾರಿಗೂ ಸಾಧ್ಯವಿರಲಿಲ್ಲ! ಅವನು ನಮ್ಮ ಕ್ರಾಪುಗಳನ್ನು ನೋಡಿಯೇಬಿಟ್ಟ! ಇಷ್ಟೇ ಅಲ್ಲ, ಗೋಶಾಲೆ ಬಾಳಯ್ಯ, ಮಜ್ಜನದ ಮನೆ ರೇವಣಸಿದ್ದಯ್ಯ, ದನದ ಕೊಟ್ಟಿಗೆ ಚನ್ನಪ್ಪ ಇವರೆಲ್ಲಾ ನಮ್ಮನ್ನು ಕಂಡು ಅಲ್ಲಿಯೇ ಗೇಲಿ ಮಾಡಿದರು! ಹಾಗೂ ಹೀಗೂ ಈ ಸುದ್ದಿ ಸ್ವಾಮಿಗಳಿಗೂ ವರದಿಯಾಯಿತಂತೆ! ಕಾರ್ತಿಕ ಸೋಮವಾರ! ಬಂಡೇಪಾಳ್ಯದ ಹಜಾಮ ಸಂಜೆವೇಳೆ ಬೆಟ್ಟದ ಮೇಲೆ ದೇವಸ್ಥಾನದಲ್ಲಿ ಓಲಗ ಊದಲು ಪದ್ಧತಿಯಂತೆ ಅವರ ಅಣ್ಣನ ಜೊತೆಯಲ್ಲಿ ಬಂದಿದ್ದ. ಅವನು ಬರೀ ಶೃತಿ ಹಿಡಿಯುತ್ತಿದ್ದ; ಅವರ ಅಣ್ಣ ನಾಗಸ್ವರ ನುಡಿಸುತ್ತಿದ್ದ. ಸಂಜೆ ಪೂಜಾ ಸಮಯ, ಸ್ವಾಮಿಗಳು ಬೆಟ್ಟದ ಮೇಲಕ್ಕೆ ಬರುತ್ತಿದ್ದಾರೆಂದು ಯಾರೋ ಅವನಿಗೆ ಹೇಳಿದರು. ಅವನು ಹೆದರಿಬಿಟ್ಟ! ಪೂಜೆ ಆಗುತ್ತಿತ್ತು. ಮಂಗಳಾರತಿ ಸಮಯ. ಅವನು ಶೃತಿಯನ್ನು ನಿಲ್ಲಿಸಿ, ದೇವಸ್ಥಾನದ ಮೆಟ್ಟಲು ಇಳಿದು, ಆ ಕತ್ತಲೆಯಲ್ಲಿ ಎಲ್ಲಿಯೋ ಅಡಗಿ ಬಿಟ್ಟ! ಬರೀ ನಾಗಸ್ವರವೇ ನುಡಿಯುತ್ತಿತ್ತು! ಶೃತಿ ಇಲ್ಲ! ಪೂಜೆ ಆಯಿತು. 'ಸಿದ್ಧ'ರಿಗೆ ಕ್ರಾಪ್ ಮಾಡಿದ ಹಜಾಮನನ್ನು ಸ್ವಾಮಿಗಳು ಥಳಿಸಿಬಿಡುತ್ತಾರೆಂದು ಎಲ್ಲರೂ ಗಾಬರಿಯಾಗಿದ್ದರು.

ನಮ್ಮ 'ಕ್ರಾಪ್' ಮಠದಲ್ಲಿ ಎಲ್ಲರ ಮಾತುಗಳಿಗೂ ಒಳಗಾಯಿತು. ಮರು ದಿನ ರಾತ್ರಿ ನಾವೆಲ್ಲ ಊಟಕ್ಕೆ ಕುಳಿತಿದ್ದೆವು. ಸ್ವಾಮಿಗಳು ಕೈಯ್ಯಲ್ಲಿ ಕತ್ತರಿ ಹಿಡಿದುಕೊಂಡು ಊಟದ ಮನೆಗೆ ಬಂದರು. ಅರ್ಧ ಊಟ ಆಗಿತ್ತು. ಕತ್ತರಿಯಿಂದ ಗಾಳಿಯನ್ನು ಕತ್ತರಿಸುತ್ತ — "ಯಾರು? ಯಾರು? ಕ್ರಾಪ್ ಮಾಡಿಸಿದವರು, ಕ್ರಾಪ್ ಮಾಡಿಸಿದವರು ಎಲ್ಲಿ! ಎಲ್ಲಿ! ಎಂದು ಉದ್ದಕ್ಕೂ ಒಬ್ಬೊಬ್ಬರ ತಲೆಯನ್ನೂ ನೋಡುತ್ತ ಬಂದರು. ಯಾವಾಗಲೂ ಎರಡು ಮೂರು ಸಾಲುಗಳಲ್ಲಿ ನಾವೆಲ್ಲ ಊಟಕ್ಕೆ ಕುಳಿತಿರುತ್ತಿದ್ದೆವು. ಆಗ ಊಟದ ಮನೆ ಈಗಿರುವಂತಿರಲಿಲ್ಲ! ಅದು ಕಿರಿದಾಗಿತ್ತು. ಆದರಲ್ಲಿ ಕತ್ತಲೆ ತೆಳುವಾಗಿ ಹರಡಿರುತ್ತಿತ್ತು. ಸ್ವಾಮಿಗಳು ಮುಂದು ಮುಂದಕ್ಕೆ ಬಂದಾಗ "ಕ್ರಾಪ್ ಸಿದ್ಧರು" ನುಸುಳಿಕೊಂಡು ಹೋಗಿ ಸ್ವಾಮಿಗಳು ನೋಡಿ ಬಂದಿದ್ದ ಹಿಂದಿನ ಸಾಲುಗಳಿಗೆ ಸೇರಿಬಿಟ್ಟರು! ನಾನು ಕಲ್ಲು ಕಂಬದ ಮರೆಯಲ್ಲಿ ಕುಳಿತಿದ್ದೆ. ಸ್ವಾಮಿಗಳು ನನ್ನನ್ನೂ ನೋಡಿದರು! ಯಾರು! ಯಾರು!! ಬಸಪ್ಪ! ಬಸಪ್ಪ! ನೀನು ಚೆನ್ನಾಗಿ ಟೀಚರ್ ಮಾಡ್ತೀಯಾ! "ಕ್ರಾಪ್" ಮಾಡಿಸಿಕೊಂಡವರು ಯಾರು? "ಕ್ರಾಪ್" ಮಾಡಿಸಿಕೊಂಡವರು ಯಾರು? ಇದು ಸರಿಯೇ? ನೀನೇ ಟೀಚರ್ ಮಾಡು! ಟೀಚರ್ ಮಾಡು – ಎಂದರು. ಕತ್ತಲಲ್ಲಿ ನನ್ನ ತಲೆಯ "ಕ್ರಾಪ್" ಅವರಿಗೆ ಕಾಣಲಿಲ್ಲವೇನೋ! ಸೀಮೆ ಎಣ್ಣೆಯ ಬುಡ್ಡಿಯ ಬೆಳಕು ಆ ಊಟದ ಮನೆಗೆ ಸಾಕಾಗುತ್ತಿರಲಿಲ್ಲ! ನಾನು ಎದ್ದು ನಿಂತುಕೊಂಡು "ಬುದ್ಧೀ ನಾವೆಲ್ಲ ಇಂಗ್ಲಿಷ್ ಓದುತ್ತೇವೆ. ಇಂಗ್ಲಿಷ್ ಸಂಸ್ಕೃತಿ ದೇಶವೆಲ್ಲ ತುಂಬಿಕೊಂಡು ಬಂದಿದೆ. ಭಾಷೆಗೆ ತಕ್ಕ ವೇಷ ಇದ್ದರೆ ತಪ್ಪೇನೂ ಇರಲಾರದು, ಬುದ್ಧೀ! ಈ ಹೊತ್ತಲ್ಲ ನಾಳೆಯಾದರೂ ಇಂಗ್ಲಿಷ್ ಓದಿದವರು "ಕ್ರಾಪ್" ಬಿಡಿಸುತ್ತಾರೆ. ಮಠಗಳಿಗೆ ಸ್ವಾಮಿಗಳು ಆಗುವವರು ಮಾತ್ರ "ಕ್ರಾಪ್" ಬಿಡಬಾರದು ಬುದ್ಧಿ. ಇದರ ಮೇಲೆ ತಮ್ಮ ಚಿತ್ತ"ಎಂದುಬಿಟ್ಟೆ ಅದನ್ನು ಕೇಳಿ ಅವರು ನಕ್ಕುಬಿಟ್ಟರು.

ಉದ್ದಾನ ಸ್ವಾಮಿಗಳು ನಕ್ಕರೆಂದರೆ ಕೈಲಾಸ ಧರೆಗಿಳಿದು ಬಂದಂತೆ!

"ಸರಿ! ಸರಿ! ನೀವೆಲ್ಲ ಇಂಗ್ಲಿಷ್‌ನವರಂತೆ ಬುದ್ಧಿವಂತರಾಗಬೇಕು. ನಮ್ಮ ಧರ್ಮ ಬಿಡಬಾರದು.

ಸ್ನಾನ ಶಿವಪೂಜೆ ಬಿಡಬಾರದು. ನೀವೆಲ್ಲಾ ಚೆನ್ನಾಗಿ ಓದಿ ಪ್ಯಾಸ್ ಮಾಡಬೇಕು. ಪ್ಯಾಸ್ ಮಾಡದೇ ಇದ್ದವನ "ಕ್ರಾಪ್" ಕತ್ತರಿಸಿ ಹಾಕೋಣ! ಎಂದು ಹೇಳಿಕೊಂಡು ಸ್ವಾಮಿಗಳು ದಯಮಾಡಿಸಿದರು. ನಮ್ಮ ಊಟ ಮುಗಿಯಿತು! ಮಠದಲ್ಲಿ "ಕ್ರಾಪ್" ಚಿಗುರಿತು! ಹಜಾಮನಿಗೂ ಧೈರ್ಯ ಬಂತು! ಇಂಥ ಹಲವಾರು ಪ್ರಸಂಗಗಳಲ್ಲಿ ಉದ್ದಾನ ಶಿವಯೋಗೀಶ್ವರರು ಉದಾರ ಹೃದಯದಿಂದ ವಿದ್ಯಾರ್ಥಿಗಳನ್ನು ನಡೆಸಿಕೊಂಡರು! ಅನುಗ್ರಹಿಸಿದರು. ಅವರ ತಪಃ ಪ್ರಭಾವದಿಂದ ನಮ್ಮ ಜೀವನ ತಪಸ್ಸು ಸಿದ್ಧಿಸಿತು

ಇಂದು ಶ್ರೀ ಸಿದ್ಧಗಂಗಾ ಕ್ಷೇತ್ರ ಪೂಜ್ಯ ಶ್ರೀ ಶಿವಕುಮಾರ ಸ್ವಾಮಿಗಳವರ ಸಾನ್ನಿಧ್ಯ ಬಲದಿಂದ ಭೂಕೈಲಾಸದಂತೆ ಶೋಭಿಸುತ್ತಿದೆ. ಅಂದು ಮಠದಲ್ಲಿದ್ದವರು 40 ಮಂದಿ ಸಿದ್ಧರು! ಇಂದು ಶ್ರೀ ಮಠದಲ್ಲಿ 4000 ಸಿದ್ಧರಿದ್ದಾರೆ! ಇವರ ಪಟ್ಟಾಧಿಕಾರದ ರಜತಮಹೋತ್ಸವವೂ ವಿದ್ಯಾರ್ಥಿ ನಿಲಯದ ಸುವರ್ಣ ಮಹೋತ್ಸವವೂ ಕರ್ನಾಟಕ ಜನಜೀವನದ ಕೀರ್ತಿ ಕಿರಣಗಳಂತೆ ಎಂದೆಂದಿಗೂ ಪ್ರಕಾಶಿಸುತ್ತಿರಲಿ ಎಂದು ಹಾರೈಸುತ್ತೇನೆ.

ಶಿವಂ ಭೂಯಾತ್



## ಮೆಲುಕು ಹಾಕುವ ಮಾತುಗಳು

1) ತೊಂದರೆ ಪಡಿಸುವವರಿಗೆ ಆಗುವುದು ಒಂದು ದಿವಸದ ಫಲ. ಸಹಿಸಿಕೊಂಡವರ ಖ್ಯಾತಿ ಬಹಳ ದಿನ ಇರುತ್ತದೆ.

2) ಇತರರಲ್ಲಿರುವ ದೋಷವನ್ನು ಹುಡುಕುವಂತೆ ತಮ್ಮಲ್ಲಿರುವ ದೋಷಗಳನ್ನು ಹುಡುಕುವುದು ಬಹಳ ಪ್ರಯೋಜನವನ್ನು ಉಂಟುಮಾಡುವುದು.

3) "ನಾನು ಎಷ್ಟೋ ತಪ್ಪುಗಳನ್ನು ಮಾಡಿದ್ದೇನೆ ಇನ್ನೂ ಒಂದನ್ನು ಮಾಡಿದರೆ ದೋಷವೇನು ?" ಎನ್ನಬಾರದು. ನೀರಿನ ಹನಿಗಳಿಂದ ಬಿಂದಿಗೆ ತುಂಬಿ ಹೋಗುವುದಿಲ್ಲವೆ ?

4) ಸ್ವಜನರಲ್ಲಿ ದ್ವೇಷ ಮಾಡಬಾರದು ; ಬಲಶಾಲಿಯೊಡನೆ ಹೆಣಗಬಾರದು ; ಕೇಳದೆ ಇರುವಾಗ ಏನನ್ನೂ ಹೇಳಬಾರದು.

5) ನಿರ್ದೋಷಿಗಳಾದ ಸತ್ಪುರುಷರೂ ಕೂಡ ನೀಚರ ಸಹವಾಸದಿಂದ ದೋಷಿಗಳೆಂದು ಭಾವಿಸಲ್ಪಡುವರು. ಹೇಗೆಂದರೆ ಹಸುವಿನ ಹಾಲಾದರೂ ಈಚಲ ಮರದಡಿಯಲ್ಲಿ ಕುಡಿದರೆ ಹೆಂಡವೆಂದು ತಿಳಿಯಲ್ಪಡುವುದು.



# ವಿದ್ಯೆಯ ಗೊತ್ತುಗುರಿಗಳು

— ಹ. ಸು. ಸುಬ್ಬರಾವ್.

"ನೀನು ಬದುಕು ; ಇತರರನ್ನೂ ಬದುಕಿಸು."

— ಈ ಮಾತು ವಿಶ್ವದ ಎಲ್ಲ ವ್ಯಕ್ತಿಗಳಿಗೂ ಅನ್ವಯಿಸುವುದು. ಆದರೆ ಆಡಲು ಎಷ್ಟು ಸರಳವೋ ಆಚರಣೆಗೆ ಅಷ್ಟು ಕಠಿಣವಾದ ಮಾರ್ಗ. ತಾನು ಸುಖವಾಗಿ ಬಾಳಬೇಕೆಂಬ ಆಸೆ ಎಲ್ಲರಲ್ಲೂ ಇರುವುದು ಸಹಜ. ಇತರರಿಗೆ ಉಪಕಾರಿಯಾಗಿ ಬಾಳಬೇಕಾದರೆ, "ಜ್ಞಾನ" ಅತಿ ಅವಶ್ಯಕ. ಈ ಜ್ಞಾನ ವಿದ್ಯೆಯಿಂದ ಮಾತ್ರವೇ ಲಭ್ಯವಾಗುತ್ತದೆ. ಎಷ್ಟೇ ಅನುಭವವಿದ್ದರೂ, ವಿದ್ಯೆಯನ್ನು ಪಡೆಯುವುದಾಗಲೀ, ವಿದ್ಯಾಲಾಭದಿಂದಾಗುವ ಫಲವನ್ನು ಪಡೆಯುವುದಾಗಲೀ ಅನುಭವ ಮಾತ್ರದಿಂದಲೇ ಸಾಧ್ಯವಿಲ್ಲ. ಕಲಿಯುವ ವಿದ್ಯೆಯನ್ನು, ತನ್ನ ಬಾಳಿನ ಅನುಭವದಿಂದ ವೃದ್ಧಿಸಿಕೊಳ್ಳಬಹುದೇ ಹೊರತು, ನೇರವಾಗಿ ವಿದ್ಯೆಯನ್ನೆ ಪಡೆಯಲಾಗುವುದಿಲ್ಲ. ನಾಗರಿಕ ಜೀವನದಲ್ಲಿ, ಆದಿವಾಸಿಗಳ ಕಾಲದಿಂದ ಇಲ್ಲಿಯವರೆಗೆ ಆಗಿರುವ ಬದಲಾವಣೆಗಳನ್ನು ಗಮನಿಸಿದಾಗ ಈ ಅಂಶ ಸ್ಪಷ್ಟವಾಗುತ್ತದೆ. ಆದಿವಾಸಿಗಳ ಜೀವನಕ್ರಮವು, ರಾಕೆಟ್ ಯುಗದ ಜೀವನ ಕ್ರಮದಿಂದ ಹೇಗೆ, ಎಷ್ಟು ಭಿನ್ನವಾಗಿದೆಯೆಂಬುದನ್ನು ವಿದ್ಯೆ ತಿಳಿಸಿಕೊಡುತ್ತದೆ.

ವಿದ್ಯೆಯನ್ನು ಹಲವಾರು ಮಾರ್ಗಗಳಿಂದ ಪಡೆಯ ಬಹುದಾಗಿದೆ. ಇದಕ್ಕಾಗಿ, ಆಯಾ ಕಾಲಕ್ಕೆ ತಕ್ಕಂತೆ, ಸುಧಾರಣೆಗಳನ್ನು ತರಲಾಗಿದೆ. ಹೊಸ ಹೊಸ ಯೋಜನೆಗಳನ್ನು ಮಾಡಲಾಗಿದೆ. ವಿದ್ಯಾಭ್ಯಾಸದ ಗುರಿಯನ್ನು ವಿದ್ವಾಂಸರು ಮಂಥನ ಮಾಡಿ ಹೊರಗೆಡವಿದ್ದಾರೆ. ಆದುದರಿಂದ ಇಂದು ನಮ್ಮ ವಿದ್ಯೆಯ ಗೊತ್ತುಗುರಿಗಳೇನು ಎಂದು ತಿಳಿಯುವ ಮೊದಲು, ವಿದ್ಯೆಯ ಗುರಿ ಏನು ಎಂಬುದನ್ನು ತಿಳಿಯುವುದು ಅತಿ ಅವಶ್ಯಕವಾಗಿದೆ.

"ಮಾನವನನ್ನು ಪೂರ್ಣ ಜೀವನಕ್ಕಾಗಿ ಸಿದ್ಧಪಡಿಸುವುದು"

"ಮಾನವನ ವ್ಯಕ್ತಿತ್ವದ ಸರ್ವತೋಮುಖ ವಿಕಾಸ,"

"ಮಾನವನ ಬುದ್ಧಿಯಲ್ಲಿ ಆಲೋಚನಾತ್ಮಕ ಭಾವವನ್ನು ಉದ್ದೀಪನಗೊಳಿಸುವುದು,"

"ಮಾನವನನ್ನು ವ್ಯವಹಾರ ಕುಶಲನನ್ನಾಗಿಯೂ, ದೂರದರ್ಶಿಯನ್ನಾಗಿಯೂ ಮಾಡುವುದು."

"ಮಾನವನಲ್ಲಿ ಸಮದೃಷ್ಟಿ ಮತ್ತು ಆತ್ಮಬಲ ಸಂಪನ್ನತೆಯನ್ನು ಉಂಟುಮಾಡುವುದು."

"ಯಾವದು ವ್ಯಕ್ತಿಯನ್ನು ಎಲ್ಲಾ ಕಾಲಗಳಲ್ಲಿಯೂ ಸತ್ಯವಾದ ಮಾರ್ಗದಲ್ಲಿ ನಡೆಸುತ್ತ, ಜನತೆಯ ಕರ್ತವ್ಯಗಳನ್ನು ಕುಶಲತೆಯಿಂದಲೂ, ನ್ಯಾಯಪೂರ್ವಕವಾಗಿಯೂ ಪರಿಪಾಲನೆ ಮಾಡುವಂತಹ

ಯೋಗ್ಯನನ್ನಾಗಿ ಮಾಡುತ್ತದೆಯೋ ಅದೇ ಪೂರ್ಣ ವಿದ್ಯೆ,"

"ಜೀವನೋಪಾಯಕ್ಕೆ ಅಗತ್ಯವಾದ ಸುಖ ಸಾಧನೆಯನ್ನು ಕಲ್ಪಿಸಿಕೊಡುವುದೇ ವಿದ್ಯೆ,"

"ಮಾನವನನ್ನು ಶೀಲವಂತನನ್ನಾಗಿ ಮಾಡುವುದು."

—ಹೀಗೆ ಇನ್ನೂ ಎಷ್ಟೋ ಅಭಿಪ್ರಾಯಗಳನ್ನು ಸಂಗ್ರಹಿಸಬಹುದು. ಆದರೆ, ಇವುಗಳಲ್ಲಿ ಯಾವುದೇ ಒಂದು ಮಾತ್ರ ಗುರಿ ಎಂದಿಟ್ಟುಕೊಂಡು ಉಳಿದುದನ್ನು ಬಿಟ್ಟು ಬಿಡುವುದು, ತಲೆಯನ್ನಿಟ್ಟುಕೊಂಡು, ಉಳಿದ ಅಂಗಗಳನ್ನು ಬಿಟ್ಟ ದೇಹದಂತಾದೀತು. ಇವುಗಳಲ್ಲಿ ಯಾವುದೊಂದು ಮಾತ್ರವೇ ಸರಿ, ಉಳಿದುವು ಸರಿಯಲ್ಲ ಎಂದಲ್ಲ. ಇವೆಲ್ಲವೂ ಒಂದಕ್ಕೊಂದು ಪೂರಕಗಳೆಂದು ತಿಳಿಯಬೇಕು. ಹಲವು ನದಿಗಳು ಸೇರಿ ಸಾಗರವಾದೀತು, ಅಂತೆಯೇ ಹಲವು ಗುರಿಗಳು ಸೇರಿ ವಿದ್ಯೆ ಸಾರ್ಥಕವಾದೀತು–ಎಂಬ ಮಾತಂತೂ ಪೂರ್ಣ ಸತ್ಯ. ಅವಿದ್ಯಾವಂತನ ಕಾರ್ಯ ಮತ್ತು ನಡವಳಿಕೆಗಳಿಗೂ ವಿದ್ಯಾವಂತನ ಕಾರ್ಯ ಮತ್ತು ನಡವಳಿಕೆಗಳಿಗೂ ಇರುವ ವ್ಯತ್ಯಾಸವನ್ನು ಸುಲಭವಾಗಿ ಗುರುತಿಸಬಹುದು. ಅವಿದ್ಯಾವಂತನಲ್ಲಿ ಭಯ, ಸಂದೇಹ, ಜಿಗುಪ್ಸೆಗಳಿರುವುದನ್ನೂ, ವಿದ್ಯಾವಂತರಲ್ಲಿ, ಧೈರ್ಯ, ದೃಢತೆ ಮತ್ತು ಉತ್ಸಾಹಗಳನ್ನೂ ಕಾಣಬಹುದು

ಇಂದಿನವರೆಗೆ ವಿದ್ಯೆಯು ಬೆಳೆದು ಬಂದ ಹಂತಗಳನ್ನು ವಿಮರ್ಶಿಸಿ ನೋಡಿದಾಗ, ಆಶ್ಚರ್ಯಕರ ಬದಲಾವಣೆಗಳನ್ನು ಕಾಣಬಹುದು ಆತ್ಮಾನುಸಂಧಾನಕ್ಕಾಗಿಯೇ ವಿದ್ಯೆಯನ್ನು ಗಳಿಸಿಕೊಂಡು, ಜೀವನದ ಗುರಿಯನ್ನು ತಲಪುವ ಕಾಲವೊಂದಿತ್ತು. ಆಗ ಯಾರಾದರೊಬ್ಬ ಸಿದ್ಧ ಪುರುಷ ಅಥವಾ ಋಷಿಯ ಮೂಲಕ ಪ್ರಣೀತವಾದದ್ದೇ ವಿದ್ಯೆಯಾಗಿತ್ತು. ಅದು ಎಲ್ಲರಿಗೂ ಎಟಕುವಂತಿರಲಿಲ್ಲ. ಜನ ಸಂಖ್ಯೆ ವೃದ್ಧಿಯಾದಂತೆಲ್ಲಾ ನಾಗರಿಕತೆಯೆಂಬುದು ಬೆಳೆದಂತೆಲ್ಲಾ ವಿದ್ಯಾಕ್ಷೇತ್ರ ವಿಶಾಲವಾಯಿತು. ಹೀಗಾಗಿ ವಿದ್ಯೆ–ಗುರು–ಶಿಷ್ಯ–ಇವುಗಳಿಗೆ ಹಿಂದೆ ಇದ್ದ ಭೇದವು ಇಂದು ಮಾಯವಾಗಿ ಮೂರೂ ಒಂದಾಗಿದೆ.

ಮೊದಲಲ್ಲಿ ತಪೋವನಗಳ ಕಾಲದ ವಿದ್ಯೆಯನ್ನು ತೆಗೆದುಕೊಳ್ಳೋಣ. ಆಗ ವಿದ್ಯೆಯ ಅರ್ಥ ಮತ್ತು ವ್ಯಾಪ್ತಿ ಐಹಿಕಕ್ಕೇ ಸೀಮಿತವಾಗಿರಲಿಲ್ಲ. ಐಹಿಕ ಸುಖ ಭೋಗಗಳು ಗೌಣವಾಗಿದ್ದುವು. ತಪಸ್ಸಿನಿಂದ ಜ್ಞಾನಾರ್ಜನೆ; ಜ್ಞಾನದಿಂದ ಮೋಕ್ಷ ಸಾಧನೆ ಅಥವಾ ಆತ್ಮ ಸಾಧನೆಯೆಂಬುದು ಆಗಿನ ಗುರಿ. ಇದನ್ನು ಧಾರೆಯೆರೆಯುವ ಗುರು, ಸಿದ್ಧಿ ಪಡೆದಿರಬೇಕಾಗಿದ್ದಿತು. ಬಳಿಕ ತಾನು ಮೆಚ್ಚಿದ ಶಿಷ್ಯರುಗಳಿಗೆ ಮಾತ್ರವೇ ವಿದ್ಯೆಯನ್ನು ಅನುಗ್ರಹಿಸುತ್ತಿದ್ದರು. ಹಾಗೆ ಗುರುವಿನ ಅನುಗ್ರಹವನ್ನು ಪಡೆಯಲು ಗುರುವಿನ ಗುಲಾಮನಾಗಿರಬೇಕಾಗಿದ್ದಿತು. ದೇಹದ ಮೋಹವಳಿಯುವವರೆಗೂ ಗುರುವಿನ ಅನುಗ್ರಹವಾಗುತ್ತಿರಲಿಲ್ಲ. ಇದಕ್ಕಾಗಿ, ಸೌದೆ ಒಡೆಯುವುದು, ಮನೆಗೆಲಸಗಳನ್ನು ಮಾಡುವುದು ಗುರುವಿನ ಮನಸ್ಸು ಸಾಕೆನ್ನುವವರೆಗೂ ಉಪವಾಸವಿರುವುದು, ಎತ್ತುಗಳಿಲ್ಲದ ಬಂಡಿಯಲ್ಲಿ, ಕಾಡಿನಿಂದ ಸೌದೆಕಡಿದು ತುಂಬಿಕೊಂಡು ತರುವುದು, ಗದ್ದೆಗಳಿಗೆ ನುಗ್ಗುವ ಪ್ರವಾಹವನ್ನು ದೇಹದಿಂದ ತಡೆದು ನಿಲ್ಲಿಸುವುದು, ಇವೇ ಮುಂತಾದ ಅತ್ಯಂತ ಕಠಿಣ ದೈಹಿಕ ಪರಿಶ್ರಮಗಳಲ್ಲಿ ಉತ್ತೀರ್ಣನಾಗಬೇಕಾಗಿದ್ದಿತು. ನಂತರ ಗುರುವು ಪ್ರಸನ್ನನಾಗಿ ಒಮ್ಮೆಗೇ ಎಲ್ಲಾ ವಿದ್ಯೆಗಳನ್ನೂ ಅನುಗ್ರಹಿಸುತ್ತಿದ್ದನು. 'ದೇಹ ನಶ್ವರ ಆತ್ಮವೊಂದೇ ಶಾಶ್ವತ', ಎಂಬ ಮಂತ್ರ ಅನವರತ ಮೊಳಗುತ್ತಿತ್ತು. ಇದರಿಂದ ಗುರುವಿನ ವಲಯ ಸೀಮಿತವಾಗಿದ್ದುದಲ್ಲದೆ, ಬೇಕೆಂದವರೆಲ್ಲರೂ ಶಿಷ್ಯರಾಗಲಾಗದ ಕೊರತೆ ಎದ್ದು ಕಾಣುತ್ತಿದ್ದಿತ್ತು ಪ್ರಾಪಂಚಿಕ ದೃಷ್ಟಿಯಿಂದ ನೋಡಿದಾಗ, ಇದು ಸಂಕೀರ್ಣ ಮಾರ್ಗವೆನ್ನಿಸುವುದು ಸಹಜ.

ಆರ್ಯರ ಕಾಲಕ್ಕೆ ಬಂದಾಗ ವಿದ್ಯೆಯ ರೂಪುರೇಷೆಗಳು ಭಿನ್ನ ಮಾರ್ಗದಲ್ಲಿ ಪ್ರವಹಿಸಿದುದನ್ನು ಕಾಣುವೆವು. ಧಾರ್ಮಿಕ ಭಾವನೆಗಳೇ ಅತಿ ಮುಖ್ಯವಾದ ಕಾಲವಾದ್ದರಿಂದ ವಿದ್ಯೆಗೆ ಧರ್ಮವೇ ಪ್ರಾಧಾನ್ಯವಾಯಿತು. ಜೀವನದಲ್ಲಿ ಧರ್ಮನಿಷ್ಠನಾಗಿ ನಡೆಸುವ ವಿದ್ಯೆಯೇ, ವಿದ್ಯೆ ಎಂದು ವಿಂಗಡಿಸಿದರು. ಬಾಲ್ಯದಲ್ಲಿ ಬ್ರಹ್ಮಚರ್ಯವೂ, ಯೌವನದಲ್ಲಿ ಗೃಹಸ್ಥ ಧರ್ಮವೂ, ವೃದ್ಧಾಪ್ಯದಲ್ಲಿ ಪಾರಮಾರ್ಥಿಕ ಚಿಂತನೆಯೂ ಧರ್ಮವೆಂದೂ, ಅದನ್ನು ಕಲಿಯುವಂತೆ ಮಾಡುವ ಸಾಧನೆ ವಿದ್ಯೆಯೆಂದೂ ತಿಳಿಯಲಾಯಿತು. ಅಂದಿನ ಸಮಾಜದ ನೀತಿಗಳಿಗೆ ಕಟ್ಟು ನಿಟ್ಟಾಗಿ ಒಳಪಟ್ಟಿರುವುದೇ ಧರ್ಮವಾಗಿದ್ದಿತು.

ಹೀಗಾಗಿ ಆರ್ಯರ ಕಾಲದಲ್ಲೂ ವಿದ್ಯೆಯನ್ನು ಒಂದೇ ದೃಷ್ಟಿಕೋನದಿಂದ ನೋಡಲಾಯಿತೇ ಹೊರತು ಅದಕ್ಕೆ ಸರ್ವತೋಮುಖವಾದ ಗುರಿಯನ್ನು ನೀಡಲಾಗಲಿಲ್ಲ. ಕಾರಣಗಳೇನೇ ಇರಲಿ, ಅಂದಿನ ಅವಶ್ಯಕತೆಗಳಿಗನುಗುಣವಾಗಿ ವಿದ್ಯೆಯ ಗುರಿಯನ್ನು ಸೀಮಿತಗೊಳಿಸಿಕೊಳ್ಳಲಾಯಿತು.

ಮುಂದುವರೆದಂತೆಲ್ಲಾ ಸಮಾಜದ ಬೆಳವಣಿಗೆಯೊಂದಿಗೆ ಸಮಸ್ಯೆಗಳೂ ಬೆಳೆದುವು. ಸಮಸ್ಯೆಗಳುಂಟಾದಂತೆಲ್ಲಾ ಪರಿಹಾರ ಕಾರ್ಯಗಳತ್ತಲೂ ದೃಷ್ಟಿಯೋಡಿತು ವಿದ್ಯಾಕ್ಷೇತ್ರ ವಿಸ್ತಾರವಾಗತೊಡಗಿತು.

ಯಾವ ಕಾಲದಲ್ಲೇ ಆಗಲಿ, ವಿದ್ಯೆಯೆಂಬುದೊಂದು ತತ್ತ್ವ, ಇದನ್ನು ಗುರು ಮುಖೇನ ಹೊಂದಬೇಕೆನ್ನುವುದರಲ್ಲಿ ಭಿನ್ನಾಭಿಪ್ರಾಯವಿಲ್ಲ. ವಿದ್ಯೆಯನ್ನು ಇತರರಿಗೆ ತಿಳಿಸಬಲ್ಲ ತತ್ತ್ವ ಅಥವಾ ಸಿದ್ಧಾಂತವೊಂದು ಬೇಕಾಯಿತು. ಅದನ್ನು ತಿಳಿಸಲು ಗುರುವೊಬ್ಬನು ಬೇಕಾಯಿತು. ಈ ತತ್ತ್ವಗಳ ಸಂಕೀರ್ಣದೊಂದಿಗೆ ಮಕ್ಕಳಿಗೆ ಯೋಗ್ಯ ವಿದ್ಯೆಯನ್ನು ಕೊಡುತಿದ್ದೇವೆಂದು ಧೈರ್ಯದಿಂದ ಹೇಳಲಾಗಲಿಲ್ಲ. ಮಕ್ಕಳನ್ನು ಸಹಜ ಸನ್ನಿವೇಶದಿಂದ ಮೇಲಿನ ವಾತಾವರಣಕ್ಕೆ ಕರೆದೊಯ್ಯುವಾಗ ಬರುವ ಸಮಸ್ಯೆಗಳನ್ನು ಕೂಲಂಕುಷವಾಗಿ ವಿಮರ್ಶಿಸಿ ನೋಡಲಿಲ್ಲ.

ಆಂಗ್ಲರ ಕಾಲದಲ್ಲಿ ದಾಸ್ಯ ಭಾವನೆಯೇ ಪ್ರಬಲವಾಗಿದ್ದರೂ ಅದು ವಿದ್ಯಾಕ್ಷೇತ್ರಕ್ಕೆ ಮುಸುಕು ಹಚ್ಚಲಿಲ್ಲ. ವಿದ್ಯೆಗೆ ಬಂಧನವಿರಲಿಲ್ಲ. ಸಾಕಷ್ಟು ಶಾಲೆಗಳಿರಲಿಲ್ಲವಾದರೂ, ಇದ್ದಷ್ಟು ಶಾಲೆಗಳು ಅಚ್ಚುಕಟ್ಟಾಗಿ ಕೆಲಸವನ್ನು ನಿರ್ವಹಿಸುತ್ತಿದ್ದುವು. ಉಪಾಧ್ಯಾಯರಲ್ಲಿ ಆಸಕ್ತಿಯೂ, ಬಾಲಕರಲ್ಲಿ ಶ್ರದ್ಧೆಯೂ, ಕಲಿಯುವ ವಿಷಯದಲ್ಲಿ ಗೌರವವೂ ಹೊಮ್ಮಿದ್ದುವು. ಭಾರತದಲ್ಲಿ ವಿದ್ಯೆಯನ್ನು ಸ್ವೇಚ್ಛೆಯಿಂದ ಕಲಿಯತ್ತಿದ್ದ ಆ ಕಾಲದಲ್ಲಿ ವಿದೇಶಗಳಲ್ಲಿ ಬಲವಂತವಾಗಿ ವಿದ್ಯೆಯನ್ನು ಕಲಿಸಲಾಗುತ್ತಿತ್ತು. ಹಳ್ಳಿ ಹಳ್ಳಿಗಳಲ್ಲೂ ವಿದ್ಯೆಯ ಹಂಬಲ ಭಾರತದಲ್ಲಿ ಕಂಡು ಬಂದಿದ್ದಿತು. ಈಗ ಶಾಲೆಗಳು ಹೆಚ್ಚಾಗಿ, ಮೇಲಧಿಕಾರಿಗಳು ಅನೇಕರಿದ್ದರೂ, ಆ ಶ್ರದ್ಧೆ, ಉತ್ಸಾಹ, ಆಸಕ್ತಿಗಳು ಕಾಣಬರದೇ ಜನರನ್ನು ನಿರುತ್ಸಾಹಗೊಳಿಸಿದೆ. ಪ್ರತಿಯೊಬ್ಬ ಪೌರನ, ವಿದ್ಯೆಯ ಬಗ್ಗೆ ಯೋಚಿಸಿ ನಿರ್ದಿಷ್ಟ ದಾರಿಯನ್ನು ಕಾಣಲೇಬೇಕು.

ರಾಷ್ಟ್ರೀಯತೆಯನ್ನು ಜಾಗೃತಗೊಳಿಸುವುದಕ್ಕಾಗಿ ವಿದ್ಯೆಯ ದಿಕ್ಕನ್ನು ಬದಲಾಯಿಸಿದಾಗ, ಅದರಲ್ಲಿ ಕ್ರಾಂತಿಕಾರಕ ಬದಲಾವಣೆಗಳೇ ಆದುವೆನ್ನಬಹುದು. ವಿದ್ಯೆಯ ಗುರಿ ಅದಾಯಿತು, ಮನೋವಿಕಾಸ ವಿಜ್ಞಾನದರಿವು, ಉದ್ಯೋಗದ ಒಲವು ಇವೇ ವಿದ್ಯೆಯ ಗುರಿಯಾದುವು. ಸ್ವಾತಂತ್ರ್ಯ ಪ್ರಾಪ್ತಿಯಾಗುವವರೆಗೂ ಇದೇ ಪರಿಸ್ಥಿತಿ ಮುಂದುವರೆಯಿತು. ಆಂತರಿಕವಾಗಿ ಒಂದು ಪ್ರವಾಹವು ಪ್ರವಹಿಸುತ್ತಲೇ ಇದ್ದಿತು.

ಪೂಜ್ಯ ಬಾಪೂಜಿಯವರು, ಡಾ|| ಜಾಕೀರ್ ಹುಸೇನ್‌ರವರನ್ನು ಮುಖ್ಯರನ್ನಾಗಿಸಿ ಮೂಲ ಶಿಕ್ಷಣದ ಬಗ್ಗೆ ವಿಚಾರಗೋಷ್ಠಿಯನ್ನು ನಡೆಸಿದಾಗ, ಕಲಿಕೆಯೊಡನೆ ಉದ್ಯೋಗವೆನ್ನುವ ಪದ್ಧತಿ ಮೊದಲಾಯಿತು. ಭಾರತವು ಮುಂದುವರೆಯಬೇಕಾದರೆ ಪ್ರತಿಯೊಬ್ಬನು ಉದ್ಯೋಗ ಶೀಲನಾಗಿರಬೇಕು; ನಮಗೆ ಬೇಕಾದ ವಿದ್ಯೆ ಗುಮಾಸ್ತರನ್ನು ಮಾತ್ರವೇ ತಯಾರಿಸುವ ಬರಡು ವಿದ್ಯೆಯಲ್ಲ, ಕಲಿತ ಕೂಡಲೇ ಹೆಚ್ಚಿನ ಕುಶಲತೆಯಿಂದ ಉತ್ಪನ್ನ ಮಾಡುವ ಕಾರ್ಯಸಾಧಕರು ಬೇಕು ಈ ಭಾವನೆಗಳು ಪ್ರಬಲವಾಗಿ ಬೆಳೆದು ಬಂದುವು.

ಸ್ವಾತಂತ್ರ್ಯೋತ್ತರ ಪರಿಸ್ಥಿತಿಯು ತೀರ ಶೋಚನೀಯವಾಗಿರುವುದು ವಿಷಾದಕರ. ಸಂಶೋಧನೆಗಳು ನಿರಂತರವಾಗಿ ಸಾಗುತ್ತಿವೆ. ಸುಧಾರಣೆಗಳ ಮಹಾಪೂರವೇ ತೊಡಗಿದೆ. ಇಂದು ಎಲ್ಲ ಪ್ರಯೋಗಗಳಿಗೂ ಪ್ರಪ್ರಥಮವಾಗಿ ಬಲಿಯಾಗುವುದೆಂದರೆ ವಿದ್ಯಾಭ್ಯಾಸ "ವಿದ್ಯೆ, ಯೆಂಬುದು "ಜ್ಞಾನ" ಎನ್ನಿಸಿಕೊಂಡಿದ್ದ ಕಾಲ ಕಳೆಯಿತು; ಈಗ 'ವಿಜ್ಞಾನ' ಎನ್ನಿಸಿಕೊಳ್ಳುತ್ತಿದ್ಯೆ. ಕಾಡು ಜನರಾಗಿ ಉಳಿದಿದ್ದವರು ಪ್ರಜಾಪ್ರಭು

ಯೋಗ್ಯನನ್ನಾಗಿ ಮಾಡುತ್ತದೆಯೋ ಅದೇ ಪೂರ್ಣ ವಿದ್ಯೆ."

"ಜೀವನೋಪಾಯಕ್ಕೆ ಅಗತ್ಯವಾದ ಸುಖ ಸಾಧನೆಯನ್ನು ಕಲ್ಪಿಸಿಕೊಡುವುದೇ ವಿದ್ಯೆ,"

"ಮಾನವನನ್ನು ಶೀಲವಂತನನ್ನಾಗಿ ಮಾಡುವುದು."

—ಹೀಗೆ ಇನ್ನೂ ಎಷ್ಟೋ ಅಭಿಪ್ರಾಯಗಳನ್ನು ಸಂಗ್ರಹಿಸಬಹುದು. ಆದರೆ, ಇವುಗಳಲ್ಲಿ ಯಾವುದೇ ಒಂದು ಮಾತ್ರ ಗುರಿ ಎಂದಿಟ್ಟುಕೊಂಡು ಉಳಿದುದನ್ನು ಬಿಟ್ಟುಬಿಡುವುದು, ತಲೆಯನ್ನಿಟ್ಟುಕೊಂಡು, ಉಳಿದ ಅಂಗಗಳನ್ನು ಬಿಟ್ಟ ದೇಹದಂತಾದೀತು. ಇವುಗಳಲ್ಲಿ ಯಾವುದೊಂದು ಮಾತ್ರವೇ ಸರಿ, ಉಳಿದುವು ಸರಿಯಲ್ಲ ಎಂದಲ್ಲ. ಇವೆಲ್ಲವೂ ಒಂದಕ್ಕೊಂದು ಪೂರಕಗಳೆಂದು ತಿಳಿಯಬೇಕು. ಹಲವು ನದಿಗಳು ಸೇರಿ ಸಾಗರವಾದೀತು, ಅಂತೆಯೇ ಹಲವು ಗುರಿಗಳು ಸೇರಿ ವಿದ್ಯೆ ಸಾರ್ಥಕವಾದೀತು–ಎಂಬ ಮಾತಂತೂ ಪೂರ್ಣ ಸತ್ಯ. ಅವಿದ್ಯಾವಂತನ ಕಾರ್ಯ ಮತ್ತು ನಡವಳಿಕೆಗಳಿಗೂ ವಿದ್ಯಾವಂತನ ಕಾರ್ಯ ಮತ್ತು ನಡವಳಿಕೆಗಳಿಗೂ ಇರುವ ವ್ಯತ್ಯಾಸವನ್ನು ಸುಲಭವಾಗಿ ಗುರುತಿಸಬಹುದು. ಅವಿದ್ಯಾವಂತನಲ್ಲಿ ಭಯ, ಸಂದೇಹ, ಜಿಗುಪ್ಸೆಗಳಿರುವುದನ್ನೂ, ವಿದ್ಯಾವಂತರಲ್ಲಿ, ಧೈರ್ಯ, ದೃಢತೆ ಮತ್ತು ಉತ್ಸಾಹಗಳನ್ನೂ ಕಾಣಬಹುದು

ಇಂದಿನವರೆಗೆ ವಿದ್ಯೆಯು ಬೆಳೆದು ಬಂದ ಹಂತಗಳನ್ನು ವಿಮರ್ಶಿಸಿ ನೋಡಿದಾಗ, ಆಶ್ಚರ್ಯಕರ ಬದಲಾವಣೆಗಳನ್ನು ಕಾಣಬಹುದು ಆತ್ಮಾನುಸಂಧಾನಕ್ಕಾಗಿಯೇ ವಿದ್ಯೆಯನ್ನು ಗಳಿಸಿಕೊಂಡು, ಜೀವನದ ಗುರಿಯನ್ನು ತಲಪುವ ಕಾಲವೊಂದಿತ್ತು. ಆಗ ಯಾರಾದರೊಬ್ಬ ಸಿದ್ಧ ಪುರುಷ ಅಥವಾ ಋಷಿಯ ಮೂಲಕ ಪ್ರಣೀತವಾದದ್ದೇ ವಿದ್ಯೆಯಾಗಿತ್ತು. ಅದು ಎಲ್ಲರಿಗೂ ಎಟಕುವಂತಿರಲಿಲ್ಲ. ಜನ ಸಂಖ್ಯೆ ವೃದ್ಧಿಯಾದಂತೆಲ್ಲಾ ನಾಗರಿಕತೆಯೆಂಬುದು ಬೆಳೆದಂತೆಲ್ಲಾ ವಿದ್ಯಾಕ್ಷೇತ್ರ ವಿಶಾಲವಾಯಿತು. ಹೀಗಾಗಿ ವಿದ್ಯೆ–ಗುರು–ಶಿಷ್ಯ–ಇವುಗಳಿಗೆ ಹಿಂದೆ ಇದ್ದ ಭೇದವು ಇಂದು ಮಾಯವಾಗಿ ಮೂರೂ ಒಂದಾಗಿದೆ.

ಮೊದಲಲ್ಲಿ ತಪೋವನಗಳ ಕಾಲದ ವಿದ್ಯೆಯನ್ನು ತೆಗೆದುಕೊಳ್ಳೋಣ. ಆಗ ವಿದ್ಯೆಯ ಅರ್ಥ ಮತ್ತು ವ್ಯಾಪ್ತಿ ಐಹಿಕಕ್ಕೇ ಸೀಮಿತವಾಗಿರಲಿಲ್ಲ. ಐಹಿಕ ಸುಖ ಭೋಗಗಳು ಗೌಣವಾಗಿದ್ದುವು. ತಪಸ್ಸಿನಿಂದ ಜ್ಞಾನಾರ್ಜನೆ; ಜ್ಞಾನದಿಂದ ಮೋಕ್ಷ ಸಾಧನೆ ಅಥವಾ ಆತ್ಮ ಸಾಧನೆಯೆಂಬುದು ಆಗಿನ ಗುರಿ. ಇದನ್ನು ಧಾರೆಯೆರೆಯುವ ಗುರು, ಸಿದ್ಧಿ ಪಡೆದಿರಬೇಕಾಗಿದ್ದಿತು. ಬಳಿಕ ತಾನು ಮೆಚ್ಚಿದ ಶಿಷ್ಯರುಗಳಿಗೆ ಮಾತ್ರವೇ ವಿದ್ಯೆಯನ್ನು ಅನುಗ್ರಹಿಸುತ್ತಿದ್ದರು. ಹಾಗೆ ಗುರುವಿನ ಅನುಗ್ರಹವನ್ನು ಪಡೆಯಲು ಗುರುವಿನ ಗುಲಾಮನಾಗಿರಬೇಕಾಗಿದ್ದಿತು. ದೇಹದ ಮೋಹವಳಿಯುವವರೆಗೂ ಗುರುವಿನ ಅನುಗ್ರಹವಾಗುತ್ತಿರಲಿಲ್ಲ. ಇದಕ್ಕಾಗಿ, ಸೌದೆ ಒಡೆಯುವುದು, ಮನೆಗೆಲಸಗಳನ್ನು ಮಾಡುವುದು ಗುರುವಿನ ಮನಸ್ಸು ಸಾಕೆನ್ನುವವರೆಗೂ ಉಪವಾಸವಿರುವುದು, ಎತ್ತುಗಳಿಲ್ಲದ ಬಂಡಿಯಲ್ಲಿ, ಕಾಡಿನಿಂದ ಸೌದೆಕಡಿದು ತುಂಬಿಕೊಂಡು ತರುವುದು, ಗದ್ದೆಗಳಿಗೆ ನುಗ್ಗುವ ಪ್ರವಾಹವನ್ನು ದೇಹದಿಂದ ತಡೆದು ನಿಲ್ಲಿಸುವುದು, ಇವೇ ಮುಂತಾದ ಅತ್ಯಂತ ಕಠಿಣ ದೈಹಿಕ ಪರಿಶ್ರಮಗಳಲ್ಲಿ ಉತ್ತೀರ್ಣನಾಗಬೇಕಾಗಿದ್ದಿತು. ನಂತರ ಗುರುವು ಪ್ರಸನ್ನನಾಗಿ ಒಮ್ಮೆಗೇ ಎಲ್ಲಾ ವಿದ್ಯೆಗಳನ್ನೂ ಅನುಗ್ರಹಿಸುತ್ತಿದ್ದನು. 'ದೇಹ ನಶ್ವರ ಆತ್ಮವೊಂದೇ ಶಾಶ್ವತ', ಎಂಬ ಮಂತ್ರ ಅನವರತ ಮೊಳಗುತ್ತಿತ್ತು. ಇದರಿಂದ ಗುರುವಿನ ವಲಯ ಸೀಮಿತವಾಗಿದ್ದುದಲ್ಲದೆ, ಬೇಕೆಂದವರೆಲ್ಲರೂ ಶಿಷ್ಯರಾಗಲಾಗದ ಕೊರತೆ ಎದ್ದು ಕಾಣುತ್ತಿದ್ದಿತ್ತು ಪ್ರಾಪಂಚಿಕ ದೃಷ್ಟಿಯಿಂದ ನೋಡಿದಾಗ, ಇದು ಸಂಕೀರ್ಣ ಮಾರ್ಗವೆನ್ನಿಸುವುದು ಸಹಜ.

ಆರ್ಯರ ಕಾಲಕ್ಕೆ ಬಂದಾಗ ವಿದ್ಯೆಯ ರೂಪುರೇಷೆಗಳು ಭಿನ್ನ ಮಾರ್ಗದಲ್ಲಿ ಪ್ರವಹಿಸಿದುದನ್ನು ಕಾಣುವೆವು. ಧಾರ್ಮಿಕ ಭಾವನೆಗಳೇ ಅತಿ ಮುಖ್ಯವಾದ ಕಾಲವಾದ್ದರಿಂದ ವಿದ್ಯೆಗೆ ಧರ್ಮವೇ ಪ್ರಾಧಾನ್ಯವಾಯಿತು. ಜೀವನದಲ್ಲಿ ಧರ್ಮನಿಷ್ಠನಾಗಿ ನಡೆಸುವ ವಿದ್ಯೆಯೇ, ವಿದ್ಯೆ ಎಂದು ವಿಂಗಡಿಸಿದರು. ಬಾಲ್ಯದಲ್ಲಿ ಬ್ರಹ್ಮಚರ್ಯವೂ, ಯೌವನದಲ್ಲಿ ಗೃಹಸ್ಥ ಧರ್ಮವೂ, ವೃದ್ಧಾಪ್ಯದಲ್ಲಿ ಪಾರಮಾರ್ಥಿಕ ಚಿಂತನೆಯೂ ಧರ್ಮವೆಂದೂ, ಅದನ್ನು ಕಲಿಯುವಂತೆ ಮಾಡುವ ಸಾಧನೆ ವಿದ್ಯೆಯೆಂದೂ ತಿಳಿಯಲಾಯಿತು. ಅಂದಿನ ಸಮಾಜದ ನೀತಿಗಳಿಗೆ ಕಟ್ಟುನಿಟ್ಟಾಗಿ ಒಳಪಟ್ಟಿರುವುದೇ ಧರ್ಮವಾಗಿದ್ದಿತು.

ಹೀಗಾಗಿ ಆರ್ಯರ ಕಾಲದಲ್ಲೂ ವಿದ್ಯೆಯನ್ನು ಒಂದೇ ದೃಷ್ಟಿಕೋನದಿಂದ ನೋಡಲಾಯಿತೇ ಹೊರತು ಅದಕ್ಕೆ ಸರ್ವತೋಮುಖವಾದ ಗುರಿಯನ್ನು ನೀಡಲಾಗಲಿಲ್ಲ. ಕಾರಣಗಳೇನೇ ಇರಲಿ, ಅಂದಿನ ಅವಶ್ಯಕತೆಗಳಿಗನುಗುಣವಾಗಿ ವಿದ್ಯೆಯ ಗುರಿಯನ್ನು ಸೀಮಿತಗೊಳಿಸಿಕೊಳ್ಳಲಾಯಿತು.

ಮುಂದುವರೆದಂತೆಲ್ಲಾ ಸಮಾಜದ ಬೆಳವಣಿಗೆಯೊಂದಿಗೆ ಸಮಸ್ಯೆಗಳೂ ಬೆಳೆದುವು. ಸಮಸ್ಯೆಗಳುಂಟಾದಂತೆಲ್ಲಾ ಪರಿಹಾರ ಕಾರ್ಯಗಳತ್ತಲೂ ದೃಷ್ಟಿಯೋಡಿತು ವಿದ್ಯಾಕ್ಷೇತ್ರ ವಿಸ್ತಾರವಾಗತೊಡಗಿತು.

ಯಾವ ಕಾಲದಲ್ಲೇ ಆಗಲಿ, ವಿದ್ಯೆಯೆಂಬುದೊಂದು ತತ್ತ್ವ, ಇದನ್ನು ಗುರು ಮುಖೇನ ಹೊಂದಬೇಕೆನ್ನುವುದರಲ್ಲಿ ಭಿನ್ನಾಭಿಪ್ರಾಯವಿಲ್ಲ. ವಿದ್ಯೆಯನ್ನು ಇತರರಿಗೆ ತಿಳಿಸಬಲ್ಲ ತತ್ತ್ವ ಅಥವಾ ಸಿದ್ಧಾಂತವೊಂದು ಬೇಕಾಯಿತು. ಅದನ್ನು ತಿಳಿಸಲು ಗುರುವೊಬ್ಬನು ಬೇಕಾಯಿತು. ಈ ತತ್ತ್ವಗಳ ಸಂಕೀರ್ಣದೊಂದಿಗೆ ಮಕ್ಕಳಿಗೆ ಯೋಗ್ಯ ವಿದ್ಯೆಯನ್ನು ಕೊಡುತಿದ್ದೇವೆಂದು ಧೈರ್ಯದಿಂದ ಹೇಳಲಾಗಲಿಲ್ಲ. ಮಕ್ಕಳನ್ನು ಸಹಜ ಸನ್ನಿವೇಶದಿಂದ ಮೇಲಿನ ವಾತಾವರಣಕ್ಕೆ ಕರೆದೊಯ್ಯುವಾಗ ಬರುವ ಸಮಸ್ಯೆಗಳನ್ನು ಕೂಲಂಕುಷವಾಗಿ ವಿಮರ್ಶಿಸಿ ನೋಡಲಿಲ್ಲ.

ಆಂಗ್ಲರ ಕಾಲದಲ್ಲಿ ದಾಸ್ಯ ಭಾವನೆಯೇ ಪ್ರಬಲವಾಗಿದ್ದರೂ ಅದು ವಿದ್ಯಾಕ್ಷೇತ್ರಕ್ಕೆ ಮುಸುಕು ಹಚ್ಚಲಿಲ್ಲ. ವಿದ್ಯೆಗೆ ಬಂಧನವಿರಲಿಲ್ಲ. ಸಾಕಷ್ಟು ಶಾಲೆಗಳಿರಲಿಲ್ಲವಾದರೂ, ಇದ್ದಷ್ಟು ಶಾಲೆಗಳು ಅಚ್ಚುಕಟ್ಟಾಗಿ ಕೆಲಸವನ್ನು ನಿರ್ವಹಿಸುತ್ತಿದ್ದುವು. ಉಪಾಧ್ಯಾಯರಲ್ಲಿ ಆಸಕ್ತಿಯೂ, ಬಾಲಕರಲ್ಲಿ ಶ್ರದ್ಧೆಯೂ, ಕಲಿಯುವ ವಿಷಯದಲ್ಲಿ ಗೌರವವೂ ಹೊಮ್ಮಿದ್ದುವು. ಭಾರತದಲ್ಲಿ ವಿದ್ಯೆಯನ್ನು ಸ್ವೇಚ್ಛೆಯಿಂದ ಕಲಿಯುತ್ತಿದ್ದ ಆ ಕಾಲದಲ್ಲಿ ವಿದೇಶಗಳಲ್ಲಿ ಬಲವಂತವಾಗಿ ವಿದ್ಯೆಯನ್ನು ಕಲಿಸಲಾಗುತ್ತಿತ್ತು. ಹಳ್ಳಿ ಹಳ್ಳಿಗಳಲ್ಲೂ ವಿದ್ಯೆಯ ಹಂಬಲ ಭಾರತದಲ್ಲಿ ಕಂಡು ಬಂದಿದ್ದಿತು. ಈಗ ಶಾಲೆಗಳು ಹೆಚ್ಚಾಗಿ, ಮೇಲಧಿಕಾರಿಗಳು ಅನೇಕರಿದ್ದರೂ, ಆ ಶ್ರದ್ಧೆ, ಉತ್ಸಾಹ, ಆಸಕ್ತಿಗಳು ಕಾಣಬರದೇ ಜನರನ್ನು ನಿರುತ್ಸಾಹಗೊಳಿಸಿದೆ. ಪ್ರತಿಯೊಬ್ಬ ಪೌರನ, ವಿದ್ಯೆಯ ಬಗ್ಗೆ ಯೋಚಿಸಿ ನಿರ್ದಿಷ್ಟ ದಾರಿಯನ್ನು ಕಾಣಲೇಬೇಕು.

ರಾಷ್ಟ್ರೀಯತೆಯನ್ನು ಜಾಗೃತಗೊಳಿಸುವುದಕ್ಕಾಗಿ ವಿದ್ಯೆಯ ದಿಕ್ಕನ್ನು ಬದಲಾಯಿಸಿದಾಗ, ಅದರಲ್ಲಿ ಕ್ರಾಂತಿಕಾರಕ ಬದಲಾವಣೆಗಳೇ ಆದುವೆನ್ನಬಹುದು. ವಿದ್ಯೆಯ ಗುರಿ ಅದಾಯಿತು, ಮನೋವಿಕಾಸ ವಿಜ್ಞಾನದರಿವು, ಉದ್ಯೋಗದ ಒಲವು ಇವೇ ವಿದ್ಯೆಯ ಗುರಿಯಾದುವು. ಸ್ವಾತಂತ್ರ್ಯ ಪ್ರಾಪ್ತಿಯಾಗುವವರೆಗೂ ಇದೇ ಪರಿಸ್ಥಿತಿ ಮುಂದುವರೆಯಿತು. ಆಂತರಿಕವಾಗಿ ಒಂದು ಪ್ರವಾಹವು ಪ್ರವಹಿಸುತ್ತಲೇ ಇದ್ದಿತು.

ಪೂಜ್ಯ ಬಾಪೂಜಿಯವರು, ಡಾ|| ಜಾಕೀರ್ ಹುಸೇನ್‌ರವರನ್ನು ಮುಖ್ಯರನ್ನಾಗಿಸಿ ಮೂಲ ಶಿಕ್ಷಣದ ಬಗ್ಗೆ ವಿಚಾರಗೋಷ್ಠಿಯನ್ನು ನಡೆಸಿದಾಗ, ಕಲಿಕೆಯೊಡನೆ ಉದ್ಯೋಗವೆನ್ನುವ ಪದ್ಧತಿ ಮೊದಲಾಯಿತು. ಭಾರತವು ಮುಂದುವರೆಯಬೇಕಾದರೆ ಪ್ರತಿಯೊಬ್ಬನು ಉದ್ಯೋಗ ಶೀಲನಾಗಿರಬೇಕು; ನಮಗೆ ಬೇಕಾದ ವಿದ್ಯೆ ಗುಮಾಸ್ತರನ್ನು ಮಾತ್ರವೇ ತಯಾರಿಸುವ ಬರಡು ವಿದ್ಯೆಯಲ್ಲ, ಕಲಿತ ಕೂಡಲೇ ಹೆಚ್ಚಿನ ಕುಶಲತೆಯಿಂದ ಉತ್ಪನ್ನ ಮಾಡುವ ಕಾರ್ಯಸಾಧಕರು ಬೇಕು ಈ ಭಾವನೆಗಳು ಪ್ರಬಲವಾಗಿ ಬೆಳೆದು ಬಂದುವು.

ಸ್ವಾತಂತ್ರ್ಯೋತ್ತರ ಪರಿಸ್ಥಿತಿಯು ತೀರ ಶೋಚನೀಯವಾಗಿರುವುದು ವಿಷಾದಕರ. ಸಂಶೋಧನೆಗಳು ನಿರಂತರವಾಗಿ ಸಾಗುತ್ತಿವೆ. ಸುಧಾರಣೆಗಳ ಮಹಾಪೂರವೇ ತೊಡಗಿದೆ. ಇಂದು ಎಲ್ಲ ಪ್ರಯೋಗಗಳಿಗೂ ಪ್ರಪ್ರಥಮವಾಗಿ ಬಲಿಯಾಗುವುದೆಂದರೆ ವಿದ್ಯಾಭ್ಯಾಸ "ವಿದ್ಯೆ, ಯೆಂಬುದು "ಜ್ಞಾನ" ಎನ್ನಿಸಿಕೊಂಡಿದ್ದ ಕಾಲ ಕಳೆಯಿತು; ಈಗ 'ವಿಜ್ಞಾನ' ಎನ್ನಿಸಿಕೊಳ್ಳುತ್ತಿದ್ದೆ. ಕಾಡು ಜನರಾಗಿ ಉಳಿದಿದ್ದವರು ಪ್ರಜಾಪ್ರಭು

ತ್ವದ ಪ್ರಭುಗಳಾಗಬಲ್ಲ ಅರ್ಹತೆ ಪಡೆದಿದ್ದಾರೆ. 'ಗುರು' ವೇ ಕೇಂದ್ರವಾಗಿದ್ದ ವಿದ್ಯೆಯನ್ನು, 'ವಸ್ತುನಿಷ್ಠ" ವನ್ನಾಗಿಸಲಾಯಿತು. ಏನು ಕಲಿಯಬೇಕೆಂಬ ವಸ್ತುವಿನಮೇಲೆ ಗಮನ ಕೇಂದ್ರೀಕರಿಸುವ ಕಲಿಕೆ ಇತ್ತೀಚಿನ ಗುರಿಯಾಗಿದ್ದಿತು. ಯಾವ ತರಗತಿಗೆ ಯಾವ ವಿಷಯಗಳನ್ನು ಎಷ್ಟು ಕಲಿಸಬೇಕು ? ಆ ವಿಷಯಗಳನ್ನು ಬೋಧಕವಾಗುವಂತೆ ಮಾಡುವ ವಿಧಾನ ಯಾವುದು? ಎಂಬ ಬಗ್ಗೆ ಸಂಶೋಧನೆ ನಡೆಸಿ ಕಾರ್ಯರೂಪಕ್ಕೂ ತರಲಾಯಿತು. ಆದರೆ ಅದರಿಂದಲೂ 'ಸರ್ವತೋಮುಖ ವಿಕಾಸ' ಸಾಧ್ಯವಾಗಲಿಲ್ಲ. ಏಕೆಂದರೆ, ಕಲಿಯುವ ವಿಷಯವೇ ಮುಖ್ಯವೂ, ಅದನು ಕಲಿಸುವ ಗುರುವು ಎರಡನೆ! ಮುಖ್ಯ ಕೇಂದ್ರವೂ ಆಗಿ ಮಕ್ಕಳ ಸ್ಥಾನವನ್ನು ತೀರ ಗೌಣವಾಗಿ ಕಾಣಲಾಯಿತು. 'ವಸ್ತುನಿಷ್ಠ' ಪದ್ಧತಿಯಲ್ಲಿ ಕೊರತೆಗಳು ಹೆಚ್ಚಾದಾಗ ಮತ್ತೆ ಸಂಶೋಧನೆ ನಡೆಸಲಾಯಿತು.

ಮೇಲೆ ಹೇಳಿದ ಕಾಲಗಳಲ್ಲಿ ವಿದ್ಯೆಯಲ್ಲಿ ಏನೇ ಪರಿವರ್ತನೆಗಳು ಕಂಡುಬಂದರೂ ಉಪಾಧ್ಯಾಯನ ವ್ಯಕ್ತಿತ್ವವು ಒಂದೇ ರೀತಿಯಾಗಿ ಉಳಿಯಿತೆನ್ನಬಹುದು. ಧಾರ್ಮಿಕ ಕಟ್ಟುಪಾಡಿಗೆ ಬಂಧಿತನಾಗಿ ಹಿಂದಿನಿಂದ ರೂಢಿಸಿಕೊಂಡು ಬಂದ ಹಿರಿಯ ಸ್ಥಾನವನ್ನು ಉಳಿಸಿಕೊಳ್ಳಬೇಕೆನ್ನುವ ಅಂಧ ವಿಶ್ವಾಸದಲ್ಲಿ, ಸುಧಾರಣೆಯ ಬಹುಪಾಲನ್ನು ಕಾರ್ಯರೂಪಕ್ಕೆ ತರುವ ಇಳಿಸುವ ಶ್ರಮವನ್ನು ತೆಗೆದುಕೊಳ್ಳಲಿಲ್ಲ. ಬಾಲಕರಲ್ಲಿ ಭಯ, ತಂದೆತಾಯಿಗಳಿಗೆ—ತಮ್ಮ ಮಕ್ಕಳ ಜವಾಬಾರಿಯನ್ನು ಹೊರುವ ವ್ಯಕ್ತಿ—ಈ ಭಾವನೆಗಳೇ ಪ್ರಬಲವಾಗಿ, ಆ ಮಟ್ಟದಿಂದ ತನ್ನನ್ನು ಕೆಳಗಿಳಿಸಿಕೊಳ್ಳಲು ಬಯಸಲಾರದಾದ. ಹೀಗಿರುವಲ್ಲಿ ಮನೋವೈಜ್ಞಾನಿಕರು, ಮಕ್ಕಳ ಮನಸ್ಸನ್ನು ಒಲಿಸಿಕೊಂಡು, ಅವರ ಒಲವಿಗೆ ಅನುಸಾರವಾಗಿ ವಿದ್ಯಾಪದ್ಧತಿ ಹೇಗೆ ರೂಪುಗೊಳ್ಳಬೇಕೆಂಬುದನ್ನು ಹೊರಗೆಡವಿದರು. ಇದರಿಂದ ಮಕ್ಕಳಿಗೂ ಮಕ್ಕಳ ಮನೋವಿಕಾಸಕ್ಕೂ ಹೆದ್ದಾರಿ ತೆರೆದಿಟ್ಟಂತಾಯಿತು.

ಈ ವಿಧಾನ ಜಾರಿಗೆ ಬಂದ ಕೂಡಲೇ ಉಪಾಧ್ಯಾಯರಲ್ಲಿ ತ್ರಿವರ್ಗ ಭಾವನೆಗಳುಂಟಾದುವು: ಹಳೆಯ ಪದ್ಧತಿಯಲ್ಲಿ ಅನೇಕ ವರ್ಷ ದುಡಿದಿದ್ದು, ಹೊಸದೆಲ್ಲವೂ ಎಳಸು, ಎಂದು ತಿಳಿದಿದ್ದ ವಯಸ್ಸಾದ ಉಪಾಧ್ಯಾಯರ ವರ್ಗ; ತೀರ ಇತ್ತೀಚಿನ ಸಂಶೋಧನೆಗಳನ್ನು ಅತಿ ಉತ್ಸಾಹದಿಂದ ತಂದು, ಎಡವಿ, ಮುಗ್ಗರಿಸಿ, ಸೂಕ್ತ ಸನ್ನಿವೇಶಗಳೊಂದಿಗೆ, ಕೊರಗುತ್ತಿರುವ ಆಧುನಿಕ ಉಪಾಧ್ಯಾಯ ವರ್ಗ, ಇವೆರಡನ್ನೂ ಸಮ್ಮಿಶ್ರ ಮಾಡಿಕೊಂಡು ಹೇಗೋ ಹಾಗೆ ಪ್ರಯೋಗ ಮಾಡುತ್ತಾ, ತನ್ನ ಕಾರ್ಯದಲ್ಲಿ ತಾನೇ ಅಸಮಾಧಾನ ಹೊಂದುವ ಮೂರನೆ ವರ್ಗ.

ವಿದ್ಯಾಭ್ಯಾಸದ ಮಟ್ಟ ಇಳಿಯುತ್ತಿದೆ ಎಂಬ ಅರಿವು ತೀರ ಈಚಿನದು. ಇದರ ಬಗ್ಗೆ ತಜ್ಞರು ಆಲೋಚನೆ ಮಾಡತೊಡಗಿದರು. ವಿಶ್ವವಿದ್ಯಾನಿಲಯ ಮತ್ತು ಪ್ರೌಢ ದರ್ಜೆಗಳಲ್ಲಿ ಈ ವಿಷಯ ಸಮಸ್ಯೆಗೆ ಪರಿಹಾರವನ್ನು ಹುಡುಕತೊಡಗಿದರು. ಆದರೆ ಮೂಲಭೂತವಾಗಿ ದೃಷ್ಟಿ ಹರಿಸಬೇಕಾಗಿದ್ದುದು ಪ್ರಾರಂಭಿಕ ವಿದ್ಯಾಭ್ಯಾಸದಲ್ಲಿರುವ ನ್ಯೂನತೆಗಳ ಬಗ್ಗೆ – ಇದಾಗದ ಹೊರತು, ವಸ್ತುವಿಗೇ ಅಂಟಿಕೊಂಡಿರುವ ಉಪಾಧ್ಯಾಯರನ್ನು ಶ್ರದ್ಧಾಯುತರನ್ನಾಗಿ ಮಾಡುವುದು ಅಸಾಧ್ಯವೇ ಸರಿ.

"ಶಿಶು"ವಿಗೇ ಪ್ರಾಧಾನ್ಯ ಕೊಡುವ ಶಿಶು ಕೇಂದ್ರ ವಿದ್ಯಾಭ್ಯಾಸ ಪದ್ಧತಿಯು ಆರಂಭವಾಯಿತು. ಇದರ ಬಗ್ಗೆ ಸೆಮಿನಾರುಗಳು ನಡೆದುವು. ಉತ್ಸಾಹಿಗಳಾದ ಉಪಾಧ್ಯಾಯರು ಶ್ರದ್ಧೆಯಿಂದ ಕಾರ್ಯೋನ್ಮುಖರಾದರು. ಶಿಶುವಿನ ಮನಸ್ಸನ್ನು ಪರಿಶೀಲಿಸಿ ನೋಡುವುದು, ಭಿನ್ನಭಿನ್ನ ವಾತಾವರಣಗಳಲ್ಲಿ ಮಕ್ಕಳ ಮನಸ್ಸಿನ ಗತಿ ಹೇಗಿದೆಯೆಂಬುದನ್ನು ನಿರೀಕ್ಷಣೆ ಮಾಡುವುದು. ಯಾವ ವಿಷಯದ ಬಗ್ಗೆ ಹೆಚ್ಚು ಆಸಕ್ತಿಯಿದೆ, ಎಂದು ಮಕ್ಕಳ ನಡವಳಿಕೆಗಳಿಂದಲೇ ಗುರುತಿಸುವುದು. ನಂತರ ಅದನ್ನು ಜ್ಞಾನ ಮಾರ್ಗಕ್ಕೆ ಹರಿಯಬಿಡುವುದು. ಇದರಿಂದ ಮಗುವಿನ ಮನೋ ವಿಕಾಸವೂ ಆಯಿತು; ಒಂದಿಗೇ ಬುದ್ಧಿ ವಿಕಾಸವೂ ಆಯಿತು. ಹೀಗೆ ಮಾಡಲು ಉಪಾಧ್ಯಾಯನಾದವನು ಅತಿ ತಾಳ್ಮೆಯುಳ್ಳವನಾಗಿರಬೇಕು. ಎಲ್ಲಾ ಉಪಾಧ್ಯಾಯರುಗಳೂ ಒಂದೇ ಕ್ರಮ–ಮಾರ್ಗವನ್ನು ಅನುಸರಿಸಬೇಕು. ಆದರೆ, ಎಲ್ಲರಿಗೂ ಒಂದೇ ರೀತಿಯ ಮನೋಭಾವನೆ ಇದೆಯೆಂದು ಭಾವನೆ ಮಾಡುವುದು ತಪ್ಪು ಕಲ್ಪನೆಯಾಗುವುದು. ಮೇಲಿನ ತತ್ತ್ವವನ್ನು ಆಚರಣೆಯಲ್ಲಿ ತರಬೇಕಾದರೆ ಪಠ್ಯ ಪುಸ್ತಕಗಳನ್ನು ನಿಗದಿ ಮಾಡುವುದು ಸಾಧ್ಯವೆ? ಒಂದು ಪ್ರದೇಶದ ಮಕ್ಕಳು ಬೇರೊಂದು ಪ್ರದೇಶದ ಮಕ್ಕಳಂತೆಯೇ ಮನೋಭಾವ ಹೊಂದಿರುವರೆ? ಪಟ್ಟಣದ ಮಕ್ಕಳು ಓದುವ ಪುಸ್ತಕಗಳನ್ನೇ ಹಳ್ಳಿಯ ಮಕ್ಕಳಿಗೂ ಅಭ್ಯಾಸ ಮಾಡಿಸಿದರೆ, ಮತ್ತೆ 'ವಸ್ತುನಿಷ್ಠ' ರಾದೆವು. ಮಕ್ಕಳಿಗೆ ಚಟುವಟಿಕೆಯ ವಾತಾವರಣವನ್ನು ತಂದು ಕೊಡಲು ಸಾಕಷ್ಟು ಪಾಠೋಪಕರಣ, ಪೀಠೋಪಕರಣಗಳ ಅಭಾವ, ಮಕ್ಕಳ ಸಂಖ್ಯಾ ಪ್ರಮಾಣಕ್ಕೆ ತಕ್ಕಷ್ಟು ಉಪಾಧ್ಯಾಯರಿಲ್ಲದಿರುವಿಕೆ, ಆಡಳಿತದ ಸಮಸ್ಯೆಗಳಲ್ಲಿ ಮುಳುಗಿದ ಅಧ್ಯಾಪಕನ ಹತಾಶಭಾವನೆಯೂ ಸೇರಿ ಈ ಕಾರ್ಯದಲ್ಲಿ ಏಳಿಗೆಯಾಗಿರುವುದಿಲ್ಲ. ಕೆಲವು ಶಾಲೆಗಳಲ್ಲಿ ಮಕ್ಕಳು ನೃತ್ಯ-ನಾಟಕದಲ್ಲಿ ಪರಿಣತರಾಗಿದ್ದರೆ, ಅದೇ ವಯಸ್ಸಿನ ಬೇರೆ ಶಾಲೆಯ ಮಕ್ಕಳು ಅಕ್ಷರಾಭ್ಯಾಸದಲ್ಲೂ ಇರುವುದಿಲ್ಲ. ಇದನ್ನು ಸರಿಪಡಿಸುವುದೆಂತು? ಅಥವಾ ಹೀಗೆಯೇ ಮುಂದುವರಿದರೆ ಅದರ ಗೊತ್ತುಗುರಿಯೇನು? ತನಿಖಾಧಿಕಾರಿಗಳು ಪಠ್ಯ ಪುಸ್ತಕದ ವಿಷಯವನ್ನು ಎಷ್ಟರ ಮಟ್ಟಿಗೆ ಕಲಿಸಲಾಗಿದೆಯೆಂದು ನೋಡುತ್ತಾರೆ. ಆಗ ಮಕ್ಕಳ ಮಾನಸಿಕ ವಿಕಾಸದ ಬಗ್ಗೆ ಉಪಾಧ್ಯಾಯನು ಮಾಡಿದ ಕೆಲಸವೇನು ಎಂದು ತಿಳಿಯುವುದು ಹೇಗೆ? ಇದು ಕಠಿಣ ಸಮಸ್ಯೆ.

ಉಪಾಧ್ಯಾಯನ ವ್ಯಕ್ತಿತ್ತ್ವವು ವಿದ್ಯೆಯ ಅಭ್ಯಾಸದ ಮೇಲೆ ಹೆಚ್ಚಿನ ಪರಿಣಾಮವನ್ನು ಬೀರುತ್ತದೆನ್ನುವುದು ನಿರ್ವಿವಾದ. 'ಗುರು' ಕೇಂದ್ರವಾಗಿದ್ದ ಹಿಂದಿನ ಕಾಲದಲ್ಲಾಗಲೀ, 'ವಸ್ತು' ಕೇಂದ್ರವಾಗಿದ್ದಾಗಲಾಗಲೀ, 'ಶಿಶು' ಕೇಂದ್ರವಾದ ಈಗಿನ ಸಮಯದಲ್ಲಿ ಆಗಲಿ, ಗುರುವಿನ ಪ್ರಧಾನ ಪಾತ್ರವನ್ನು ಯಾರೂ ನಿರಾಕರಿಸಲಿಲ್ಲ. 'ಗುರು'ವಿಗಿದ್ದ ಸ್ಥಾನ, ಗೌರವ, 'ಉಪಾಧ್ಯಾಯ'ನಿಗೆ ಇಲ್ಲದಿರಬಹುದು. ಆದರೆ, ತಪಸ್ಸಿನಿಂದ ಮಾಡುವ ಕಾರ್ಯವನ್ನು ಈತನು ಮೌನದಿಂದ ಮಾಡಬಲ್ಲನು. ಮಾರ್ಗದರ್ಶಿಯ ಸ್ಥಾನ ಅವನದು. ಮಕ್ಕಳನ್ನು ವ್ಯವಸ್ಥಿತ ಶಾಲೆಯ ಆವರಣದಲ್ಲಿ ಬಿಟ್ಟು ನಿರೀಕ್ಷಿಸುತ್ತಾ ಇರುವನು. ಸಂದೇಹ ಬಂದಾಗ ಮಗುವು ಅವನತ್ತ ತಿರುಗುವುದು. ಆ ಸಂದರ್ಭವನ್ನು ಉಪಯೋಗಿಸಿಕೊಂಡು, ತನ್ನ ಬುದ್ಧಿಶಕ್ತಿಯ ಪ್ರಭಾವದಿಂದ ವಿಕಾಸದತ್ತ ಒಯ್ಯುವ ಗಂರುತರ ಭಾರವು ಉಪಾದ್ಯಾಯನದ್ದಾಗಿರುತ್ತೆ. ಹೀಗಾಗಿ ಉಪಾಧ್ಯಾಯನಿಗೆ 'ಓದು, ಬರೆಹ, ಮಗ್ಗಿ' ಇಷ್ಟು ಮಾತ್ರ ಕಲಿಸಲು ಬಂದರೆ ಸಾಲದು. ಸಂಗೀತ, ಚಿತ್ರಕಲೆ, ವಾಸ್ತು ಶಿಲ್ಪ, ಕಾವ್ಯಶಾಸ್ತ್ರ ಇವೆಲ್ಲದರಲ್ಲೂ ಪರಿಣತಿ ಇರಬೇಕಾಯಿತು. ಇಲ್ಲವೇ ಅಂತಹುದೇ ಕೇಂದ್ರವಾಗಿರುವ ಶಾಲೆಗಳಲ್ಲಿ ಮಕ್ಕಳನ್ನು ಓದಿಸಬೇಕಾಗುವುದು ಇವೆಲ್ಲವುಗಳಿಂದ ಶಾಲೆಯು ಸಜ್ಜಾಗುವವರೆಗೂ ಶಿಕ್ಷಕನ ಆಸಕ್ತಿಯನ್ನು ಕಾಯ್ದಿರಿಸಬೇಕಾಗುವುದು. ಇದು ಕಷ್ಟತಮವಾದ ಕಾರ್ಯ. ಆದರೆ ಮಧ್ಯವರ್ತಿಯಾದ ಒಂದು ದಾರಿಯನ್ನು ಕಂಡುಕೊಳ್ಳಬೇಕಾದ ಕುಶಲತೆಯನ್ನು ಉಪಾಧ್ಯಾಯನು ಹೊಂದಿರಬಹುದಾಗಿದೆ. ಹೃದಯ ವೈಶಾಲ್ಯ, ವಿಸ್ತಾರವಾಗಬಲ್ಲ ದೃಷ್ಟಿ ಕೋನವನ್ನು ಹೊಂದಿದ ಉಪಾಧ್ಯಾಯನು ಶ್ರದ್ಧಾಸಕ್ತಿಗಳಿಂದ ಮಕ್ಕಳ ಮೇಲ್ಮೆಯನ್ನು ಸಾಧಿಸುವುದರಲ್ಲಿ ಯಶಸ್ವಿಯಾಗುವುದು. ಇದಕ್ಕಾಗಿ 40 ಮಕ್ಕಳಿಗೆ ಮಾತ್ರ ವಿಶಾಸಲಾದ ಆವರಣವೊಂದನ್ನು ಶಾಲೆಯಲ್ಲಿ ಸೃಷ್ಟಿಸಿಕೊಳ್ಳುವ ಸ್ವಾತಂತ್ರ್ಯ, ಅದಕ್ಕೆ ಇತರ ಉಪಾಧ್ಯಾಯರುಗಳಿಂದ ಸಹಾಯ ಸಹಕಾರಗಳು ದೊರೆತರೆ ಮಾಡುವುದು ಅಸಾಧ್ಯವೇನಲ್ಲ.

ಉಪಾಧ್ಯಾಯನ ಕಾರ್ಯಕ್ಕೆ ಬೆಲೆಕಟ್ಟುವುದು ಹೇಗೆ? ಯಾವ ದೃಷ್ಟಿಕೋನದಿಂದ ಪರೀಕ್ಷಿಸಬೇಕು ? ಇದೊಂದು ದೊಡ್ಡ ಸಮಸ್ಯೆಯಾಗಿ ಉಳಿದಿದೆ. ಆಟ, ನಾಟಕ, ನೃತ್ಯ, ಸಂಗೀತವೇ ಮೊದಲಾದ, ಪಠ್ಯೇತರ ಚಟುವಟಿಕೆಗಳಿಗೆ ಗಮನವೀಯುವ ಶಿಕ್ಷಕನು, ಪಠ್ಯ ಪುಸ್ತಕಗಳಲ್ಲಿ ಸಾಕಷ್ಟು ಶ್ರದ್ಧೆತೋರಲು ಸಾಧ್ಯವಾಗುತ್ತಿಲ್ಲ. ಪಠ್ಯಪುಸ್ತಕಗಳಿಗೆ ಹೆಚ್ಚು ಗಮನ ಕೊಡಬೇಕೆಂದು ಅವನನ್ನು ಆಗ್ರಹ ಪಡಿಸಿದಾಗ, ಇತರ ಚಟುವಟಿಕೆಗಳಿಗೆ ಹೇಗೆ ಮನಗೊಟ್ಟಾನು? ತನಿಖೆ ನಡೆಯುವುದಂತೂ, ಎಲ್ಲರಿಗೂ ತಿಳಿದಿರುವಂತೆ ಮಕ್ಕಳು

ನಿಗದಿಯಾದ ಪುಸ್ತಕಗಳಲ್ಲಿ ಎಷ್ಟು "ಬಾಯಿಪಾಠ" ಮಾಡಿದ್ದಾರೆ ಎಂದೇ ಹೊರತು, ಬೇರೆ ವಿಷಯಗಳಲ್ಲಲ್ಲ. ಅಭಿನಯ ಕಲೆಯಲ್ಲಿ ಪರಿಣತನಾದ ಬಾಲಕ (ಯಾ) ಬಾಲಕಿಯು ಪಠ್ಯ ವಿಷಯಗಳಲ್ಲಿಯೂ ಮುಂದಿರಬೇಕೆಂದೇ ಎಲ್ಲರೂ ಬಯಸುವುದು ಸಹಜ. ಆದರೆ ಮಕ್ಕಳ ಮನೋವಿಜ್ಞಾನದ ಪ್ರಕಾರ, ಇಂತಹ ಕಲೆಯಲ್ಲಿ ಮುಂದಿರುವವರಿಗೆ ಅಭ್ಯಾಸದಲ್ಲಿ ಅಶ್ರದ್ಧೆಯುಂಟಾಗುವುದೆಂದು ಸಿದ್ಧಪಡಿಸಲಾಗಿದೆ. ಆದ್ದರಿಂದ ಹಲವಾರು ವರ್ಷಗಳು ಇಂತಹ ನವೀನ ಪ್ರಯೋಗಮಾಡುವ ಸಾಧ್ಯತೆ ಆಚರಣೆಗೆ ಬಂದಿಲ್ಲ. ಇದರಿಂದ ಉಪಾಧ್ಯಾಯರು ತಮ್ಮ ಮನಸ್ಸಿಗೆ ಬಂದಂತೆ ವಿದ್ಯೆಯನ್ನು ಮಕ್ಕಳ ಮೃದು ಮನಸ್ಸಿನಮೇಲೆ ಪ್ರಯೋಗಿಸುತ್ತಿದ್ದಾರೆ. ಅದು ಸಾರ್ಥಕವಾಗುತ್ತಿಲ್ಲ. ಇದನ್ನು ಪೂರ್ಣವಾಗಿ ಪರಿಶೀಲಿಸಬೇಕಾದ ಪರಿಸ್ಥಿತಿ ಇಂದು ಉಂಟಾಗಿದೆ. ಇದಕ್ಕಾಗಿ ಒಂದು ಯೋಜನೆಯನ್ನು ಸಿದ್ಧಗೊಳಿಸಬೇಕಾಗಿದೆ. ಬಾಲಕರು ಕೇಳುವ ಪ್ರಶ್ನೆಗಳು ಯಾವ ಬಗೆಯವು ಎಂದು ಪಟ್ಟಿಮಾಡಿಕೊಳ್ಳಬೇಕು. ಇಂಥಾ ಪ್ರಶ್ನೆ ಕೇಳಬಹುದು ಎಂಬ ಊಹೆಯಮೇಲೆ ಸಿದ್ಧಾಂತವನ್ನು ರೂಪುಗೊಳಿಸುವ ಪದ್ಧತಿ ಶಾಸ್ತ್ರೀಯವಾಗುವುದಿಲ್ಲ. ಒಂದೊಂದು ಶಾಲೆಯಲ್ಲೂ ಈ ಪ್ರಶ್ನೆಗಳ ಸಂಗ್ರಹವಾಗಬೇಕು. ಒಬ್ಬೊಬ್ಬ ಉಪಾಧ್ಯಾಯನಲ್ಲೂ, ತನ್ನ ತರಗತಿಯ ಮಕ್ಕಳು, ಆ ದಿನದಲ್ಲಿ ಕೇಳಿರುವ ಪ್ರಶ್ನೆಗಳ ಸಂಗ್ರಹ ಸಿದ್ಧಗೊಳಿಸಲ್ಪಡಬೇಕು,

ಐದು ಶಾಲೆಗಳಲ್ಲಿ ಹೀಗೆ ಕೇಳಲಾದ ಪ್ರಶ್ನೆಗಳನ್ನು ಸಂಗ್ರಹಮಾಡಿ, ಆಯಾ ಅಧ್ಯಾಪಕರುಗಳು ಸಭೆ ಸೇರಿದಾಗ, ಈ ಪ್ರಶ್ನೆಗಳ ಕೇಂದ್ರ ವಸ್ತು ಯಾವುದು ? ಅದನ್ನು ವಿಕಾಸ ಸ್ಥಿತಿಗೆ ಕೊಂಡೊಯ್ಯುವ ಸಾಧನೆಗಳು ಸಾಕಷ್ಟಿವೆಯೋ ? ಇಲ್ಲವಾದರೆ ಅದರ ಸಾಧಕಬಾಧಕಗಳೇನೆಂದು ವಿಚಾರಿಸಿ ನೋಡಬೇಕು. ವಾರಕ್ಕೊಮ್ಮೆ ಅದರಲ್ಲಿ ಶೋಧನೆ ನಡೆಯಬೇಕು. ಯಾರೇ ಆಗಲಿ, ಆ ಮಕ್ಕಳನ್ನು ಪರೀಕ್ಷೆ ಮಾಡುವ ಈ ದೃಷ್ಟಿಕೋನವನ್ನು ಮನಸ್ಸಿನಲ್ಲಿಟ್ಟುಕೊಳ್ಳಬೇಕು. ಬೇರೆ ಎಲ್ಲ ವಿಷಯಗಳನ್ನೂ ಗೌಣವೆಂದೆಣಿಸಬೇಕು.

ಸಂಸ್ಕೃತಿಯು ಮನುಷ್ಯನ ಮೇಲೆ ಪೂರ್ಣಪ್ರಭಾವ ಬೀರಿರುತ್ತದೆ. ಅದರ ಪರಿಣಾಮ ಬಹುಕಾಲ ಉಳಿದಿರುತ್ತದೆ. ಹಿರಿಯರಿಂದ ಮಕ್ಕಳಿಗೂ ಹರಿದುಬರುತ್ತವೆ. ಪರಿಸ್ಥಿತಿಯು ಎಷ್ಟೇ ಬಲಯುತವಾಗಿದ್ದರೂ ಕೆಲವು ಮೂಲ ಗುಣಗಳು ವಿಕೃತವಾಗದೇ ಉಳಿಯುತ್ತವೆ. ಧಾರ್ಮಿಕ ಭಾವನೆಗಳಂತೂ ಪರಿವರ್ತನೆಯಾಗುವುದು ನಿಧಾನ. ಆಗ ಉಪಾಧ್ಯಾಯನಾದವನು, ಸಂಸ್ಕೃತಿ ಮತ್ತು ಧಾರ್ಮಿಕ ಭಾವನೆಗಳಿಗನುಗುಣವಾಗಿ ಇಂದಿನ ವಿಜ್ಞಾನಯುಗದತ್ತ ಮಕ್ಕಳ ಮನಸ್ಸನ್ನು ಬಯ್ಯುವಾಗ ಹೆಚ್ಚಿನ ತಾಳ್ಮೆ ವಹಿಸಬೇಕಾಗುತ್ತದೆ.

ಇಂದು 'ಉದ್ಯೋಗ' ಕೇಂದ್ರವಾಗಿರುವ ವಿದ್ಯೆಯ ಗೊತ್ತು ಗುರಿಗಳು ನಿರ್ಧಾರಿತವಾಗದಿದ್ದರೆ, ವಿದ್ಯೆಯ ಮಟ್ಟ ಇನ್ನೂ ಇಳಿದು ಹೋಗಬಹುದು. ವಿದ್ಯೆ ಮತ್ತು ಉದ್ಯೋಗಗಳು ಒಂದಕ್ಕೊಂದು ಪೂರಕವಾಗುವಂತೆ ಸಿದ್ಧವಾಗದಿದ್ದರೆ ವಿದ್ಯೆಯ ಸಾರ್ಥಕತೆ ನಷ್ಟವಾದೀತೆನ್ನಿಸುತ್ತದೆ. ವಿದ್ಯಾವಂತರಾದ ಮಕ್ಕಳಲ್ಲಿ ಉತ್ತಮ ಗುಣಗಳ ವಿಕಾಸವಾಗುವುದರೊಡನೆಯೇ ಅವನ ದುಡಿಮೆಯಿಂದಲೇ ಕುಟುಂಬದ ನಿರ್ವಹಣೆಯೂ ಆಗಬೇಕಾಗುತ್ತದೆ. ಈ ಎರಡೂ ಎಲ್ಲಿಯವರೆಗೆ ಸಾಧ್ಯವಾಗುವುದಿಲ್ಲವೋ ಅಲ್ಲಿಯವರೆಗೆ ತಂದೆ ತಾಯಿಗಳಿಗೆ. ತಮ್ಮ ಮಕ್ಕಳ ವಿದ್ಯಾಭ್ಯಾಸದ ಬಗ್ಗೆ ಪೂರ್ಣತೃಪ್ತಿಯುಂಟಾಗುವುದಿಲ್ಲ.

ವಿದ್ಯೆಯಿಂದ ವ್ಯಕ್ತಿಯ ಸರ್ವತೋಮುಖ ವಿಕಾಸ ಸಾಧ್ಯವಾಗಬೇಕಾದರೆ, ಅದರಿಂದ ರಾಷ್ಟ್ರದೇಳಿಗೆಯಾಗುವುದೇ ನಿಜವಾದರೆ ತನ್ನನ್ನು ತಾನು ಮೇಲೆತ್ತಿಕೊಳ್ಳುವಂತೆ ನೆರವಾಗುವುದು ವಿದ್ಯೆಯ ಗುರಿಯಾಗಿರಬೇಕು. ವಿದ್ಯೆ ಕಲಿತಂತೆಲ್ಲಾ ಮಗುವಿನ ಮನಸ್ಸು ದೃಷ್ಟಿಯಿಂದ ಸಮಷ್ಟಿಯತ್ತ ನಡೆಯಬೇಕು. ಸುಪ್ತವಾದ ಭಾವನೆಗಳೆಲ್ಲ ವಿಶ್ವವನ್ನೇ ಆವರಿಸಿಕೊಳ್ಳಬೇಕು. ತನಗೆ ಲಭ್ಯವಾದ ಸನ್ನಿವೇಶಗಳನ್ನೇ ತನ್ನ ವಿಕಾಸಕ್ಕೆ ತಿರುಗಿಸಿಕೊಳ್ಳುವ ಶಕ್ತಿ ಮಗುವಿನಲ್ಲಿ ಸಹಜವಾಗಿರುವುದರಿಂದ ಈ ವಿಚಾರದಲ್ಲಿ ತಂದೆತಾಯಿಗಳು–ಉಪಾಧ್ಯಾಯರ ಮತ್ತು ಅಧಿಕಾರಿಗಳ ಭಾವನೆ ಒಮ್ಮತದಿಂದ ಬದಲಾಗಬೇಕಾದದ್ದು ಅತಿ ಅವಶ್ಯಕ.



ವಿದ್ಯಾಭ್ಯಾಸ ಕ್ರಮದಲ್ಲಿ ಪ್ರಧಾನ ಸ್ಥಾನದಲ್ಲಿರಬೇಕಾದ ರಾಷ್ಟ್ರೀಯತೆಯು, ಮಕ್ಕಳಲ್ಲಿ ಬೇರೂರದಿರುವುದು ಏಕೆಂದು ವಿಚಾರಿಸುವುದಗತ್ಯ. ದಾದಾಭಾಯಿ ನವರೋಜಿಯವರು ರಾಷ್ಟ್ರೀಯ ಭಾವನೆಯನ್ನು ಜಾಗ್ರತಗೊಳಿಸುವ ಕಾರ್ಯವನ್ನು ಕೈಗೊಂಡರು. ಗಾಂಧೀಜಿಯವರು ಅದನ್ನು ವಿಶಾಲ ಸಮಾಜಕ್ಕೆ ಅಳವಡಿಸಿದರು. ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆದಾಗ ದೇಶದ ಮೂಲೆಯಲ್ಲೂ, ಆ ಬಾಲವೃದ್ಧರೆಲ್ಲರಲ್ಲೂ ರಾಷ್ಟ್ರೀಯ ಚೇತನ ಬೆಳಗಿದ್ದಿತು, ಸ್ವಾತಂತ್ರ್ಯಾನಂತರ, ರಾಷ್ಟ್ರದ ಬಗ್ಗೆ ಜನತೆಯಲ್ಲಿ ಪ್ರೇಮ ಬೆಳೆದು ಬರಲಿಲ್ಲ. ತಮ್ಮ ಜನ್ಮವೆತ್ತಿದ ಹಳ್ಳಿಗೆ, ಅದರ ಸುತ್ತಲಿನ ಆವರಣಕ್ಕೆ ಮಾತ್ರವೇ ಜನರ ಶ್ರದ್ಧೆ, ವಿಶ್ವಾಸಗಳು ಸೀಮಿತವಾದುವು. ವಿದ್ಯಾಭ್ಯಾಸದ ಕಾರ್ಯಕ್ರಮದಲ್ಲಿ ಈ ವಿಷಯವನ್ನು ಸ್ಥೂಲವಾಗಿ ಸೇರಿಸಲಾಗಿದೆ, ಆದರೆ ಇದೇ ಪ್ರಧಾನ ವಿಷಯವಾಗಬೇಕು. ರಾಷ್ಟ್ರವನ್ನು ವಿದ್ಯೆಯ ಜ್ಯೋತಿಯಿಂದ ಬೆಳಗಬೇಕಾಗಿದೆ. ವಿದ್ಯೆ ಕಲಿತು ಮುಂದೆ ಹೋದಂತೆಲ್ಲಾ ರಾಷ್ಟ್ರದ ಬಗ್ಗೆ ಹೆಚ್ಚಿನ ಜ್ಞಾನ, ರಾಷ್ಟ್ರಕ್ಕಾಗಿ ದುಡಿವ ತ್ಯಾಗಬುದ್ಧಿಗಳೂ ಹೆಚ್ಚುತ್ತಾಹೋಗುವಂತೆ ವಿದ್ಯೆಯನ್ನು ರೂಪಿಸಬೇಕು. ಪ್ರತಿದಿನದ ಕೆಲವು ಸಮಯವು ರಾಷ್ಟ್ರದ ಬಗ್ಗೆ ಮಾಹಿತಿಯನ್ನು ಸಂಗ್ರಹಿಸಿಕೊಳ್ಳಲು ಸಾಧಕವಾಗಬೇಕು.

ನಮ್ಮ ದೇಶದ ಪ್ರಕೃತಿ ಸಂಪತ್ತು, ಇಲ್ಲಿನ ನದಿಗಳು, ಭಿನ್ನ ಭಿನ್ನ ವೇಷದ, ಅಭಿರುಚಿಯ, ಆಚಾರದ ಜನರೆಲ್ಲರೂ ಏಕ ಮನೋಭಾವದ ಭಾರತೀಯರಾಗಿ ಬಾಳುತ್ತಿರುವ ರೋಮಾಂಚಕಾರೀ ಸನ್ನಿವೇಶ, ಐತಿಹಾಸಿಕ ಘಟನೆಗಳಿಗೆ ಆಕರವಾಗಿರುವ ಹಿಂದಿನ ಸನ್ನಿವೇಶಗಳು, ಇವೆಲ್ಲವೂ ರಾಷ್ಟ್ರೀಯತೆಯನ್ನು ಜಾಗೃತಗೊಳಿಸ ಬಲ್ಲುವು. ಇವನ್ನು ವ್ಯವಸ್ಥಿತವಾಗಿ ಅಂತೆಯೇ ಪರಿಣಾಮಕಾರಿಯಾಗಿ ರೂಪಿಸುವ ಕೆಲಸ ವಿದ್ಯೆಯದಾಗಬೇಕು,

ಹೀಗೆ ಆಧುನಿಕ ವಿದ್ಯೆಯು ಗೊತ್ತುಗುರಿಗಳು ಯಾವುದೇ ಒಂದು ನೀತಿಯನ್ನು ಮಾತ್ರವೇ ಲಕ್ಷ್ಯದಲ್ಲಿಟ್ಟುಕೊಂಡಿಲ್ಲ. ಸಂಸ್ಕೃತಿಯ ಏಳಿಗೆ, ಧರ್ಮದ ಬಗ್ಗೆ ವಿಶಾಲ ಅರಿವು, ರಾಷ್ಟ್ರದ ಬಗ್ಗೆ ಉನ್ನತ ಭಾವನೆಗಳನ್ನು ಮಕ್ಕಳಲ್ಲಿ ರೂಪಿಸಿ, ಸರ್ವತೋಮುಖ ವಿಕಾಸಕ್ಕೆ ನೆರವಾಗಬೇಕು. ಹಿಂದಿನಂತೆ, ಈ ಕಾರ್ಯವು ಯಾರೊಬ್ಬರ ಹೊಣೆಯಾಗಿ ಉಳಿದಿಲ್ಲ. ಎಲ್ಲರೂ ಸಹಕರಿಸಿ ರೂಪಿಸಬೇಕಾದಂತಹುದು. ಇದನ್ನರಿತರೆ, ವಿದ್ಯೆ ಸಾರ್ಥಕವಾದೀತು ; ವಿದ್ಯೆ 'ಜ್ಞಾನ'ವಾದೀತು.

## ಮೆಲಕು ಹಾಕುವ ಮಾತುಗಳು

1) ದುಷ್ಟರಲ್ಲಿ ಅಧಿಕ ಭಾಗ್ಯವಿದ್ದರೂ ಅವರ ಹತ್ತಿರ ಹೋಗಬಾರದು. ಹೋದರೆ ಕೇಡಾಗುತ್ತದೆ. ಹೇಗೆಂದರೆ, ಹಾವಿನಲ್ಲಿ ಮಾಣಿಕ್ಯವಿದ್ದರೂ ಅದರ ಸಮೀಪಕ್ಕೆ ಹೋಗಬಾರದು. ಹೋದರೆ ಕಚ್ಚಿ ಕೊಲ್ಲುವುದು.

2) ಸಜ್ಜನರು ತಮಗೆ ಮಾಡಿದ ಉಪಕಾರವನ್ನು ಯಾವಾಗಲೂ ಸ್ಮರಿಸುವರು ; ದುರ್ಜನರು ಆ ಕೂಡಲೆ ಮರೆತುಬಿಡುವರು. ಹೇಗೆಂದರೆ, ಕಲ್ಲಿನ ಮೇಲೆ ಕೆತ್ತಿದ ಅಕ್ಷರವು ನೆಲೆಯಾಗಿ ನಿಲ್ಲುವುದು ; ನೀರಿನ ಮೇಲೆ ಬರೆದುದು ಆಗಲೇ ಕೆಡುವುದು.

3) ಸಜ್ಜನರು ದೋಷವಿದ್ದರೂ ಗುಣವನ್ನೇ ನೋಡಿ ಸಂತೋಷ ಪಡುವರು ; ದುರ್ಜನರು ಗುಣವಿದ್ದರೂ ದೋಷವನ್ನೇ ಹುಡುಕುವರು. ಹೇಗೆಂದರೆ, ತೋಟದಲ್ಲಿ ದುಂಬಿಗಳು ಹೂಗಳ ಮಧುವನ್ನೇ ಪಾನಮಾಡುವುವು : ಕಾಗೆ ಕಹಿ ಬೇವಿನ ಹಣ್ಣನ್ನೇ ತಿಂದು ನಲಿಯುವುದು.

# ಅರವತ್ತು ಮೂವರು ಮುಂತಾದ ಪುರಾತನರ ಪುರಾಣೋದಯ

—ಪಿ. ಜಿ. ಶ್ರೀನಿವಾಸನ್, ಬಿ.ಎಸ್‌ಸಿ.

ತಮಿಳುನಾಡು ಕನ್ನಡ ನಾಡುಗಳಿಗೆ ಬಹು ಪ್ರಾಚೀನ ಕಾಲದಿಂದಲೂ ಧರ್ಮ, ಸಾಹಿತ್ಯ, ಸಂಸ್ಕೃತಿಗಳಲ್ಲಿ ಪರಸ್ಪರ ಅತ್ಯಂತ ಸಂಬಂಧವಿದೆ. ಅವು ಒಂದಕ್ಕೊಂದು ಪೂರಕಗಳಾಗಿ ಬಾಳಿಬದುಕಿವೆ. ತಮಿಳಿನಿಂದ ಕನ್ನಡಕ್ಕೆ ಬಹಳ ಬಂದಿದೆ. ಅಂತೆಯೇ ಕನ್ನಡದಿಂದಲೂ ತಮಿಳಿಗೆ ಅನೇಕ ಹೋಗಿದೆ. ತಮಿಳುನಾಡಿನ 63 ಜನ ಪುರಾತನರು—ಆಳ್ವಾರರುಗಳ ಆದರ್ಶವನ್ನು ಕನ್ನಡನಾಡು ಒಪ್ಪಿದೆ. ಅಂತೆಯೇ ಕನ್ನಡನಾಡಿನ ಅನೇಕ ಮಹಾಪುರುಷರನ್ನು ತಮಿಳುನಾಡು ಆದರ್ಶವಾಗಿ ಸ್ವೀಕರಿಸಿದೆ. 63 ಜನ ಪುರಾತನರ ಬಗೆಗೆ ತಮಿಳಿನಲ್ಲಿ ಹುಟ್ಟಿದ "ಪೆರಿಯ ಪುರಾಣ'' ಉತ್ಕೃಷ್ಟವಾದ ಧಾರ್ಮಿಕ ಸಾಹಿತ್ಯ ಪ್ರತಿಪಾದಕ ಗ್ರಂಥ. ಈ ಮಹಾ ಪುರಾಣದ ಹುಟ್ಟು ಅದರಲ್ಲಿ ವರ್ಣಿತವಾಗಿರುವ ಪುರಾತನರ ಬಗೆಗೆ ಸೂಚ್ಯವಾಗಿ ಶ್ರೋತ್ರಿಯರೂ ತಮಿಳು ವಿದ್ವಾಂಸರೂ, ಸೆಂಟ್ರಲ್ ಹೈಸ್ಕೂಲ್ ನಿವೃತ್ತ ತಮಿಳು ಪಂಡಿತರೂ ಆದ ಶ್ರೀಮಾನ್ ಪಿ. ಜಿ. ಶ್ರೀನಿವಾಸನ್ ಬಿ.ಎಸ್.ಸಿ. ಅವರು ಬರೆದು ನಮ್ಮ ಓದುಗರಿಗಾಗಿ ಒದಗಿಸಿದುದಕ್ಕೆ ಅವರಿಗೆ ಧನ್ಯವಾದಗಳು.

—ಸಂ.

"ಗಗನಂ ಗಗನಾಕಾರಂ ಸಾಗರಸ್ಸಾಗರೋಪಮಃ–
ಈ ರೀತಿ ರಾಮ ರಾವಣರ ಯುದ್ಧವನ್ನು 'ಅದ್ವಿತೀಯವಾದುದು, ಅನುಪಮವಾದುದು' ಎಂದು ವಾಲ್ಮೀಕಿ ಮಹರ್ಷಿಗಳು ವರ್ಣಿಸಿದರು. 'ಅಹುದೆ!' ಗಗನಕ್ಕೆ, ಸಾಗರಕ್ಕೆ ಅದದೇ ಸಮವೇ? ಅವುಗಳಿಗಿಂತ ಹೆಚ್ಚಾದವು ಇಲ್ಲವೇ?" ಎಂದೆನಿಸಿತು ಓರ್ವ ರಾಜನಿಗೆ, 'ನೋಡೋಣ,ವಿಚಾರ ಮಾಡೋಣ' ಎಂದಂದುಕೊಂಡ. ಭೂಮಿಗಿಂತ ದೊಡ್ಡದು ಯಾವುದು? ಸಮುದ್ರಕಿಂತ ಅಗಾಧವಾದುದಾವುದು? ಬೆಟ್ಟಕ್ಕಿಂತ ಹೆಚ್ಚಿದುದ್ದ ಯಾವುದು?'—ಈ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ನೀಡುವವರಿಗೆ ದೊಡ್ಡದೊಂದು ಚಿನ್ನದ ನಾಣ್ಯಗಳ ಗಂಟು ಕೊಡುವುದಾಗಿ ರಾಜ್ಯದಲ್ಲಿ ಎಲ್ಲೆಲ್ಲೂ ಸಾರಿಸಿದ. ಗಂಟನ್ನು ಓಲಗದಲ್ಲಿ ತೂಗು ಹಾಕಿದ. ಸುದ್ದಿ ರಾಜ್ಯದ ಹೊರಗೂ ಹಬ್ಬಿತು.

ಉತ್ತರಗಳು ಬರಲಾರಂಭಿಸಿದುವು. ಯಾವುದೂ ದೊರೆಯ ಮನಸ್ಸಿಗೆ 'ಸರಿ' ಎಂದು ತೋರಲಿಲ್ಲ. ಕೊನೆಗೆ 'ನನ್ನ ಪ್ರಶ್ನೆಗಳಿಗೆ ಉತ್ತರಗಳು ಬರುವುದಿಲ್ಲ, ಎಂದು ಅರಸನು ನಿರಾಶನಾಗ ತೊಡಗಿದಾಗ ಒಂದು ಉತ್ತರಗಳ ಓಲೆ ಬಂದಿತು. ರಾಜನು ಓದಿದನು. 'ಇದೀಗ ಉತ್ತರ; ಉತ್ತಮೋತ್ತಮ ಉತ್ತರ, ಇಷ್ಟು ಮಾತ್ರವಲ್ಲ. ಸಮಂಜಸವಾದುದಿದು' ಎನ್ನಿಸಿತು.

ಅತಿ ಸಂತೋಷ ಚಿತ್ತನಾದ ರಾಜನು ಉತ್ತರ ಬರೆದು ಕಳುಹಿಸಿದ ವಿದ್ವಾಂಸರನ್ನು ಬರಮಾಡಿಕೊಂಡು ಸತ್ಕರಿಸಿದನು. ತನ್ನ ಮೆಚ್ಚುಗೆಯನ್ನು ವ್ಯಕ್ತಪಡಿಸಿ ಪಾರಿತೋಶಕವನ್ನು ಕೊಟ್ಟನು. ಅಷ್ಟು ಮಾತ್ರಕ್ಕೆ ರಾಜನಿಗೆ ತೃಪ್ತಿಯಾಗಲಿಲ್ಲ. ವಿದ್ವಾಂಸರ ವಿನಯಾದಿ ಗುಣಗಳು ಅವನ ಮನಸ್ಸನ್ನು ಸೆಳೆದುವು. ಅವರಿಗೆ ಲೌಕಿಕ ಜ್ಞಾನವೂ ವಿಶೇಷವಾಗಿದ್ದುದನ್ನರಿತ ಅವನು ಅವರನ್ನು ಅಮಾತ್ಯ ಪದವಿಯಲ್ಲಿದ್ದು ತನಗೆ ರಾಜ ಕಾರ್ಯದಲ್ಲಿ ನೆರವಾಗಿ ಉಪಕರಿಸ ಬೇಕೆಂಬುದಾಗಿ ಪ್ರಾರ್ಥಿಸಿಕೊಂಡನು. ಒಪ್ಪದಿದ್ದ ಅವರನ್ನು ವಿಶೇಷವಾಗಿ ಬೇಡಿಕೊಂಡು ಒಪ್ಪಿಸಿ ಸಂತುಷ್ಟನಾದ ರಾಜ.

ರಾಜನು ಇಮ್ಮಡಿ ಕುಲೋತ್ತುಂಗ ಚೋಳ; ಹನ್ನೆರಡನೆಯ ಶತಮಾನದಲ್ಲಿ ಆಳುತ್ತಿದ್ದವನು. ಉತ್ತರಗಳನ್ನು ಕಳುಹಿಸಿ ಕೊಟ್ಟವರು 'ಶೇಕ್ಕಿಳಾರ್' ಎಂದು ಪ್ರಸಿದ್ಧರಾಗಿರುವ 'ಅರುಳ್ ಮೊಳಿತ್ತೇವರ್.' ಶೇಕ್ಕಿಳಾರ್ ಎಂಬುದು ಅವರ ಕುಲದ ಹೆಸರು. ಅರುಳ್ ಮೊಳಿತ್ತೇವರ್ ಎಂಬ ನಾಮಧೇಯವು ಅವರಿಗೆ ಹೆತ್ತವರಿಟ್ಟು ಕರೆದುದಾಗಿರಬಹುದು. ಅರ್ಥವನ್ನು ಗಮನಿಸಿದಲ್ಲಿ (ಅರುಳ್-ಕೃಪೆ, ಮೊಳಿ–ಮಾಡು, ತೇವರ್–ದೈವಾಂಶ ಸಂಭೂತರು) ಆ ಹೆಸರು 'ಕಾರಣನಾಮ' (ಅನ್ವರ್ಥ) ಆಗಿರಬಾರದೆ ಎಂದೆನಿಸುತ್ತದೆ. 'ಈಶ್ವರ ಕೃಪೆಯಿಂದ ನುಡಿದ ದೈವಾಂಶ ಸಂಭೂತರು' ಎಂದು ಆ ಹೆಸರನ್ನು ತಿಳಿಯ ಬಹುದಾಗಿದೆ.

ಉತ್ತರಗಳನ್ನು ಶೇಕ್ಕಿಳಾರರು ತಾವಾಗಿ ಕಲ್ಪಿಸಿ ಹೇಳಲಿಲ್ಲ. ಸುಪ್ರಸಿದ್ಧ ನೀತಿ ಶಾಸ್ತ್ರಜ್ಞರಾದ 'ತಿರುವಳ್ಳುವರ್' ಕೃತಿಯಾದ ಜಗದ್ವಿಖ್ಯಾತ 'ತಿರುಕ್ಕುರಳ್'ನಿಂದ ಮೂರು ದ್ವಿಪದಿಗಳನ್ನಾರಿಸಿ ಅವರು ಕಳುಹಿಸಿ ಕೊಟ್ಟಿದ್ದರು. ಅವುಗಳ ತಾತ್ಪರ್ಯ ಹೀಗೆ: "ತಕ್ಕ ಕಾಲದಲ್ಲಿ ಮಾಡಲ್ಪಟ್ಟ ಉಪಕಾರವು 'ಅಲ್ಪ' ವಾದುದಾದರೂ ಅದು ಭೂಮಿಗಿಂತ (ವಿಶ್ವ) ಎಷ್ಟೋ ದೊಡ್ಡದು. ತನ್ನ ನೆಲೆಯಲ್ಲಿ ನಿಂತು (ಗೃಹಸ್ಥನಾಗಿದ್ದು), ತನ್ನ ಧರ್ಮವನ್ನು ಎಳ್ಳಷ್ಟು ಕೂಡ ವ್ಯತ್ಯಾಸವಿಲ್ಲದೆ ಪರಿಪಾಲಿಸುತ್ತ ನಮ್ರನಾಗಿರುವವನ ಔನ್ನತ್ಯವು ಬೆಟ್ಟಕ್ಕಿಂತ ಅತ್ಯಂತ ಎತ್ತರವಾದುದು" "ಪ್ರತಿಫಲವನ್ನು ಕುರಿತು ಚಿಂತಿಸದೆ, ಉಪಕಾರ ಮಾಡಬೇಕು, ಮಾಡಲೇ ಬೇಕು ಎಂಬ ಸ್ವಾಭಾವಿಕ ಮನಸ್ಸಿನಿಂದ ಉಪಕಾರ ಮಾಡಿದ ಮನಸ್ಸನ್ನು ಪರಿಶೀಲಿಸಿದರೆ, ಅದು ಸಾಗರಕ್ಕಿಂತ ಅಗಾಧವಾದುದು."

ಶೇಕ್ಕಿಳಾರರು ರಾಜ್ಯ ಕಾರ್ಯದಲ್ಲಿ ರಾಜನಿಗೆ ವಿಶೇಷ ಉಪಕಾರ ಮಾಡುತ್ತ ಅವನ ಗೌರವಕ್ಕೆ ಪಾತ್ರರಾದರು. ಬರ ಬರುತ್ತ ರಾಜನಿಗೆ ಅವರಲ್ಲಿ ಭಕ್ತಿಯೇರ್ಪಟ್ಟಿತು. ಅವರ ಜ್ಞಾನ, ನಿಷ್ಠೆ, ಆಡಳಿತದಲ್ಲಿ ನೈಪುಣ್ಯ ಇವುಗಳನ್ನು ಮೆಚ್ಚಿ ರಾಜನು 'ಉತ್ತಮ ಶೋಳಪ್ಪಲ್ಲವನ್' ಎಂಬ ಉತ್ತಮ ಬಿರುದನ್ನೂ ವಿಶೇಷ ಮರ್ಯಾದೆಗಳನ್ನೂ ಕೊಟ್ಟು ಅವರನ್ನು ಮುಖ್ಯಮಂತ್ರಿಯನ್ನಾಗಿ ಮಾಡಿಕೊಂಡನು. ರಾಜ್ಯಾಡಳಿತ ಮಾತ್ರವಲ್ಲದೆ ಸ್ವಂತ ವಿಚಾರಗಳನ್ನು ಅವರ ಸಲಹೆ ಪಡೆದೇ ಮಾಡುತ್ತಿದ್ದನು. ರ್‍ಾಜವು ಸಂಪತ್ಸಮೃದ್ಧಿಯಿಂದ ಬೆಳಗಿ ಜನರೆಲ್ಲ ಸುಖ ಸಂತೋಷಗಳಿಂದ ಕೂಡಿದ್ದರು.

ಅಮಾತ್ಯ ಪದವಿಯನ್ನು ಅತ್ಯಂತ ದಕ್ಷತೆಯಿಂದ ವಹಿಸುತ್ತಲಿದ್ದ ಶೇಕ್ಕಿಳಾರರು ಈಶ್ವರ ಭಕ್ತಿಯಲ್ಲೂ ಅದ್ವಿತೀಯರಾಗಿ ಬೆಳಗಿದರು. ಚೋಳ ದೇಶದ ತಿರುನಾಗೇಶ್ವರ ಎಂಬ ಕ್ಷೇತ್ರದಲ್ಲಿ ರಾರಾಜಿಸುತ್ತಿದ್ದ ಈಶ್ವರ ಮೂರ್ತಿಯಲ್ಲಿ ಪರಮ ಭಕ್ತಿಯುತರಾಗಿ ಅವನನ್ನು ತಮ್ಮ ಆತ್ಮ ನಾಯಕನನ್ನಾಗಿ ವರಿಸಿ ಭಜಿಸುತ್ತಿದ್ದರು. ಆ ದಿವ್ಯ ಕ್ಷೇತ್ರದಲ್ಲಿ ಅನೇಕ ಸತ್ಕಾರ್ಯಗಳನ್ನು ಮಾಡಿದರು. ಅಲ್ಲಿ 'ನಟರಾಜ ಸಭೆ', ಮಂಟಪ ಮೊದಲಾದುವನ್ನು ಕಟ್ಟಿಸಿದ್ದರು. ತಾವು ಜನ್ಮ ತಾಳಿದ ಊರಿನಲ್ಲಿಯೂ ಈಶ್ವರ ದೇವಾಲಯ ಒಂದನ್ನು ನಿರ್ಮಿಸಿದರು.

ಕುಲೋತ್ತುಂಗ ಚೋಳನು ವಿದ್ಯಾವಂತ, ಕಲಾಭಿಮಾನಿ ಮತ್ತು ವಿದ್ಯಾ ಪಕ್ಷಪಾತಿ ವಿದ್ವಾಂಸರನ್ನು ಗೌರವದಿಂದ ಕಂಡು ಅವರಿಗೆ ಯೋಗ್ಯ ಸನ್ಮಾನ ಮಾಡುತ್ತಿದ್ದನು. ಆ ಕಾಲದಲ್ಲಿ ತಮಿಳಿನ ಐದು ಮಹಾಕಾವ್ಯಗಳಲ್ಲೊಂದಾದ 'ಜೀವಕ ಚಿಂತಾಮಣಿ'ಯು ಪ್ರಸಿದ್ಧವಾಗಿದ್ದು ಎಲ್ಲರಿಂದಲೂ ಓದಲ್ಪಡುತ್ತಿದ್ದಿತು. ಅದು ಜೈನ ಕಾವ್ಯ. ಕುಲೋತ್ತುಂಗ ಚೋಳನೂ ಇತರರಂತೆ ಆ ಗ್ರಂಥವನ್ನು ಆದರದಿಂದ ಓದುತ್ತ ಅದಕ್ಕೆ ಮನ ಸೋತನು, ಶೇಕ್ಕಿಳಾರರಲ್ಲೂ ಅದನ್ನೇ ವಿಶೇಷವಾಗಿ ಶ್ಲಾಘಿಸಿ ಮಾತನಾಡಲಾರಂಭಿಸಿದನು. ಕಾವ್ಯವು ಉತ್ತಮವಾದುದೆಂಬುದರಲ್ಲಿ ಸಂದೇಹವು ಶೇಕ್ಕಿಳಾರರಿಗೆ ಇರಲಿಲ್ಲ. ಅದನ್ನು ಕಾವ್ಯರುಚಿಗಾಗಿ ಓದಿದರೆ ಸಾಕು, ಮತಗ್ರಂಥವೆಂದು ಮನ ಸೋಲಬಾರದು. ಜೈನರಿಗೆ ಎರಡೂ ಅಹುದು. ಅದು ನ್ಯಾಯವೂ ಸರಿ. ರಾಜನು ಶೈವನು. ತನ್ನ ಮತವನ್ನು ಚೆನ್ನಾಗಿ ತಿಳಿದುಕೊಂಡು ಅದರಲ್ಲಿ ಉಳಿಯುವುದು ಅವನಿಗೆ ಶ್ರೇಯಸ್ಕರ. ಆ ಮಾರ್ಗಾವಲಂಬಿಯಾಗಿ ತನ್ನ ಉಜ್ಜೀವನವನ್ನು ಪಡೆದುಕೊಳ್ಳಬೇಕಾದುದು ನ್ಯಾಯವೆಂದು ತೋರಿದ ಕಾರಣ ರಾಜನ ವರ್ತನೆಯು ಮಂತ್ರಿವರ್ಯನಿಗೆ "ಸರಿ" ಎಂದು ತೋರಲಿಲ್ಲ. ರಾಜನಿಗೆ ಶೈವ ಮತ ತತ್ತ್ವಗಳು ಸರಿಯಾಗಿ ಗೊತ್ತಿಲ್ಲ. ಅವುಗಳನ್ನು ಅವನು ಅಭ್ಯಸಿಸಲಿಲ್ಲವೆಂಬುದು ಅವರಿಗೆ ಗೊತ್ತಿತ್ತು.

ಸಮಯವರಿತು ಅಮಾತ್ಯವರ್ಯರು ತಮ್ಮ ಮನಸ್ಸನ್ನು ರಾಜನಿಗೆ ಬಿಚ್ಚಿ ತೋರಿಸಿದರು. "ಸ್ವಧರ್ಮೇ ನಿಧನಂ ಶ್ರೇಯಃ" ಎಂಬ ವಾಕ್ಯವನ್ನು

ವಿವರಿಸಿ ತಿಳಿಯ ಹೇಳಿದರು. ಅವರಲ್ಲಿ ವಿಶೇಷ ಗೌರವವನ್ನಿಟ್ಟಿದ್ದ ರಾಜನು ಅವರು ಜ್ಞಾನಿಗಳೆಂದೂ ತಿಳಿದಿದ್ದನು. "ಜ್ಞಾನ" ಶಬ್ದವನ್ನು ಅಮರ ಸಿಂಹರು ಈ ರೀತಿ ತಿಳಿಸಿರುತ್ತಾರೆ: "ಮೋಕ್ಷೇ ಧೀರ್ಜ್ಞಾನಂ" ಎಂದರೆ, ಮೋಕ್ಷವನ್ನು ಕುರಿತ ಬುದ್ಧಿ ವಿಶೇಷವೇ ಜ್ಞಾನ ಎಂದು. ಇತರ ವಿಷಯಗಳಲ್ಲಿ ಸೂಕ್ಷ್ಮ ಬುದ್ಧಿ ಇದ್ದಲ್ಲಿ ಅದನ್ನು "ವಿಜ್ಞಾನ" ಎನ್ನಬೇಕು. ರಾಜನು ಜ್ಞಾನಿಗಳಿಂದ ಜ್ಞಾನ ಭಿಕ್ಷೆಯನ್ನು ಬೇಡಿದನು. ಅವರನ್ನು ಗುರುಗಳನ್ನಾಗಿ ವರಿಸಿದನು. ಶಿಷ್ಯನ ಅರ್ಹತೆಯನ್ನು ತಿಳಿದ ಶೇಕ್ಕಿಳಾರರು ಕ್ರಮವಾಗಿ ಉಪದೇಶವನ್ನು ಮಾಡಿದರು. ರಾಜನು ಸಚ್ಛಿಷ್ಯನಾಗಿ ಸಂದೇಹ, ವಿಪರ್ಯಯಗಳಿಲ್ಲದೆ ಶೈವ ಮತ ತತ್ತ್ವವನ್ನು ಆಮೂಲಾಗ್ರವಾಗಿ ತಿಳಿದುಕೊಂಡನು.

ರಾಜನ ಮನಸ್ಸಿನಲ್ಲಿ ಒಂದು ತೀವ್ರವಾದ ಆಸೆಯು ಬೆಳೆಯಿತು. ಶೈವ ಸಂತರನ್ನು ಕುರಿತ ಗ್ರಂಥವೊಂದನ್ನು ರಚನೆ ಮಾಡಿಸಬೇಕೆಂಬುದೇ ಆ ಆಸೆ. ತನ್ನ ಗುರುಗಳ ಅಸದೃಶ ಜ್ಞಾನವನ್ನು ಕಂಡಿದ್ದ ಅವನು ಅವರಿಂದ ಆ ಶಾಶ್ವತವಾದ ಮಹತ್ಕಾರ್ಯವನ್ನು ಮಾಡಿಸಿ ಅದರ ಮೂಲಕ ಈಶ್ವರನ ಮತ್ತು ಸಂತರ ಪ್ರಭಾವಗಳನ್ನು ಸಾಮಾನ್ಯ ಜನರೂ ಅರಿತು ಉದ್ಧಾರವಾಗಲೆಂದು ಬಯಸಿದ ರಾಜ. ಅದಕ್ಕಿಂತ ಮಹತ್ಕಾರ್ಯ ಇನ್ನೊಂದಿಲ್ಲವೆಂಬುದು ಆತನ ನಿಶ್ಚಯಂ ಶಿವ ಶರಣರನ್ನು ಕುರಿತು ತಿಳಯ ಹೇಳುವುದಕ್ಕೆ ಶೇಕ್ಕಿಳಾರರವರೇ ತಕ್ಕ ಯೋಗ್ಯತೆಯನ್ನು ಪಡೆದಿದ್ದವರೆಂದೂ ನಂಬಿದನು.

ರಾಜನು ತನ್ನ ಮನೋಭೀಷ್ಟವನ್ನು ಜ್ಞಾನಿಗಳಿಗೆ ತಿಳಿಸಿ ಆ ಉತ್ತಮ ಕಾರ್ಯವನ್ನು ನೆರವೇರಿಸಿ ಕೊಡುವಂತೆ ಪ್ರಾರ್ಥಿಸಿಕೊಂಡನು.

ರಾಜನ ಪ್ರಾರ್ಥನೆಯನ್ನು ಶೇಕ್ಕಿಳಾರರು ಸುಲಭವಾಗಿ ಅಂಗೀಕಾರ ಮಾಡಲಿಲ್ಲ. ಕಾರಣ: ತಮಗೆ ಅಂಥ ಯೋಗ್ಯತೆ ಇಲ್ಲವೆಂದು ಅವರು ತಿಳಿದಿದ್ದುದು. ಆದರೂ ರಾಜನ ಒತ್ತಾಯ ಹೆಚ್ಚಲು, ಅದು ಈಶ್ವರನ ಕಟ್ಟಳೆಯೆಂದು ಭಾವಿಸಿ ಒಪ್ಪಿದರು. ರಾಜನನ್ನು ಕೇಳಿಕೊಂಡು, 'ತಿಲ್ಲೈ' ಕ್ಷೇತ್ರಕ್ಕೆ ಹೊರಟರು. ಅಲ್ಲಿದ್ದ ಈಶನ ಅನುಗ್ರಹ ಬಲದಿಂದ ಕೈಗೊಂಡ ಕಾರ್ಯವನ್ನು ಪೂರ್ತಿಗೊಳಿಸಬೇಕೆಂದು ನಿಶ್ಚಯಿಸಿದರು. ರಾಜನು ಅದಕ್ಕೆ ತಕ್ಕ ಏರ್ಪಾಡುಗಳನ್ನೆಲ್ಲ ಮಾಡಿ ಕೊಟ್ಟನು.

ಭಕ್ತರು ದೇವರ ಮುಂದೆ ನಿಂತರು. ಕೈಜೋಡಿಸಿ. "ಸ್ವಾಮಿ, ಮಹಾನುಭಾವರಾದ ಶಿವ ಶರಣರ ದಿವ್ಯ ಚರಿತ್ರೆಗಳನ್ನು ಹಾಡುವ ಯೋಗ್ಯತೆ ನನಗಿಲ್ಲ. ನಿನ್ನ ವಿಶೇಷ ಅನುಗ್ರಹ ಬಲದಿಂದಲೇ ನಾನು ಅದನ್ನು ಮಾಡಲು ಸಾಧ್ಯ, ನಟರಾಜ! ನಿನ್ನ ಪೂರ್ಣ ಸಹಾಯ ಬೇಡುವೆನು" ಎಂದು ಕಣ್ಣಿನಲ್ಲಿ ಧಾರಾಕಾರವಾಗಿ ನೀರು ಸುರಿಸುತ್ತ ಈಶ್ವರನ ಅಪ್ಪಣೆಯನ್ನು ಎದುರು ನೋಡುತ್ತಲಿದ್ದರು. ಒಳಗಿನಿಂದ ಮಂಗಳವಾಣಿಯು ಹೊರಟಿತು. ಆ ವಾಣಿಯು ಅಲ್ಲಿದ್ದ ಇತರ ಭಕ್ತರಿಗೂ ಕೇಳಿಸಿತು.

ಈಶ್ವರನ ಅನುಗ್ರಹವಾಯಿತು! ಅವನು ಗ್ರಂಥಕ್ಕೆ ಮೊದಲ ಮಂಗಳ ಪದನನ್ನು ತಿಳಿಸಿ ಆ ಮೂಲಕ ಗ್ರಂಥ ಹೊರಡಲೆಂದು ಅಪ್ಪಣೆ ಕೊಟ್ಟನೆಂದು ತಿಳಿದು ಕೊಂಡರು ಶೇಕ್ಕಿಳಾರರು. ಅದರಂತೆ ಗ್ರಂಥದ ಆದಿಪದವಾಗಿ ಆ ಮಂಗಳ ಪದವನ್ನಿಟ್ಟು ಗ್ರಂಥವನ್ನು ರಚಿಸತೊಡಗಿದರು. ಸುಸೂತ್ರವಾಗಿ ನಿರ್ಮಾಣ ಕೆಲಸ ಮುಂದುವರಿಯುತ್ತಿದ್ದಿತು. ಆಗಾಗ ರಾಜನು ಗ್ರಂಥವು ಎಷ್ಟರ ಮಟ್ಟಿಗೆ ಆಗಿದೆಯೆಂದು ತಿಳಿದು ಕೊಳ್ಳುತ್ತಿದ್ದನು; ಆನಂದಗೊಂಡನು.

ಈ ಗ್ರಂಥಕ್ಕೆ ಮೂಲ ಗ್ರಂಥವು ನಂಬಿಯಾಣ್ಡಾರ್ ನಂಬಿ ಎಂಬುವರ "ತಿರುತ್ತೊಂಡತ್ತೊಗೈ". ಅದಕ್ಕೆ ಮೂಲ ಗ್ರಂಥವು ಉಪಮನ್ಯು ಭಕ್ತ ವಿಲಾಸ ಎಂದು ತಿಳಿದು ಬರುತ್ತದೆ. ಶಿವ ರಹಸ್ಯದಲ್ಲಿ, ಪರಮೇಶ್ವರನು ಉಮಾದೇವಿಯರಿಗೆ ಉಪದೇಶ ಮಾಡಿದುದನ್ನು ಕೈಲಾಸದ ತಪ್ಪಲಿನಲ್ಲಿ ಉಪಮನ್ಯು ಮಹರ್ಷಿಗಳು ಅಲ್ಲಿ ನೆರೆದಿದ್ದ ಋಷಿವರ್ಯರಿಗೆಲ್ಲ ತಿಳಿಸಿದುದೇ ಉಪಮನ್ಯು ಭಕ್ತ ವಿಲಾಸ.

ಗ್ರಂಥವು ಪೂರ್ತಿಯಾದುದನ್ನು ಕೇಳಿದ ರಾಜನು ಚಿದಂಬರಕ್ಕೆ ಬಂದನು. ಬಹಳ ವಿಜೃಂಭಣೆಯಿಂದ



ಗ್ರಂಥ, ಗ್ರಂಥಕರ್ತರನ್ನು ಆನೆಯ ಮೇಲೆ ಮೆರವಣಿಗೆ ಮಾಡಿಸಿದನು. ಗ್ರಂಥವನ್ನು ಓದಿಸಿ, ಕೇಳಿ ಆನಂದ ಭರಿತನಾದನು. ಒಂದು ವರ್ಷದ ಮೇಷ ಮಾಸ ಆರ್ದ್ರಾ ನಕ್ಷತ್ರದಲ್ಲಿ ಪ್ರಾರಂಭವಾದ ಗ್ರಂಥವು ಮರು ವರ್ಷ ಅದೇ ತಿಂಗಳು ಅದೇ ನಕ್ಷತ್ರ ದಿನದಲ್ಲಿ ಪೂರ್ತಿಗೊಂಡಿತು. ಗ್ರಂಥವನ್ನು ಅರಸ ನೊಡನಿದ್ದು ಕೇಳಿದವರು 3000 ದೀಕ್ಷಿತರು, ಮಠಾಧೀಶರು, ವಿದ್ವಾಂಸರು, ರಾಜ ಸಭೆಯವರು ಮತ್ತು ಪುರಜನರು. ನಟರಾಜನ ಮೆಚ್ಚುಗೆಯು ಅವನ ಪಾದ ಗೆಜ್ಜೆಯ ಶಬ್ದದಿಂದ ವ್ಯಕ್ತವಾಯಿತು.

ಗ್ರಂಥದ ಹೆಸರು "ಪೆರಿಯ ಪುರಾಣಂ". ಭಕ್ತಿ ತುಂಬಿ ತುಳುಕುವ ಉದ್ಗ್ರಂಥವೆಂದು ಅಂದಿನಿಂದ ಇಂದಿನವರೆಗೆ ವಿದ್ವಾಂಸರಿಂದ ಕೊಂಡಾಡಲ್ಪಡುತ್ತಿರುವ ಹಿರಿಮೆ ಇದರದು. ತಮಿಳು ಭಾಷೆ ಇರುವವರೆಗೂ ಇದು ಉಳಿದು ಭಕ್ತರ ಚರಿತಗಳಿಂದ ಅನೇಕರನ್ನು ಭಕ್ತರನ್ನಾಗಿ ಮಾಡಿ ಉದ್ಧಾರ ಮಾಡುತ್ತಿರುವುದು ಎಂಬುದರಲ್ಲಿ ಲವ ಲೇಶವೂ ಸಂಶಯವಿಲ್ಲ.

ರಾಜನು ತಕ್ಕರೀತಿಯಲ್ಲಿ ಗುರುವರ್ಯರನ್ನು ಸನ್ಮಾನಿಸಿ, ಬಿರುದುಗಳನ್ನು ಕೊಟ್ಟು ಅಳಿಯದ ಕೀರ್ತಿ ಸಂಪಾದಿಸಿ ಕೊಂಡನು. ಅವರ ಬಯಕೆಯಂತೆ ಅವರು ದೇವರ ಸಾನ್ನಿಧ್ಯದಲ್ಲಿ ಇದ್ದು ವೈರಾಗ್ಯದೊಡನೆ ಇರುವುದಕ್ಕೆ ಬೇಕಾದುದನ್ನೆಲ್ಲ ಅಣಿ ಮಾಡಿಕೊಟ್ಟನು.

ಈ ರೀತಿ ಪುರಾಣವು ಉದ್ಭವವಾಯಿತು.

ಸಂತರು ನಾನಾ ಕುಲದಲ್ಲಿ ಜನಿಸಿದವರು. ವಿಪ್ರರಿಂದ ಎಲ್ಲ ಕುಲದವರೂ ಈ ಗುಂಪಿಗೆ ಸೇರಿದವರಾಗಿ ಮಾನವ ಕುಲಕ್ಕೆ ಮೋಕ್ಷದ ದಾರಿ ತೋರಿಸಿ ಕೊಡುತ್ತಲಿದ್ದಾರೆ. ಇವರುಗಳ ಪವಿತ್ರ ನಾಮಧೇಯಗಳೂ, ಜನ್ಮ ಮಾಸ-ನಕ್ಷತ್ರಗಳೂ, ಅವರು ಗುರು, ಲಿಂಗ, ಜಂಗಮ ಈ ಮೂರರಲ್ಲಿ ಯಾವ ಉಪಾಸನೆ ಮಾಡಿದರೆಂಬುದೂ ಇಲ್ಲಿ ಕೊಟ್ಟಿರುವ ಪಟ್ಟಿಯಲ್ಲಿ ಕಾಣಬಹುದು.

**ಗುರು**

| ನಾಮಧೇಯಂ | ಮಾಸ-ನಕ್ಷತ್ರ | ಊರು |
|---|---|---|
| 1. ಅಪ್ಪೂದಿ ಅಡಿಗಳ್. | ಮಕರ-ಶತಭಿಷಾ. | ತಿಂಗಳೂರು. |
| 2. ಗಣನಾಥರು. | ಮೀನ-ಆರ್ದ್ರಾ. | ಶೀರ್ಗಾಳಿ. |
| 3. ಕುಲಚ್ಚಿರೈನಾಯನಾರ್ | ಸಿಂಹ-ಅನೂರಾಧಾ | ಮಣಮೇಲ್ಕುಡಿ |
| 4. ಸುಂದರಮೂರ್ತಿ ನಾಯನಾರ್ | ಕಟಕ-ಸ್ವಾತಿ | ತಿರುನಾವಲೂರ್ |
| 5. ಸೋಮಾಶಿ ಮಾರ ನಾಯನಾರ್ | ವೃಷಭ-ಆಶ್ಲೇಷೆ | ತಿರುವಂ |
| 6. ತಿರುಜ್ಞಾನ ಸಂಬಂಧರ್ | ವೃಷಭ-ಮೂಲ | ಶೀಗಾಳಿ. |
| 7. ತಿರುನಾವುಕ್ಕರಶರ್ (ಅಪ್ಪರ್) | ಮೇಷ-ಚಿತ್ತೆ | ತಿರುವಾಮೂರ್ |
| 8. ತಿರುನೀಲಕಣ್ಠ ಯಾಳ್ಪಾಣರ್ | ಮಕರ-ವಿಶಾಖ | ಎರುಕ್ಕತ್ತಂಪುಲಿಯೂರ್. |
| 9. ತಿರುಮೂಲರ್ | ತುಲಾ-ಅಶ್ವಿನಿ | ಶಾತ್ತನೂರ್. |
| 10. ನಿನ್ರಶೀರ್ ನೆಡುಮಾರ ನಾಯನಾರ್ | ತುಲಾ-ಭರಣಿ | ಮಧುರೆ. |
| 11. ಪೆರುಮಿಳಲೈಕ್ಕು ರುಂಬ ನಾಯನಾರ್. | ಕಟಕ-ಚಿತ್ತೆ | ಪೆರುಮಿಳಲೈ. |
| 12. ಮಂಗೈಯರ್ಕ್ಕರ ಶಿಯಾರ್ | ಮೇಷ-ರೋಹಿಣಿ | ಮಧುರೆ. |

**ಲಿಂಗ**

| | | |
|---|---|---|
| 1. ಅರಿಪತ್ತ ನಾಯನಾರ್ | ಸಿಂಹ-ಆಶ್ಲೇಷ | — |
| 2. ಅರಿವಾಟ್ಟಾಯ ನಾಯನಾರ್ | ಮಕರ-ಆರ್ದ್ರಾ | ಕಣಮಂಗಲ. |

| ನಾಮಧೇಯ | ಮಾಸ-ನಕ್ಷತ್ರ | ಊರು |
|---|---|---|
| 3. ಆನಾಯ ನಾಯನಾರ್ | ವೃಶ್ಚಿಕ-ಹಸ್ತ | ಮಂಗಲವೂರ್. |
| 4. ಇಶೈ ಜ್ಞಾನಿಯಾರ್ | ಮೇಷ-ಚಿತ್ತೆ | ನಾವಲೂರ್ |
| 5. ರುದ್ರಪಶುಪತಿ ನಾಯನಾರ್ | ಕನ್ಯಾ-ಅಶ್ವಿನಿ | ತಿರುತ್ತಲೈಯೂರ್ |
| 6. ಎರಿಪತ್ತ ನಾಯನಾರ್ | ಕುಂಭ-ಹಸ್ತ | ಕರುವೂರ್ |
| 7. ಏಯರ್ ಕೋನ್ ಕಲಿಕ್ಕಾಮ ನಾಯನಾರ್ | ಮಿಥುನ-ರೇವತಿ | ತಿರುಪ್ಪೆರುಮಂಗೈ. |
| 8. ಐಯಡಿಗಳ್ ಕಾಡವರ್ ಕೋನ್ ನಾಯನರ್ | ತುಲಾ-ಮೂಲ | ಕಾಂಚಿನಗರ. |
| 9. ಕಣಂಪುಲ್ಲ ನಾಯನಾರ್ | ವೃಶ್ಚಿಕ-ಕೃತ್ತಿಕಾ | ಇರುಕ್ಕುವೇಳೂರ್. |
| 10. ಕಣ್ಣಪ್ಪ ನಾಯನಾರ್ | ಮಕರ-ಮೃಗಶೀರ್ಷ | ಉಡುಪ್ಪೂರ್ |
| 11. ಕಲಿಯ ನಾಯನಾರ್ | ಕಟಕ-ಸ್ವಾತಿ | ತಿರುವೊಟ್ರಿಯೂರ್ |
| 12. ಕಳರಿಟ್ರಿರಿವಾರ್ | ವೃಷಭ-ಭರಣಿ | ಕೊಡುಂ ಕೋಳೂರ್. |
| 13. ಕಾರಿಯಾರ್ | ಕುಂಭ-ಪೂರ್ವಾಷಾಢ | ತಿರುಕ್ಕಡವೂರ್. |
| 14. ಕುಂಗಿಲಿಯಕ್ಕಲಯ ನಾಯನಾರ್ | ಸಿಂಹ-ಮೂಲ | ತಿರುಕ್ಕಡವೂರ್. |
| 15. ಕೂಟುವ ನಾಯನಾರ್ | ಕಟಕ-ಆರ್ದ್ರಾ | ಕಳಂದೈ, |
| 16. ಕೋಟ್ ಪುಲಿ ನಾಯನಾರ್ | ಕುಂಭ-ಶತಭಿಷೆ | ನಾಟ್ಟಿಯತ್ತಾನ್ಗುಡಿ. |
| 17. ಶಡೈಯ ನಾಯನಾರ್ | ಕಟಕ-ಜ್ಯೇಷ್ಠಾ | ತಿರುನಾವಲೂರ್. |
| 18. ಚಂಡೇಶ್ವರ ನಾಯನಾರ್ | ಧನಸ್ಸು-ಆರ್ದ್ರೆ | ತಿರುಚ್ಚೇಯ್ಞಲೂರ್. |
| 19. ಶತ್ತಿಯಾರ್ | ಮಕರ-ಉತ್ತರ | ವರಿಂಜಿಯೂರ್. |
| 20. ಶಾಕ್ಕಿಯ ನಾಯನಾರ್ | ಧನುಸ್ಸು-ಪೂರ್ವಾಷಾಢ | ತಿರುಚ್ಚಂಗಮಂಗೈ. |
| 21. ಶಿರಿಪ್ಪುಲಿ ನಾಯನಾರ್ | ವೃಶ್ಚಿಕ-ಪೂರ್ವಾಷಾಢ | ತಿರುವಾರೂರ್. |
| 22. ಶೆರುತ್ತುಣೈ ನಾಯನಾರ್ | ಸಿಂಹ-ಪುಷ್ಯ | ತಂಜಾವೂರ್. |
| 23 ದಂಡಿ ಅಡಿಗಳ್ | ಮೀನ-ಶತಭಿಷೆ | ತಿರುವಾರೂರ್. |
| 24. ತಿರುನಾಳೈ ಪ್ಪೋವಾರ್ ನಾಯನಾರ್ (ನಂದನಾರ್) | ಕನ್ಯಾ-ರೋಹಿಣಿ | ಆದನೂರ್. |
| 25. ತಿರುನೀಲನಕ್ಕ ನಾಯನಾರ್ | ವೃಷಭ-ಮೂಲ | ಶಾತ್ತಮಂಗೈ. |
| 26. ನಮಿನಂದಿ ಅಡಿಗಳಾರ್ | ವೃಷಭ-ಪುಷ್ಯ | ಏಮಪ್ಪೇರೂರ್. |
| 27. ಪುಗಳ್‌ತ್ತುಣೈಯಾರ್ | ಸಿಂಹ-ಆಶ್ಲೇಷ | ಶೆರುವಿರಿಪುತ್ತೂರ್. |
| 28. ಪೂಶಲಾರ್ ನಾಯನಾರ್ | ತುಲಾ-ಅನುರಾಧಾ | ತಿರುನಿನ್ರವೂರ್. |
| 29. ಮೂರ್ತಿನಾಯನಾರ್ | ಕಟಕ-ಕೃತ್ತಿಕಾ | ಮಧುರೆ |
| 30. ವಾಯಿಲಾರ್—ನಾಯರ್ | ಧನುಸ್ಸು-ರೇವತಿ | ಮೈಲಾಪ್ಪೂರ್. |

ಜಂಗಮ

| | | |
|---|---|---|
| 1. ಅಮರ್ ನೀತಿ ನಾಯನಾರ್ | ಮಿಥುನ-ಪುಷ್ಯ | ಪಳೈಯಾರೈ. |
| 2. ಇಡಙ್ಗಳಿ ನಾಯನಾರ್ | ತುಲಾ-ಕೃತ್ತಿಕಾ | ಕೊಡುಂಬಾಳೂರ್. |
| 3. ಇಯರ್ಪ್ಪಗೈ ನಾಯನಾರ್ | ಧನುಸ್ಸು-ಉತ್ತರೆ | ಕಾವಿರಿಪ್ಪೂಂಪಟ್ಟಿನಂ. |



| ನಾಮಧೇಯ | ಮಾಸ-ನಕ್ಷತ್ರ | ಊರು |
|---|---|---|
| 4. ಇಳೈಯಾನ್‌ಕುಡಿಮಾರ ನಾಯನಾರ್ | ಸಿಂಹ-ಮಖೆ | ಇಳೈಯಾನ್‌ಕುಡಿ. |
| 5. ಏನಾದಿನಾಥ ನಾಯನಾರ್ | ಕನ್ಯಾ-ಉತ್ತರಾಷಾಢಾ | ಎಯಿನನೂರ್. |
| 6. ಕಲಿಕ್ಕಂಬ ನಾಯನಾರ್ | ಮಕರ-ರೇವತಿ | ತಿರುಪ್ಪೆಣ್ಣಾಡಹಂ. |
| 7. ಕಾರೈಕ್ಕಾಲ ಮ್ಮೈಯಾರ್ | ಮೀನ-ಸ್ವಾತಿ | ಕಾರೈಕ್ಕಾಲ್. |
| 8. ನುಳೈಯರ್ | ತುಲಾ-ಪುಷ್ಯ | ನಾಗಪಟ್ಟ. |
| 9. ಶಿರುತ್ತೊಣ್ಡರ್ | ಮೇಷ-ಭರಣಿ | ಶೆಂಗಾಟ್ಟಙ್ಗುಡಿ. |
| 0. ತಿರುಕ್ಕುರಿಪ್ಪುತ್ತೊಣ್ಡರ್ | ಮೇಷ-ಸ್ವಾತಿ | ಕಾಂಚಿನಗರ. |
| 11. ತಿರುನೀಲಕಂಠ ನಾಯನಾರ್ | ಮಕರ-ವಿಶಾಖ | ಚಿದಂಬರ. |
| 12. ನರಸಿಂಗಮುನೈಯರೈಯರ್ | ಕನ್ಯಾ-ಶತಭಿಷ | — |
| 13. ನೇಶ ನಾಯನಾರ್ | ಮೀನ-ರೋಹಿಣಿ | ಕಾಂಪೀಲಿ. |
| 14. ಪುಗಳ್ಚೋಳರ್ | ಕಟಕ-ಕೃತ್ತಿಕೆ | ಉರೈಯೂರ್. |
| 15. ಮಾನಕ್ಕಂಜಾರರ್ | ಧನುಸ್ಸು-ಸ್ವಾತಿ | ಕಂಜಾರೂರ್. |
| 16. ಮುರುಗ ನಾಯನಾರ್ | ವೃಷಭ-ಮೂಲ | ತಿರುಪ್ಪುಗಲೂರ್. |
| 17. ಮುನೈಯಡುವಾರ್ | ಮೀನ-ಪುಷ್ಯ | ತಿರುನೀಡೂರ್. |
| 18. ಮೂರ್ಕ ನಾಯನಾರ್ | ವೃಶ್ಚಿಕ-ಮೂಲ | ತಿರುವೇರ್ಕಾಡು. |
| 19. ಮೆಯ್‌ಪ್ಪೊರುಳ್ ನಾಯನಾರ್ | ವೃಶ್ಚಿಕ-ಉತ್ತರ | ತಿರುಕ್ಕೋಯಿಲೂರ್. |
| 20. ವಿರನ್ಮಿಂಡ ನಾಯನಾರ್ | ಮೇಷ-ಆರ್ದ್ರಾ | ಶೆಂಗುನ್ರೂರ್. |

ಮೇಲೆ ತಿಳಿಸಿರುವವರಲ್ಲದೆ. 'ಸ್ತೋಮ'ವಾಗಿ ಇವರನ್ನು ಪರಿಗಣಿಸುತ್ತಾರೆ. ಸಂತರಲ್ಲಿ: ತಿಲ್ಲೈವಾಳನ್ದಣರ್ (ಚಿದಂಬರ ಕ್ಷೇತ್ರವಾಸಿಗಳಾದ ಬ್ರಹ್ಮವಿತ್ತುಗಳು) ಪೊಯ್ಯಡಿಮೈಯಿಲ್ಲಾ ಪುಲವರ್ / ಹುಸಿದಾಸತ್ವವಿಲ್ಲದ ವಿದ್ವಾಂಸರು) ಸತ್ತರಾಯಪ್ಪಣಿವಾರ್ (ಭಕ್ತರಾಗಿ ನಮಿಪವರು), ಪರಮನೈಯೇಪಾಡುವಾರ್ (ಪರಮೇಶ್ವರನನ್ನೇ ಸ್ತುತಿಸುವವರು) ಶಿತ್ತತ್ತೈಚ್ಚಿವನ್ ಪಾಲೇ ವೈತ್ತಾರ್ (ಚಿತ್ತವನ್ನು ಈಶನಲ್ಲೆ ಇಟ್ಟವರು) ತಿರುವಾರೂರ್ ಪಿರನ್ದಾರ್ (ತಿರುವಾರೂರಲ್ಲಿ ಜನಿಸಿದವರು), ಮುಪ್ಪೋದುಂ ತಿರುಮೇನಿ ತೀಣ್ಡುವಾರ್ (ಮುಕ್ಕಾಲದಲ್ಲೂ ಸಿರಿಮೈ ಮುಟ್ಟುವವರು), ಮುಳುನೀರು ಪೂಶಿಯ ಮುನಿವರ್ (ಪೂರ್ಣವಾಗಿ ವಿಭೂತಿ ಧರಿಸಿದ ಮುನಿಗಳು), ಅಪ್ಪಾಲು ಮಡಿಚ್ಚಾರ್ನ್ದಾರ್ (ಅನಂತರವೂ ಪಾದ ಸೇರಿದವರು).

ಶುಭಮಸ್ತು

# ಸ್ವಾಗತ ಭಾಷಣ

**೪೭ನೆಯ ಕನ್ನಡ ಸಾಹಿತ್ಯ ಸಮ್ಮೇಳನಸಾರಂಭದ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಜಿ. ನಾರಾಯಣ ಅವರು ಡಿಸೆಂಬರ್ ೨೭, ೧೯೭೦ರಂದು ಮಾಡಿದ ಭಾಷಣ.**

೪೭ನೆಯ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರಾದ ಸನ್ಮಾನ್ಯ ಶ್ರೀ ದೇ. ಜವರೇಗೌಡರೇ, ಕನ್ನಡ ಸಾಹಿತ್ಯ ಸಮ್ಮೇಳನದ ಉದ್ಘಾಟಕರಾದ ಪೂಜ್ಯ ಸಿದ್ಧಗಂಗಾ ಮಠಾಧೀಶ್ವರರಾದ ಶ್ರೀ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರೇ ಕನ್ನಡನಾಡಿನ ವಿವಿಧ ಜಿಲ್ಲೆಗಳಿಂದ ಆಗಮಿಸಿದ ಪ್ರತಿನಿಧಿಗಳೇ ಮಹಿಳೆಯರೇ ಮಹನೀಯರೆ.



ನಲವತ್ತೇಳನೆಯ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ತಮ್ಮೆಲ್ಲರನ್ನೂ ಬಹು ಸಂತೋಷದಿಂದ ಸ್ವಾಗತಿಸುತ್ತೇನೆ. ಕನ್ನಡ ಸಾಹಿತ್ಯ ಪರಿಷತ್ತು ಸ್ಥಾಪನೆಯಾದ ವರ್ಷ 1915ರಲ್ಲಿ, ಮರುವರ್ಷ 1916 ರಲ್ಲಿ ಸಾಹಿತ್ಯ ಸಮ್ಮೇಳನಗಳು ಬೆಂಗಳೂರಿನಲ್ಲಿ ನಡೆದಿದ್ದುವು. ಪರಿಷತ್ತಿನ ಚಿನ್ನದ ಹಬ್ಬದ ಈ ವರ್ಷ ಏಕೀಕೃತ ಕನ್ನಡನಾಡಿನ ಈ ರಾಜಧಾನಿಯಲ್ಲಿ ಮತ್ತೆ ಸಾಹಿತ್ಯ ಸಮ್ಮೇಳನ ಸಮಾವೇಶಗೊಳ್ಳುತ್ತಿರುವುದು ತುಂಬ ಉಚಿತವಾಗಿದೆ. ಈ ಐವತ್ತೈದು ವರ್ಷಗಳಲ್ಲಿ ಸಾಹಿತ್ಯ ಪರಿಷತ್ತು ಕನ್ನಡನಾಡಿನ ವಿವಿಧ ಸ್ಥಳಗಳಲ್ಲಿ ಮತ್ತು ಹೊರಗಡೆ ಬೊಂಬಾಯಿ, ಮದರಾಸುಗಳಲ್ಲಿ ಸಮ್ಮೇಳನಗಳನ್ನು ನಡೆಸಿ ಹಿರಿಯ ಸಾಹಿತಿಗಳು ಮತ್ತು ವಿದ್ವಾಂಸರ ಮತ್ತು ಓದುಗ ಕನ್ನಡಿಗರ ನಡುವೆ ಸಂಪರ್ಕವನ್ನು ಕಲ್ಪಿಸಿದೆ. ಸಾಹಿತ್ಯ ಪರಿಷತ್ತು



ಜನ್ಮತಾಳಿದುದು ಕನ್ನಡನಾಡಿನಲ್ಲಿ. ಭಾಷೆಯ ಬಗೆಗೆ ಅಭಿಮಾನ ಮತ್ತು ಕ್ರಿಯಾಶೀಲ ಆಸಕ್ತಿಯನ್ನು ಬೆಳೆಸಬೇಕಾಗಿದ್ದ ಕಾಲದಲ್ಲಿ, ಇಂದಾದರೂ ಕನ್ನಡಿಗರಲ್ಲಿ ಸಂಪೂರ್ಣ ಜಾಗೃತಿಯಾಗಿದೆ ಎನ್ನುವಂತಿಲ್ಲ. ಈ ಸಂಸ್ಥೆ ಸಾಹಿತ್ಯ ಮತ್ತು ಸಂಸ್ಕೃತಿಗಳ ಕ್ಷೇತ್ರಗಳ ಹಿರಿಯರನ್ನೂ ನಾಡಿನ ವಿವಿಧ ಭಾಗಗಳಲ್ಲಿರುವ ಕನ್ನಡಿಗರನ್ನೂ ಸಮೀಪಕ್ಕೆ ತರಲು ಮತ್ತು ಕನ್ನಡಿಗರಲ್ಲಿ ಭಾವೈಕ್ಯವನ್ನು ಬೆಳೆಸಲು ಸಾಹಿತ್ಯ ಸಮ್ಮೇಳನಗಳ ಮೂಲಕ ಶ್ರಮಿಸಿದೆ. ಪ್ರಾರಂಭದ ವರ್ಷಗಳಲ್ಲಿಯೇ ಪರಿಷತ್ತು ನಾಡುನುಡಿಗಳಿಗಾಗಿ ಶ್ರಮಿಸಿದ ಶ್ರೀ ಎಚ್ ವಿ. ನಂಜುಂಡಯ್ಯನವರು, ಶ್ರೀ ಕರ್ಪೂರ ಶ್ರೀನಿವಾಸ ರಾಯರು, ಶ್ರೀ ಕೆ. ಪಿ, ಪುಟ್ಟಣ್ಣಶೆಟ್ಟರು, ಶ್ರೀ ಫ.ಗು, ಹಳಕಟ್ಟಿಯವರು ಇಂತಹ ಹಿರಿಯರನ್ನು ಅಧ್ಯಕ್ಷ ಪೀಠಕ್ಕೆ ಸ್ವಾಗತಿಸಿತು. ಕನ್ನಡಕ್ಕಾಗಿ ದುಡಿದವರಿಗೆ ಕನ್ನಡಿಗರ ಕೃತಜ್ಞತೆಯನ್ನು ಆ ಮೂಲಕ ತೋರುವ ಸಂಪ್ರದಾಯವನ್ನು ರೂಪಿಸಿತು. ಈ ಸಮ್ಮೇಳನಗಳಲ್ಲಿ ಸಮ್ಮೇಳನಾಧ್ಯಕ್ಷರ ಮಾರ್ಗದರ್ಶನದಲ್ಲಿ ಸಾಹಿತ್ಯದ ಬೆಳವಣಿಗೆಗಳ ಸಮೀಕ್ಷೆ ನಡೆದಿದೆ. ಕನ್ನಡಿಗರ ಸಮಸ್ಯೆಗಳ ವಿಶ್ಲೇಷಣೆಯಾಗಿದೆ, ಕನ್ನಡಿಗರ ಬೇಡಿಕೆಗಳಿಗೆ ಸಮರ್ಥ ವಾಣಿ ದೊರೆತಿದೆ. ಸಮ್ಮೇಳನಗಳಲ್ಲಿ ಕವಿಗೋಷ್ಠಿ, ಸಾಹಿತ್ಯಗೋಷ್ಠಿ, ಮಹಿಳಾ ಗೋಷ್ಠಿ, ಏಕೀಕರಣ ಗೋಷ್ಠಿ, ವಿಮರ್ಶೆಗೋಷ್ಠಿ, ಗ್ರಂಥಾಲಯ ಗೋಷ್ಠಿ, ಗಮಕಗೋಷ್ಠಿ ಇಂತಹ ಹಲವಾರು ಗೋಷ್ಠಿಗಳು ಏರ್ಪಟ್ಟು ಸಾಹಿತ್ಯ ಮತ್ತು ಜನಜೀವನದ ಪ್ರಗತಿ — ಪ್ರವೃತ್ತಿಗಳ ಸಮೀಕ್ಷೆಗಳು ನಡೆದಿವೆ. ಕನ್ನಡಿಗರಿಗೆ ಯಾವ ರೀತಿಯಲ್ಲಾದರೂ ಅನ್ಯಾಯವಾಗುವ ಅಪಾಯವಿದ್ದಾಗ ಸಾಹಿತ್ಯ ಪರಿಷತ್ತೂ ಸಾಹಿತ್ಯ ಸಮ್ಮೇಳನಗಳೂ ಗಂಭೀರವಾದ, ತರ್ಕಬದ್ಧವಾದ ವಿರೋಧವನ್ನು ಸೂಚಿಸಿವೆ. ಹೀಗೆ ಸಾಹಿತ್ಯ ಸಮ್ಮೇಳನಗಳನ್ನು ವಿದ್ವಾಂಸರಿಗೂ, ಸಾಹಿತ್ಯವನ್ನು ಸೃಷ್ಟಿಸುವವರಿಗೂ, ಸಾಹಿತ್ಯವನ್ನು ಸವಿಯುವವರಿಗೂ ಉಪಯುಕ್ತವಾಗುವಂತೆ ವ್ಯವಸ್ಥೆಮಾಡಲು ಪ್ರಯತ್ನಿಸಿದ್ದೇವೆ.

ಬಂಧುಗಳೆ, ಬೆಂಗಳೂರಿನಲ್ಲಿ ಶ್ರೀ ಬೆಳ್ಳಾವೆ ವೆಂಕಟನಾರಣಪ್ಪನವರ ಮಂಟಪದಲ್ಲಿ ನಡೆಯುತ್ತಿರುವ ಈ ಸಮ್ಮೇಳನದ ಕಾರ್ಯಕ್ರಮವನ್ನು ಇದೇ ದೃಷ್ಟಿಯಿಂದ ವ್ಯವಸ್ಥೆಮಾಡಿದೆ. ಶ್ರೀ ಬೆಳ್ಳಾವೆ ವೆಂಕಟನಾರಣಪ್ಪನವರು ಅತ್ಯಂತ ಖಚಿತವಾದ ವಿದ್ವತ್ತನ್ನು ಸಂಪಾದಿಸಿದ್ದವರು, ಕನ್ನಡಕ್ಕಾಗಿ ಮತ್ತು ಸಾಹಿತ್ಯ ಪರಿಷತ್ತಿಗಾಗಿ ಶ್ರಮಿಸಿದವರು, ಈ ಸಂಸ್ಥೆಯ ಗೌರವ ಕಾರ್ಯದರ್ಶಿಗಳಾಗಿ, ಕೋಶಾಧ್ಯಕ್ಷರಾಗಿ, ಪರಿಷತ್ಪತ್ರಿಕೆಯ ಸಂಪಾದಕರಾಗಿ ಅವರು ಸಲ್ಲಿಸಿದ ಸೇವೆ ಅಪಾರ. 1919ರಲ್ಲಿಯೇ ಷಟ್ಪದಿ ಕಾವ್ಯಗಳ ಅಭ್ಯಾಸಕ್ಕೆ ಸಹಾಯವಾಗುವಂತಹ ನಿಘಂಟಿನ ರಚನೆಯನ್ನು ಪರಿಷತ್ತು ಕೈಗೊಂಡಾಗ ಆ ಕೆಲಸಕ್ಕೆ ಮಾರ್ಗದರ್ಶಕರಾಗಿ ನಿಂತವರು ಅವರು. ಕನ್ನಡದಲ್ಲಿ ಆಧುನಿಕ ವೈಜ್ಞಾನಿಕ ವಿಷಯಗಳ ನಿರೂಪಣೆ ಸಾಧ್ಯವೇ ಇಲ್ಲ ಎಂದು ಬಹುಮಂದಿ ನಂಬಿದ್ದ ಕಾಲದಲ್ಲಿ "ಜೀವನವಿಜ್ಞಾನ" ಎಂಬ ಶ್ರೇಷ್ಠ ಗ್ರಂಥವನ್ನು ರಚಿಸಿದವರು. ಶ್ರೀ ಕೃಷ್ಣರಾಜ ಪರಿಷನ್ಮಂದಿರ ಕಟ್ಟುವಾಗ ಅವರು ತೋರಿಸಿದ ಶ್ರದ್ಧೆ, ಹಗಲಿರುಳೆನ್ನದೆ ಶ್ರಮಿಸಿದುದು ಇಂದು ಸ್ಮರಣೀಯವಾಗಿವೆ. ಆ ಹಿರಿಯರ ಹೆಸರನ್ನು ತಳೆದ ಈ ಮಂಟಪದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಸುವರ್ಣ ಮಹೋತ್ಸವ ಮತ್ತು ಈ ಸಾಹಿತ್ಯ ಸಮ್ಮೇಳನಗಳು ನಡೆಯುವುದು ನಮ್ಮ ಭಾಗ್ಯ.

ಸಿದ್ಧಗಂಗಾ ಮಠಾಧೀಶ್ವರರಾದ ಶ್ರೀ ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರು ಈ ಸಮ್ಮೇಳನದ ಉದ್ಘಾಟನೆ ನಡೆಸಿಕೊಡಲು ಒಪ್ಪಿ ದಯಮಾಡಿಸಿರುವುದು ನಮ್ಮ ಸುಯೋಗ. ಭಾರತದಲ್ಲಿಯೂ ಅದರ ಭಾಗವಾದ ಕನ್ನಡನಾಡಿನಲ್ಲಿಯೂ ಶತಮಾನಗಳಿಂದ ಧಾರ್ಮಿಕಶಕ್ತಿ ಜೀವಂತ ಪ್ರಭಾವವಾಗಿ ಜನಜೀವನಕ್ಕೆ ಮಾರ್ಗದರ್ಶನಮಾಡಿದೆ. ತಮ್ಮ ವಿದ್ವತ್ತಿನಿಂದಲೂ ತಪಸ್ಸಿನ ಪ್ರಭಾವದಿಂದಲೂ ಜೀವನದ ಏಳು ಬೀಳುಗಳು, ಕಷ್ಟಕಾರ್ಪಣ್ಯಗಳಾಚೆ ನಿಂತು, ವಿವೇಕ ಮತ್ತು ಸಮುಚಿತ್ತಗಳು ಮೇಳೈಸಿದ ಮಾರ್ಗದರ್ಶನವನ್ನು ನಮ್ಮ ದೇಶದ ಯತಿವರರು ಅನುಗ್ರಹಿಸುತ್ತ ಬಂದಿದ್ದಾರೆ. ಪೂಜ್ಯ ಶ್ರೀ ಶ್ರೀ ಶ್ರೀ ಶಿವಕುಮಾರಸ್ವಾಮಿಗಳು ಇಂದು ಇಲ್ಲಿಗೆ ದಯಮಾಡಿಸಿರುವುದು ಆ ಭವ್ಯ ಸಂಪ್ರದಾಯಕ್ಕೆ ಅನುಗುಣವಾಗಿದೆ. ಸ್ವತಃ ಉದ್ದಾಮ

ಪಂಡಿತರೂ, ವಿದ್ವತ್‌ಪಕ್ಷಪಾತಿಗಳೂ, ಆಧುನಿಕ ಕಾಲದ ಅಗತ್ಯಗಳನ್ನು ಗುರುತಿಸಿ ಹಿಂದಿನ ಚರಿತ್ರೆ, ಸಂಸ್ಕೃತಿಯ ಪರಂಪರೆಗಳ ಬೆಳಕಿನಲ್ಲಿ ದಾರಿತೋರಬಲ್ಲ ಹಿರಿಯರು ಅವರು. ಇಂತಹ ಪರಮಪೂಜ್ಯರಾದ ಶ್ರೀ ಶ್ರೀ ಶ್ರೀ ಶಿವಕುಮಾರಸ್ವಾಮಿಗಳಿಗೆ ಸಾಹಿತ್ಯ ಪರಿಷತ್ತಿನ ಪರವಾಗಿಯೂ ತಮ್ಮೆಲ್ಲರ ಪರವಾಗಿಯೂ ಸ್ವಾಗತ ನೀಡುತ್ತೇನೆ.

ಈ ವರ್ಷದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ದಯಮಾಡಿಸಿರುವ ಪ್ರೊ. ದೇ. ಜವರೇಗೌಡರು ಶ್ರೇಷ್ಠ ವಿದ್ವಾಂಸರೆಂದೂ ಉತ್ತಮ ವಿಮರ್ಶಕರೆಂದೂ ಸಮರ್ಥ ಕನ್ನಡ ಸೇನಾನಿ ಎಂದೂ ದಕ್ಷ ಆಡಳಿತಗಾರರೆಂದೂ ಕನ್ನಡಿಗರ ಮೆಚ್ಚಿಗೆ, ಗೌರವಗಳನ್ನು ಪಡೆದಿದ್ದಾರೆ. ಅವರು ಐವತ್ತಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ಅವರ 'ನಂಜುಂಡ ಕವಿ' ಮೆಚ್ಚಿಕೆ–ಮೌಲ್ಯನಿಷ್ಠೆಗಳು ರೂಪಿಸಿದ ಉತ್ತಮ ವಿಮರ್ಶನ ಗ್ರಂಥ. ಧರ್ಮಾಮೃತ ಸಂಗ್ರಹ, ಕಬ್ಬಿಗರ ಕಾವ್ಯ ಜೈಮಿನಿಭಾರತ ಸಂಗ್ರಹ ಇಂತಹ ಕಾವ್ಯಗಳನ್ನು ಸಮರ್ಥವಾಗಿ ಸಂಪಾದಿಸಿ ಕನ್ನಡ ಕಾವ್ಯಪ್ರೇಮಿಗಳಿಗೆ ಉಪಕಾರ ಮಾಡಿದ್ದಾರೆ. ಗೋಪಾಲಕೃಷ್ಣ ಗೋಖಲೆ, ಮೋತಿಲಾಲನೆಹರು ಅವರಂತಹ ರಾಷ್ಟ್ರನಾಯಕರುಆ ಕುವೆಂಪು ಮತ್ತು ತೀ. ನಂ. ಶ್ರೀ. ಅವರಂತಹ ಕನ್ನಡದ ಕಣ್ಮಣಿಗಳು, ಮಾಗಡಿ ಕೆಂಪೇಗೌಡ ಮತ್ತು ಕುಮಾರ ರಾಮರಂತಹ ಕನ್ನಡನಾಡಿನ ಇತಿಹಾಸದ ಕಲಿಗಳು ಇವರೆಲ್ಲರನ್ನೂ ಸರಳ, ಸುಂದರ ಭಾಷೆಯಲ್ಲಿ ಕನ್ನಡಿಗರಿಗೆ ಪರಿಚಯಮಾಡಿಕೊಟ್ಟ ಕೀರ್ತಿ ಇವರದು. ನೆನಪುಕಹಿಯಲ್ಲ, ಹಮ್ಮು-ಬಿಮ್ಮು ಪುನರುತ್ಥಾನ ಮೊದಲಾದ ಕೃತಿಗಳು ಮೂಲದ ಚೇತನವನ್ನು ಬೇರೊಂದು ಭಾಷೆಯಲ್ಲಿ ಸಾಕ್ಷಾತ್ಕಾರ ಮಾಡಿಕೊಡುವ ಅನುವಾದ ಸಾಮರ್ಥ್ಯದ ಸೃಷ್ಟಿ. 'ಹೋರಾಟದ ಬದುಕಿ' ನಂತಹ ಗ್ರಂಥದಲ್ಲಿ ಜನಸಾಮಾನ್ಯದ ವೀರ್ಯವತ್ತಾದ ಭಾಷೆ ಹೊಸ ಅಂದದಿಂದ ಬೆಳಗಿದೆ. ಮಕ್ಕಳಿಗೆ ಅರ್ಥವಾಗುವ, ಸೊಗಸೆನಿಸುವ ಲಲಿತವಾದ ಶೈಲಿಯಲ್ಲಿ ಕವೀಂದ್ರರು, ಆಲ್ಬರ್ಟ್ ಐನ್‌ಸ್ಟೀನ್, ಮೇಡಂ ಕ್ಯೂರಿ ಇಂತಹ ಮಹಾಸಾಧಕರನ್ನು ಚಿತ್ರಿಸುವ ಪುಸ್ತಕಗಳನ್ನು ರಚಿಸಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನಸಂಸ್ಥೆಯ ಮುಖ್ಯಾಧಿಕಾರಿಗಳಾಗಿ ಸಂಪಾದನೆ, ಪರಿಶೋಧನೆ, ಅನುವಾದ ಮೊದಲಾದ ಸಾಹಿತ್ಯದ ಚಟುವಟಿಕೆಗಳು ವ್ಯವಸ್ಥಿತ ರೀತಿಯಲ್ಲಿ ನಡೆಯುವಂತೆ ವಚನ ಸಾಹಿತ್ಯ, ಜಾನಪದ, ಹರಿದಾಸ ಸಾಹಿತ್ಯ ಇವುಗಳ ಅಧ್ಯಯನ ಬೆಳೆಯುವಂತೆ ಕನ್ನಡ ಸಾಹಿತ್ಯದ ಸಂಪತ್ತಿನ ಕನ್ನಡಿಯಾಗಿ ಗ್ರಂಥಸೂಚಿ ಸೃಷ್ಟಿಯಾಗುವಂತೆ ಶ್ರಮಿಸಿದರು ಕನ್ನಡ ವಿಶ್ವಕೋಶದ ಪ್ರಧಾನ ಸಂಪಾದಕರಾಗಿ ಆ ಕೆಲಸಕ್ಕೆ ಹೊಸ ಚೈತನ್ಯ ನೀಡಿದರು. ಕಿರಿಯರ ವಿಶ್ವಕೋಶ 'ಜ್ಞಾನಗಂಗೋತ್ರಿ'ಯ ಸಂಪಾದಕ ಮಂಡಲಿಯ ಅಧ್ಯಕ್ಷರಾಗಿ ಮಾರ್ಗದರ್ಶನ ಮಾಡುತ್ತಿದ್ದಾರೆ. ಕನ್ನಡವನ್ನು ಉಸಿರು, ಕಣ್ಣು ಬೆಳಕು ಎಂದು ಭಾವಿಸಿ ಬಾಳುವ ಈ ಹಿರಿಯ ಸಾಹಿತಿಗಳು-ದಕ್ಷ ಆಡಳಿತಗಾರರು ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳಾದುದು ಕನ್ನಡದ ಎಲ್ಲ ಕ್ಷೇತ್ರಗಳಲ್ಲಿ ಸಂಶೋಧನೆ–ಸಾಧನೆಗಳು ಹೊಸ ಎತ್ತರಗಳನ್ನು ಮುಟ್ಟುವುವೆಂಬುದಕ್ಕೆ ಭರವಸೆ. ರಷ್ಯದ "ಲೆನಿನ್ ಪ್ರಶಸ್ತಿ"ಯನ್ನು ಪಡೆದಿದ್ದಾರೆ. ಇದೀಗ ರಷ್ಯ, ಜರ್ಮನಿ, ಫ್ರಾನ್ಸ್, ಇಂಗ್ಲೆಂಡ್ ಮೊದಲಾದ ಹಲವು ದೇಶಗಳ ಪ್ರವಾಸ ಮಾಡಿ, ಒಂದು ಕೃತಿಯನ್ನು ರಚಿಸಿದ್ದಾರೆ. ಪ್ರವಾಸ ಸಾಹಿತ್ಯಕ್ಕೆ ಅಮೂಲ್ಯ ಕೊಡುಗೆ ನೀಡಿದ್ದಾರೆ. ಈ ಪ್ರವಾಸದಲ್ಲಿ ಅವರು ಪಾಶ್ಚಾತ್ಯ ದೇಶಗಳವರು ತಮ್ಮ ದೇಶಭಾಷೆಗಳನ್ನು ಬೆಳೆಸುವ ಮತ್ತು ಬಳಸುವ ರೀತಿಗಳನ್ನು ಅಭ್ಯಾಸ ಮಾಡಿದ್ದಾರೆ. ಇದರಿಂದ ಕನ್ನಡ ನಾಡಿಗೆ ಅಪಾರ ಲಾಭ. ಸ್ವತಃ ಹಿರಿಯ ಸಾಹಿತಿಗಳು, ಮಾತ್ರವಲ್ಲದೆ ಕನ್ನಡದ ರಕ್ಷಣೆ–ಬೆಳವಣಿಗೆಗೆ ಮುಡಿಪಾದ ಉಜ್ವಲ ಶಕ್ತಿ ಎನ್ನಿಸಿಕೊಂಡ ಪ್ರೊ. ದೇ. ಜವರೇಗೌಡರನ್ನು ಪರಿಷತ್ತಿನ ಪರವಾಗಿ, ತಮ್ಮೆಲ್ಲರ ಪರವಾಗಿ ಹೃತ್ಪೂರ್ವಕವಾಗಿ ಸ್ವಾಗತಿಸುತ್ತೇನೆ.

ಕನ್ನಡ ಬಂಧುಗಳೇ ಈ ಸಮ್ಮೇಳನದ ಅಂಗವಾಗಿ ಕವಿಸಮ್ಮೇಳನ, ಸಾಹಿತ್ಯ ಗೋಷ್ಠಿ, ಗ್ರಂಥಾಲಯಗೋಷ್ಠಿ, ಗಮಕಗೋಷ್ಠಿ, ಮಹಿಳಾಗೋಷ್ಠಿ ಮತ್ತು ಜಿಲ್ಲಾ ಸಮಿತಿಗಳ, ಸಂಘಸಂಸ್ಥೆಗಳ ಮತ್ತು ಹೊರನಾಡ ಕನ್ನಡಿಗರ ಸಭೆ ನಡೆಯಲಿವೆ. ಈ ಕಾರ್ಯಕ್ರಮಗಳಲ್ಲಿ ಭಾಗವಹಿಸಬೇಕೆಂಬ ನಮ್ಮ ಮಮತೆಯ ಕರೆಯನ್ನು ಒಪ್ಪಿ ಕನ್ನಡ ನಾಡಿನ ವಿವಿಧ ಭಾಗಗಳಿಂದ, ಹೊರನಾಡಿನಿಂದ ಸಾಹಿತಿಗಳೂ, ಕನ್ನಡಾಭಿಮಾನಿಗಳೂ ದಯಮಾಡಿಸಿದ್ದಾರೆ. ದೂರವನ್ನೂ ಶ್ರಮವನ್ನೂ ಲೆಕ್ಕಿಸದೆ ನಮ್ಮಲ್ಲಿ ವಿಶ್ವಾಸವಿಟ್ಟು ಸಮ್ಮೇಳನ ಯಶಸ್ವಿಯಾಗುವಂತೆ ಭಾಗವಹಿಸಲು ಬಂದಿದ್ದಾರೆ. ಅವರಿಗೆ ಎಲ್ಲ ಸೌಕರ್ಯಗಳನ್ನೂ ಲೋಪದೋಷಗಳಿಲ್ಲದೆ ಒದಗಿಸಿದ್ದೇವೆ ಎಂದು ನಾವು ಹೇಳುವಂತಿಲ್ಲ. ಆದರೆ ಕನ್ನಡದಲ್ಲಿ ಅಭಿಮಾನ ಪರಿಷತ್ತಿನಲ್ಲಿ ಮಮತೆ ಇವು ಅವರೆಲ್ಲರನ್ನೂ ಇಲ್ಲಿಗೆ ಬರಮಾಡಿವೆ. ತಮ್ಮೆಲ್ಲರ ಅಭಿಮಾನವೇ ಸಾಹಿತ್ಯ ಪರಿಷತ್ತಿಗೆ ರಕ್ಷೆ. ತಾವೆಲ್ಲ ಇಷ್ಟು ಹೆಚ್ಚಿನ ಸಂಖ್ಯೆಯಲ್ಲಿ ಆಗಮಿಸಿರುವುದು ನಮ್ಮನ್ನು ಸಂತೋಷದಿಂದ ಪುಲಕಿತರನ್ನಾಗಿ ಮಾಡಿದೆ. ಉಳಿದ ಲೋಪದೋಷಗಳನ್ನು ಕಡೆಗಾಣಿಸುವ ಔದಾರ್ಯ ತಮ್ಮದು. ಕನ್ನಡದ ಪ್ರಗತಿಗಾಗಿ ಬದ್ಧಕಂಕಣರಾದವರು ತಾವು. ಕನ್ನಡ ನಾಡಿನ ಎಲ್ಲ ಪತ್ರಿಕೆಗಳೂ ನಮಗೆ ಅಸಾಧಾರಣ ಸಹಕಾರವನ್ನು ನೀಡಿವೆ. ಆ ಪತ್ರಿಕೆಗಳ ಪ್ರತಿನಿಧಿಗಳು ಇಂದು ವಿಶ್ವಾಸದಿಂದ ಬಂದಿದ್ದಾರೆ. ಮತ್ತೊಮ್ಮೆ ಶ್ರೀ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರಿಗೂ ಪ್ರೊ. ದೇ. ಜವರೇಗೌಡ ಅವರಿಗೂ ಇಲ್ಲಿಗೆ ವಿಶ್ವಾಸದಿಂದ ದಯಮಾಡಿಸಿದ ಸಾಹಿತಿಗಳಿಗೂ ವಿದ್ವಾಂಸರಿಗೂ ಪತ್ರಿಕಾಕರ್ತರಿಗೂ ಕನ್ನಡದ ಅಭಿಮಾನಿಗಳಿಗೂ ಸ್ವಾಗತ ಬಯಸಿ, ಪ್ರೊ. ಜವರೇಗೌಡರು 47ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪೀಠವನ್ನು ಸ್ವೀಕರಿಸಿ ಕಾರ್ಯಕ್ರಮಗಳನ್ನು ನಡೆಸಿಕೊಡಬೇಕೆಂದೂ, ಶ್ರೀ ಶಿವಕುಮಾರಸ್ವಾಮಿಗಳು ಸಮ್ಮೇಳನದ ಉದ್ಘಾಟನೆಯನ್ನು ನೆರವೇರಿಸಿ ಕೊಡಬೇಕೆಂದು ಪ್ರಾರ್ಥಿಸುತ್ತೇನೆ.

ಸಿರಿಗನ್ನಡಂ ಗೆಲ್ಗೆ !

ಜೈಹಿಂದ್ !



## ಮೆಲುಕ ಹಾಕುವ ಮಾತುಗಳು

ವಿಶೇಷವಾಗಿ ವಿದ್ಯೆಯನ್ನು ಕಲಿತವರು ಸಮಯವರಿತು ಮಾತ ನಾಡುತ್ತಾರೆ; ತಿಳಿಯದವರು ಯಾವಾಗಲೂ ಹರಟೆ ಹೊಡೆಯುತ್ತಲೇ ಇರುವರು.

ಹೇಗೆಂದರೆ, ದಿವ್ಯವಾದ ಮಾವಿನ ರಸವನ್ನು ಕುಡಿದ ಕೋಗಿಲೆ ಸುಮ್ಮನೆ ಇದ್ದರೂ ಕೆಸರಿನ ನೀರನ್ನು ಕುಡಿದ ಕಪ್ಪೆ ವಟವಟ ಎನ್ನುತ್ತಲೇ ಇರುವುದು.

ಮಕ್ಕಳ ವಿಭಾಗ

ನೀತಿ ಕಥೆಗಳು (i)

# ಸಿಂಹದಿಂದ ಪಾರಾದ ಕುದುರೆ

—ಕುಮಾರಿ ವೈ. ಸಿ. ರಾಜೇಶ್ವರಿ

ಕಾಠೇವಾಡದ ದೊಡ್ಡ ಕುದುರೆಯೊಂದು ಸುಖವಾಗಿರೋಣ ಎಂದು ಅಡವಿಗೆ ಓಡಿ ಬಂದಿತು. ಅದು ಮನುಷ್ಯರ ಕೈ ಕೆಳಗೇಕೆ ಇರಬೇಕು ? ಸ್ವತಂತ್ರವಾಗಿ ಮನಬಂದಂತೆ ಮೇದುಕೊಂಡು ಅಡವಿಯಲ್ಲೇ ಏಕೆ ಇರಬಾರದು ? ಎಂದು ಯೋಚಿಸಿಕೊಂಡು ಅಡವಿಗೆ ಓಡಿ ಬಂದಿತ್ತು. ಅಡವಿಗೆ ಓಡಿಬಂದ ಮೇಲೆ ಅಡವಿಯಲ್ಲಿನ ಹಸಿರು ಹುಲ್ಲನ್ನು ಮನಬಂದಂತೆ ಮೇಯುತ್ತಿತ್ತು. ಹಳ್ಳದ ತಿಳಿ ನೀರನ್ನು ಕುಡಿಯುತ್ತಿತ್ತು. ಕಲ್ಲುಬಂಡೆಗಳ ಸಂದಿನಲ್ಲಿ ಮಳೆಗಾಳಿಗಳನ್ನು ತಪ್ಪಿಸಿಕೊಂಡು ಸುಖವಾಗಿಯೇ ಕಾಲ ಕಳೆಯ ಹತ್ತಿತು. ಚೆನ್ನಾಗಿ ಹಸಿರು ಹುಲ್ಲು ಮೇಯುತ್ತಿದ್ದುದರಿಂದ ಬಲಶಾಲಿಯೂ ಆಯಿತು. ಮೈತುಂಬ ಮಾಂಸಖಂಡಗಳು ಬೆಳೆದು ನೋಡಲು ಅಂದವಾಗಿಯೂ ಕಾಣುತ್ತಿತ್ತು. ಕುದುರೆಯೊಮ್ಮೆ ಕೂಗಿದರೆ ಅರಣ್ಯದ ಪ್ರಾಣಿಗಳೆಲ್ಲ ಹೆದರುತ್ತಿದ್ದವು. ಇದರ ಈ ಹೇಷಾರವಕೇಳಿ ಹುಲಿಗಳಿಗೂ ಅಂಜಿಕೆಯಾಗುತ್ತಿತ್ತು. ಕುದುರೆ ಹೀಗೆ ಹೇಷಾರವ ಮಾಡುವುದನ್ನು ಕೇಳಿದ ನರಿಯೊಂದು ಕುದುರೆಯ ಸಮೀಪಕ್ಕೆ ಬಂದು ಅದರ ಮೈಕಟ್ಟುನೋಡಿ "ಅಬ್ಬಾ! ಎಷ್ಟು ದಷ್ಟಪುಷ್ಟವಾಗಿ ಬೆಳೆದಿದೆ ಈ ಕುದುರೆ! ಇದನ್ನು ಏನಾದರೂಮಾಡಿ ಕೊಲ್ಲಬೇಕು" ಎಂದು ಯೋಚಿಸಿತು. ನರಿಯು ಸಿಂಹದ ಬಳಿಗೆ ಬಂದು 'ಸ್ವಾಮಿ ಮೃಗರಾಜರೇ, ನಮ್ಮ ಅಡವಿಗೆ ಒಂದು ಊರ ಕುದುರೆ ಬಂದಿದೆ. ಅದೇನು ಸಾಮಾನ್ಯ ಕುದುರೆಯಲ್ಲ. ದೇವೇಂದ್ರನು ಹತ್ತುವ ಕುದುರೆಗೂ ಮಿಗಿಲಾಗಿದೆ. ಗಾಳಿಗಿಂತ ವೇಗವಾಗಿ ಓಡುತ್ತದೆ. ಒಮ್ಮೆ ಕೂಗಿದರೆ ಸಾಕು—ಆ ಹೇಷಾರವಕೇಳಿ ಅರಣ್ಯದ ಪ್ರಾಣಿಗಳೆಲ್ಲ ಎದೆಯೊಡೆದುಕೊಳ್ಳುತ್ತವೆ. ಅದನ್ನು ಏನಾದರೂ ಮಾಡಿ ನೀನು ಕೊಂದುಹಾಕಿದರೆ ನಮಗೆಲ್ಲರಿಗೂ ತಿಂಗಳ ಆಹಾರವಾಗುತ್ತದೆ. ಅಷ್ಟೊಂದು ಮಾಂಸಖಂಡಗಳು ಬೆಳೆದಿವೆ ಎಂದು ವರ್ಣಿಸಿತು.



ನರಿಯ ವರ್ಣನೆ ಕೇಳಿ ಸಿಂಹದ ಬಾಯಲ್ಲಿ ನೀರೂರಿತು. ಏನಾದರೂಮಾಡಿ ಆ ಕುದುರೆಯ ಬಿಸಿರಕ್ತ ಕುಡಿಯಬೇಕೆಂದು ಯೋಚಿಸಿತು. ನರಿಯನ್ನು ಕುರಿತು "ಎಲೈನರಿಯೇ, ಅಂಥ ಕುದುರೆಯನ್ನು ತೋರಿಸುನಡೆ ಇದು ಯಾವ ಮಹಾಕಾರ್ಯ ಬಲವಾದ ಆನೆಗಳನ್ನೇ ಸೀಳುವ ನನಗೆ ಆ ಕ್ಷುದ್ರ ಕುದುರೆ ಯಾವ ಸಾಟಿ" ಎಂದಿತು. "ಸ್ವಾಮಿ ತಾವು ಆ ಕುದುರೆಯನ್ನು ಕ್ಷುದ್ರವೆಂದು ತಿಳಿಯಬೇಡಿ. ಅದನ್ನು ನೋಡಿದರೆ ತಮಗೇ ಗೊತ್ತಾಗುತ್ತದೆ. ಅದರ ಓಟ ನಿಮ್ಮ ಓಟಕ್ಕಿಂತಲೂ ಹೆಚ್ಚು. ಅದರ ಕಾಲ ಕಸುವು ಬಹಳ. ಅದನ್ನು ಒಳ್ಳೆಯ ಮಾತಿನಿಂದಲೇ ಗೋಣು ಮುರಿಯಬೇಕು. ನೀವು ಗರ್ಜನೆ ಮಾಡದಂತೆ ಒಳ್ಳೆಯ ಮಾತಿನಿಂದಲೇ ಅದರ ಸ್ನೇಹಮಾಡಿ ಒಮ್ಮಲೆ ಅದರ ಕುತ್ತಿಗೆ ಹಿಡಿದು ಕೊಲ್ಲಿರಿ" ಎಂದು ಬುದ್ಧಿ ಹೇಳಿತು.

ನರಿಯ ಮಾತನ್ನು ಸಿಂಹವೂ ಒಪ್ಪಿಕೊಂಡು "ನಡೆ ತೋರಿಸು" ಅದನ್ನು ನೋಡಿಕೊಳ್ಳುತ್ತೇನೆ ಎಂದು ನರಿಯೊಡನೆ ಸಿಂಹ, ಕುದುರೆಯು ವಾಸಿಸುವ ಕಾಡಿನ ಸಮೀಪಕ್ಕೆ ಬಂದಿತು. ಕಾಡಿನಲ್ಲಿದ್ದ ಕುದುರೆ ಒಮ್ಮೆ ಹೇಕರಿಸಿತು. ಕುದುರೆಯ ಈ ಹೇಷಾರವನ್ನು ಕೇಳಿ ಒಮ್ಮಲೆ ಸಿಂಹದ ಎದೆ ನಡುಗಿತು. ನರಿಯು ಕೇಳಿದಿರಾ, ಬಡ ಕುದುರೆಯ ಕೂಗನ್ನು ? ಆದ್ದರಿಂದಲೇ ತಮಗೆ ಹೇಳಿದುದು. ನೀವು ಆ ಕುದುರೆಯ ಎದುರಿಗೆ ಹೋಗಿ ಒಳ್ಳೆಯ ಮಾತಿನಿಂದಲೇ ಅದನ್ನು ನಂಬಿಸಿ ಕೊಲ್ಲಿರಿ. ಇಲ್ಲದಿದ್ದರೆ ಆ ಬೇಟೆ ದಕ್ಕುವುದಿಲ್ಲ''. ಇತ್ಯಾದಿಯಾಗಿ ಸಿಂಹಕ್ಕೆ ಬುದ್ಧಿ ಹೇಳುತ್ತಲೆ ಕರೆದೊಯ್ಯಿತು. ''ಕುದುರೆಯ ಸಮೀಪಕ್ಕೆ ಬಂದವು.

ಸುಖವಾಗಿ ಕಲ್ಲುಬಂಡೆಯ ಪಕ್ಕದಲ್ಲಿ ನಿಂತಿದ್ದ ಕುದುರೆಯ ಎದುರಿಗೆ ನರಿ ಸಿಂಹ ಎರಡೂ ಬರುತ್ತಿರುವುದು ಕಂಡಿತು. ಕುದುರೆಗೆ ತುಂಬಾ ದಿಗಿಲಾಯಿತು. ಓಹೊ! ಈ ದುಷ್ಟನರಿ ಸಿಂಹವನ್ನು, ನನ್ನನ್ನು ಕೊಲ್ಲಲು ಕರೆತಂದಿದೆ. ಈ ಸಮಯದಲ್ಲಿ ನಾನು ಓಡಿದರೆ ಹೆದರಿ ಓಡುತ್ತಾನೆಂದು ತಿಳಿದ ಸಿಂಹ ಬೆನ್ನಟ್ಟಿಕೊಂಡೇ ಕೊಲ್ಲುತ್ತದೆ. ಏನಾದರೂ ಉಪಾಯಮಾಡಿ ಈ ಸಿಂಹವನ್ನೇ ಕೊಲ್ಲಬೇಕೆಂದು ಧೈರ್ಯತಂದುಕೊಂಡಿತು ಸಿಂಹದ ಎದುರಿಗೆ ಕುದುರೆಯು ಕುಂಟುತ್ತಾ ನಾಲ್ಕು ಹೆಜ್ಜೆ ಬಂದು. "ನಮಸ್ಕಾರ, ಮೃಗರಾಜರಿಗೆ ದಯಮಾಡಿಸಬೇಕು. ಒಳ್ಳೆಯ ಹೊತ್ತಿಗೆ ಬಂದಿರಿ" ಎಂದಿತು. ಸಿಂಹಕ್ಕೆ ಇನ್ನೂ ದಿಗಿಲಾಯಿತು. ಕುಂಟುತ್ತ ಬರುವ ಕುದುರೆಯನ್ನು ಕಂಡು ಕಾಲಿಗೆ ಏನೋ ನೋವಾಗಿರಬೇಕೆಂದುಕೊಂಡಿತು. ಆಗ ಸಿಂಹವು.

"ಏನು ತುರಂಗರಾಯರೇ ಏಕೋ ಕುಂಟುವಿರಲ್ಲ. ಏನು ಕಾರಣ?' ಎಂದಿತು. ಆಗ ಕುದುರೆ "ಮಹಾರಾಜರೇ, ನನ್ನ ಅಂಗಾಲಿನಲ್ಲಿ ದೊಡ್ಡ ಮುಳ್ಳೊಂದು ನಟ್ಟಿದೆ. ಈ ಅರಣ್ಯದ ಎಲ್ಲ ಪ್ರಾಣಿಗಳು ಅದನ್ನು ತೆಗೆಯಲು ಪ್ರಯತ್ನಿಸಿದವು. ಸಾಧ್ಯವಾಗಲಿಲ್ಲ. ಈಗ ಒಂದು ನರಿ ಇಲ್ಲಿಗೆ ಬಂದಿತ್ತು ಅದು ಹೀಗೆ ಹೇಳಿತು— "ಈ ಅರಣ್ಯದಲ್ಲಿ ಸಿಂಹರಾಜನಿದ್ದಾನೆ. ಅವನ ಉಗುರು ಬಹು ಚೂಪಾಗಿವೆ. ಅವನೇ ಈ ಮುಳ್ಳನ್ನು ತೆಗೆಯಲು ಸಮರ್ಥ ಎಂದು ಹೇಳಿತು. ನಾನೇ ತಮ್ಮ ಹತ್ತಿರ ಬರಬೇಕೆಂದು ಮಾಡಿದ್ದೆನು ಅಕಸ್ಮಾತ್ ತಾವೇ ಇಲ್ಲಿಗೆ ದಯಮಾಡಿಸಿದ್ದೀರಿ. ನನ್ನ ಅಂಗಾಲ ಮುಳ್ಳನ್ನು ತೆಗೆದು ಉಪಕಾರ ಮಾಡಬಲ್ಲಿರಾ?" ಎಂದು ಬೇಡಿಕೊಳ್ಳುವವರಂತೆ ನುಡಿಯಿತು.

ಕುದುರೆಯ ಅಂಗಾಲಿಗೆ ಮುಳ್ಳು ನಡುವುದು ಸಾಧ್ಯವೇ ಇಲ್ಲ ಎಂದು ನರಿಗೆ ಗೊತ್ತಿತ್ತು. ಆದರೂ ಸಿಂಹಕ್ಕೆ ಬಾಯಿಬಿಟ್ಟು ಹೇಳುವಂತಿರಲಿಲ್ಲ. ಸಿಂಹವು ಕುದುರೆಯ ಮಾತು ಕೇಳಿ "ಅದಕ್ಕೇನಂತೆ ಅಶ್ವರಾಜರೇ ನಿಮ್ಮ ಕಾಲಲ್ಲಿ ಮುಳ್ಳು ನಟ್ಟರೆ ನಾವು ತೆಗೆಯದಿದ್ದರೆ ಹೇಗೆ ? ಸ್ನೇಹಕ್ಕೆ ಸ್ನೇಹ. ನೀವೇನು ಸಾಮಾನ್ಯರಲ್ಲ. ರಾಜಮಹಾರಾಜರಿಂದ ಪೂಜೆಗೊಳ್ಳುವವರು. ದೊಡ್ಡ ವಂಶದವರು. ನಿಮ್ಮ ಕಾಲ ಮುಳ್ಳು ತೆಗೆಯುವುದು ನಮಗೆ ಅಪಮಾನವಲ್ಲ. ಎಲ್ಲಿ ನಟ್ಟಿದೆ ಎಂದಿತು, "ಹಿಂಗಾಲಿನಲ್ಲಿ ನಟ್ಟಿದೆ" ಎಂದಿತು ಕುದುರೆ. ನರಿಯ ಎದೆ ಜಲ್ ಎಂದಿತು. ಕುದುರೆಯ ಹಿಂದೆ ಹೋಗಬಾರದು ಎಂದು ಗೊತ್ತಿತ್ತು. ಸಿಂಹಕ್ಕೆ ಬೇಡ ಎಂದು ಹೇಳುವಂತೆಯೂ ಇರಲಿಲ್ಲ. ಸಿಂಹವು ಕುದುರೆಯ ಆಕಾರ, ಬೆಳೆದ ಮಾಂಸಖಂಡನೋಡಿ ಬಹು ಆಸೆಯಾಗಿತ್ತು. ನಾಲಿಗೆ ಚಪ್ಪರಿಸುತ್ತ ಕುದುರೆಯ ಹಿಂಗಾಲ ಬಳಿ ಮುಳ್ಳು ನೋಡುವವರಂತೆ ಹೋಯಿತು. ಕುದುರೆ ಒಮ್ಮೆಲೆ ಬಲವಾಗಿ ತನ್ನ ಎರಡೂ ಹಿಂಗಾಲುಗಳನ್ನು ಹಾರಿಸಿ ಜಾಡಿಸಿ ಒದ್ದಿತು. ಸಿಂಹದ ಹಲ್ಲುಗಳೆಲ್ಲ ಮುರಿದವು ಎದೆಗೆ ಬಲವಾದ ಪೆಟ್ಟುಬಿದ್ದು ಒದ್ದಾಡಹತ್ತಿತು. ಇದೇ ಸಮಯವೆಂದು ನರಿಗೂ ಬಲವಾಗಿ ಒದ್ದಿತು. ನರಿಯೂ ಅಯ್ಯೋ ಸತ್ತೆನೆಂದು ನಾಲ್ಕುಮಾರು ದೂರ ಹೋಗಿ ಬಿದ್ದು ಒದ್ದಾಡಹತ್ತಿತು. ಇದೇ ಸಮಯವೆಂದು ಕುದುರೆ ವೇಗವಾಗಿ ಓಡಿಹೋಯಿತು. ಸಂಕಟದಲ್ಲಿ ಈ ಯೋಚನೆ ಮಾಡದಿದ್ದರೆ ಕುದುರೆ ಸಿಂಹದ ಬಾಯಿಗೆ ತುತ್ತಾಗಬೇಕಾಗಿತ್ತು.

# ಋಷಿ ಮತ್ತು ಇಲಿ

—ಕುಮಾರಿ ವೈ. ಸಿ. ಸಂಗನೇಶ್ವರಿ



ಒಂದು ಅಡವಿಯಲ್ಲಿ ಒಂದು ದೊಡ್ಡ ಆಲದಮರವಿತ್ತು. ದಟ್ಟವಾದ ನೆಳಲು ಮರದ ಬುಡದಲ್ಲಿ ಬಿದ್ದಿತ್ತು. ಪಕ್ಕದಲ್ಲಿಯೆ ಚಿಕ್ಕ ಹಳ್ಳವೊಂದು ಹರಿಯುತ್ತಿತ್ತು. ನೀರೂ ನೆಳಲೂ ಚೆನ್ನಾಗಿದ್ದುದರಿಂದ ಒಬ್ಬ ಋಷಿ ಅಲ್ಲಿಗೆ ಬಂದು ನೆಳಲಲ್ಲಿ ದೇವರ ಧ್ಯಾನಮಾಡುತ್ತ ಕಾಲ ಕಳೆಯುತ್ತಿದ್ದನು.

ಒಂದು ದಿನ ಒಂದು ಕಾಗೆ ಹಸಿದು ಎಲ್ಲಿಂದಲೋ ಒಂದು ಇಲಿಯನ್ನು ಬಾಯಲ್ಲಿ ಕಚ್ಚಿಕೊಂಡು ಬಂದಿತು. ಅದು ಆ ಮರದ ಮೇಲೆ ಕುಳಿತುಕೊಂಡು ಅದನ್ನು ತಿನ್ನಲು ಯೋಚಿಸಿತ್ತು. ಮರದ ಒಂದು ಕೊಂಬೆಯ ಮೇಲೆ ಬಂದು ಕುಳಿತುಕೊಂಡಿತು. ಕಚ್ಚಿಕೊಂಡು ಬಂದ ಇಲಿ ಇನ್ನೂ ಸತ್ತಿದ್ದಿಲ್ಲ. ಅರ್ಧ ಜೀವವಿತ್ತು. ಇನ್ನೇನು ತಿನ್ನಬೇಕೆಂದು ರೆಂಬೆಯಮೇಲೆ ಇಲಿಯನ್ನು ಬಿಟ್ಟಿತು. ಇಲಿಯು ಅಕಸ್ಮಾತ್ ರೆಂಬೆಯಿಂದ ಜಾರಿ ನೆಲಕ್ಕೆ ದೊಪ್ಪೆಂದು ಬಿದ್ದುಬಿಟ್ಟಿತು. ಅದು ಕೆಳಗೆ ಕುಳಿತ ಋಷಿಯ ಎದುರಿನಲ್ಲೇ ಬಿದ್ದಿತು. ಋಷಿ ಕಣ್ಣು ಬಿಟ್ಟು ನೋಡಿದನು. ಇಲಿ ಒದ್ದಾಡುತ್ತಿತ್ತು. ಮೈಯೆಲ್ಲ ರಕ್ತವಾಗಿತ್ತು. ಬಿದ್ದ ಪೆಟ್ಟಿನಿಂದ ಮೈಯೆಲ್ಲ ನೋವಾಗಿತ್ತು, ಚಿವ್, ಚಿವ್ ಎಂದು ಕಿರಚುತ್ತಿತ್ತು.

ಹೀಗೆ ಸಂಕಟಪಡುತ್ತಿದ್ದ ಇಲಿಯನ್ನು ನೋಡಿ ಋಷಿಯ ಮನಸ್ಸು ಕರಗಿತು. ಅದನ್ನು ಕೈಗೆ ತೆಗೆದುಕೊಂಡು ಮೈಗೆ ಹತ್ತಿದ್ದ ರಕ್ತವನು ಒರೆಸಿ, ನೀರಿನಿಂದ ತೊಳೆದು ಔಷಧಿಯನ್ನು ಹಚ್ಚಿ ಆರೈಕೆ ಮಾಡಿದನು. ಋಷಿಯು ಮಾಡಿದ ಆರೈಕೆಯಿಂದ ನಾಲ್ಕಾರು ದಿನದಲ್ಲಿ ಇಲಿ ಮತ್ತೆ ಮೊದಲಿನಂತೆ ಆಯಿತು. ಇಲಿ ಬದುಕಿಕೊಂಡುದನ್ನು ನೋಡಿ ಋಷಿಗೂ ಸಂತೋಷವಾಯಿತು. ಇಲಿ ಋಷಿಯ ಸ್ನೇಹವನ್ನು ಬಿಡಲಾರದೆ, ಅಲ್ಲಿಯೆ ಒಂದು ಬಿಲವನ್ನು ತೋಡಿಕೊಂಡು ವಾಸಿಸಹತ್ತಿತ್ತು. ದಿನಾಲು ಋಷಿ ತಿಂದು ಉಳಿದ ಚೂರು ಚೂರು ಗಡ್ಡೆಗೆಣಸುಗಳನ್ನು ಇಲಿ ತಿನ್ನುತ್ತಿತ್ತು. ಮತ್ತು ಅಕ್ಕ ಪಕ್ಕದಲ್ಲಿ ಹೋಗಿ ಮೇದುಕೊಂಡು ಬರುತ್ತಿತ್ತು. ಊರಿಗಿಂತ ಈ ಅಡವಿಯಲ್ಲಿಯೇ ಸುಖವಾಗಿದೆ ಎಂದುಕೊಂಡಿತು. ಕಾಗೆಗೆ ಮಾತ್ರ ಇಲಿಯ ಮೇಲೆ ಸಿಟ್ಟು ಇದ್ದೇ ಇತ್ತು. ಏನಾದರೂಮಾಡಿ ಈ ಇಲಿಯನ್ನು



ಹಿಡಿದು ತಿನ್ನಬೇಕೆಂದು ದಿನಾಲು ಬಂದು ಹೋಗುತ್ತಿತ್ತು. ಇಲಿಯು ಕಾಗೆ ಬರುವೊಡನೆ ಓಡಿ ಬಂದು ಬಿಲವನ್ನು ಹೋಗುತ್ತಿತ್ತು. ಇಲಿಗೆ ಕಾಗೆಯ ಭಯ ಹೆಚ್ಚಾಯಿತು. ಕಾಗೆಗೆ ಇಲಿಯ ಮೇಲಿನ ಆಶೆ ಹೆಚ್ಚಾಯಿತು. ಕಾಗೆ ಊರಿಗೆ ಬಂದ ಒಂದು ಬೆಕ್ಕಿನ ಹತ್ತಿರ ಇಲಿ ತನ್ನ ಕೈಯಿಂದ ತಪ್ಪಿಸಿಕೊಂಡು ಓಡಿ ಹೋಗಿ ಋಷಿಯ ಬೆನ್ನು ಬಿದ್ದ ವಿಚಾರ ತಿಳಿಸಿತು, ಬೆಕ್ಕು ಕಾಗೆಗೆ "ನಡೆ ಆ ಇಲಿ ಎಲ್ಲಿ ಹೊಕ್ಕರೂ ಬಿಡದೆ ಹಿಡಿದು ನಿನಗೆ ಕೊಡುತ್ತೇನೆ. ತಿನ್ನುವಿಯಂತೆ ಎಂದು ಅದೂ ಅಡವಿಗೆ ಬಂದಿತು ಕಾಗೆ ಮತ್ತು ಬೆಕ್ಕು ಎರಡೂ ಇಲಿಯನ್ನು ಹಿಡಿಯಲು ಬಹಳ ಪ್ರಯತ್ನ ಪಟ್ಟವು. ಇಲಿಮಾತ್ರ ಅವುಗಳ ಕೈಗೆ ಸಿಗದಂತೆ ಬಿಲವನ್ನು ಹೊಕ್ಕುಬಿಡುತ್ತಿತ್ತು. ಆದರೆ ಒಬ್ಬ ವೈರಿಯ ಜೊತೆಗೆ ಇನ್ನೊಬ್ಬ ವೈರಿ ಸೇರಿಕೊಂಡನಲ್ಲಾ! ಎಂಬ ಭಯ ಹೆಚ್ಚಾಯಿತು.

ಒಂದು ದಿನ ಋಷಿಯ ಹತ್ತಿರ ಇಲಿ ಕೈ ಮುಗಿದು ನಿಂತುಕೊಂಡು ಹೇಳಿತು ಸ್ವಾಮಿ, ಕಷ್ಟಕಾಲದಲ್ಲಿ ನನ್ನನ್ನು ಆರೈಕೆಮಾಡಿ ಉದ್ಧಾರ ಮಾಡಿದ್ದೀರಿ. ಈಗ ನನಗೆ ವೈರಿಗಳ ಕಾಟ ಹೆಚ್ಚಾಗಿದೆ. ದಿನಾಲು ಭಯದಿಂದಲೇ ಜೀವಿಸಬೇಕಾಗಿದೆ. ನನಗೆ ಈ ಭಯ ತಪ್ಪಿಸಿ ಸುಖವಾಗಿ ಬಾಳುವಂತೆ ಮಾಡಿರಿ " ಎಂದು ಬೇಡಿಕೊಂಡಿತು.

ಋಷಿಯು ಇಲಿಯ ಈ ದೈನ್ಯದ ಮಾತುಕೇಳಿ 'ನಿನ್ನನ್ನು ಏನು ಮಾಡಲಿ ಹೇಳು' ಎಂದನು. "ಸ್ವಾಮಿ, ನನ್ನನ್ನು ಹುಲಿಯನ್ನಾಗಿ ಮಾಡಿಬಿಡಿರಿ. ಆಗ ಕಾಗೆಯ ಭಯವೂ ಇಲ್ಲ, ಈ ಹಾಳು ಬೆಕ್ಕಿನ ಭಯವೂ ಇಲ್ಲವಾದಂತಾಗುತ್ತದೆ. ನನ್ನನ್ನು ನೋಡಿ ಅವೇ ಭಯಪಟ್ಟುಕೊಂಡು ಓಡಿಹೋಗುತ್ತವ.' ಎಂದಿತು.

ಆಗ ಋಷಿ ಇಲಿಯನ್ನು ಹುಲಿಯನ್ನಾಗಿ ಮಾಡಿದನು. ಸರಿ ಈಗ ಇಲಿ ಹುಲಿಯಾಗಿ ಹೋಯಿತು. ಬೇರೆಯವರ ಹೆದರಿಕೆ ತಪ್ಪಿತು. ಆಶ್ರಮದ ಸುತ್ತ ಮುತ್ತ ತಿರುಗಾಡುತ್ತ ಮನಬಂದಂತೆ ಕೂಗಾಡುತ್ತ ಸುಖವಾಗಿರ ಹತ್ತಿತು. ಅಡವಿಯಲ್ಲಿ ಹೋಗಿ ಬೇಟೆಯಾಡಿ ಪ್ರಾಣಿಗಳನ್ನು ತಿಂದು ಬಂದು ಋಷಿಯ ಹತ್ತಿರವೇ ಮಲಗುತ್ತಿತ್ತು. ಮೈಕೈತುಂಬಿ ದಪ್ಪನಾಗಿಯೂ ಬಿಟ್ಟಿತು.

ಋಷಿಯ ಹತ್ತಿರ ದಿನಾಲು ಜನಗಳು ಬಂದು ಹೋಗುತ್ತಿದ್ದರು. ಅವರು ಹುಲಿಯ ಕಡೆಗೆ ಬೆರಳು ಮಾಡಿ ತೋರಿಸುತ್ತ ಈ ಹುಲಿ ಮೊದಲು ಇಲಿಯಾಗಿತ್ತು. ಋಷಿಗಳ ಕರುಣೆಯಿಂದ ಹುಲಿಯಾಗಿದೆ, ಎಂದು ಮಾತನಾಡಿಕೊಳ್ಳುತ್ತಿದ್ದರು. ಹುಲಿಗೆ ಈ ಮಾತು ಕೇಳಿ ಸಿಟ್ಟು ಬರುತ್ತಿತ್ತು. ದಿನೇ ದಿನೇ ಜನಗಳು ಹೀಗೆ ಮಾತನಾಡುವುದನ್ನು ಬಿಡಲೇ ಇಲ್ಲ. ಬಂದಬಂದವರೆಲ್ಲ. 'ಇಲಿ ಹುಲಿಯಾಗಿದೆ' ಎಂದು ಹೇಳುತ್ತಲೇ ಇದ್ದರು. ಹುಲಿಗೆ ತುಂಬಾ ಅಪಮಾನವಾಗುತ್ತಿತ್ತು.

ಆಗ ಹುಲಿಯು ಹೀಗೆ ಯೋಚಿಸಿತು "ಈ ಋಷಿಯಿರುವವರೆಗೆ ಜನರು ಬಂದು ಹೋಗುತ್ತಾರೆ. ಜನರು ದಿನಾಲು ನನ್ನನ್ನು ತಿರಸ್ಕಾರ ಮಾಡುತ್ತಾರೆ. ಈ ಋಷಿಯನ್ನೇ ಮುಗಿಸಿಬಿಟ್ಟರೆ ಜನರಾರೂ ಬರುವುದಿಲ್ಲ ನನ್ನನ್ನು ತಿರಸ್ಕಾರ ಮಾಡುವುದೂ ಇಲ್ಲ." ಎಂದು ಋಷಿಯನ್ನು ತಿನ್ನಲು ಮನಸ್ಸುಮಾಡಿ ಒಮ್ಮೆಲೆ ಋಷಿಯ ಮೇಲೆ ಹಾರಲು ಪ್ರಯತ್ನಿಸಿತು. ಋಷಿಗೆ ಈ ದುಷ್ಟಪ್ರಾಣಿಯ ಮನಸ್ಸು ಅರಿವಾಯಿತು, 'ಎಲಾ! ನಾನು ಮಾಡಿದ ಉಪಕಾರವನ್ನು ಲೆಕ್ಕಿಸದೆ ಈ ದುಷ್ಟ ಪ್ರಾಣಿಯು ನನ್ನನ್ನೇ ತಿನ್ನಲು ಕೆಟ್ಟ ಯೋಚನೆ ಮಾಡಿದೆ' ಎಂದು ದಿಟ್ಟಿಸಿನೋಡಿದನು, ಒಮ್ಮೆಲೆ ಹುಲಿ ಇಲಿಯಾಗಿಹೋಯಿತು. ಇಲಿ ತನ್ನ ಮೂರ್ಖತನಕ್ಕೆ ನಾಚಿಹೋಯಿತು. ವ್ಯಸನದಿಂದ ಅಲ್ಲಿಯೇ ದುಃಖಪಡುತ್ತ ಕುಳಿತುಕೊಂಡಿತು. ಹಿಂದಿನಿಂದ ಕಾಗೆಯು ಒಮ್ಮೆಲೆ ಅದರ ಮೇಲೆ ಬಿದ್ದು ಕಚ್ಚಿಕೊಂಡು ಹಾರಿಹೋಗಿ ಮರದಮೇಲೆ ಕುಳಿತು ತಿಂದುಹಾಕಿತು. ಉಪಕಾರ ಮಾಡಿದವರನ್ನು ಮರೆಯಬಾರದು. ಅವರನ್ನು ನಾಶಮಾಡಲು ಯತ್ನಿಸಬಾರದು.

# ಪುಣ್ಯವಂತ ಬ್ರಾಹ್ಮಣ

—ವೈ. ಎಂ. ವಿರೂಪಾಕ್ಷಪ್ಪ, ಹುಬ್ಬಳ್ಳಿ

ಸಾಲಿಗ್ರಾಮವೆಂಬ ಊರಿನಲ್ಲಿ ಒಬ್ಬ ಬ್ರಾಹ್ಮಣನಿದ್ದನು. ಅವನು ಬಹು ಧರ್ಮಿಷ್ಟ; ಸತ್ಯವಂತ; ಎಂದೂ ಪರರಿಗೆ ಕೇಡು ಮಾಡಿದವನಲ್ಲ. ಗುರುಹಿರಿಯರಲ್ಲಿ ದೇವರಲ್ಲಿ ಭಕ್ತಿಯುಳ್ಳವನು. ಹತ್ತಿಪ್ಪತ್ತು ಯಜ್ಞಗಳನ್ನು ಮಾಡಿ ಪುಣ್ಯ ಸಂಪಾದನೆ ಮಾಡಿದ್ದನು. ಯಜ್ಞವೆಂದರೆ ದೇವತೆಗಳಿಗೆ ತೃಪ್ತಿಯಾಗುವಂತೆ ಮಾಡುವ ಪೂಜೆ. ಅವನು ಯಜ್ಞಯಾಗಾದಿಗಳನ್ನು ಮಾಡಿದ್ದರಿಂದಲೇ ಜನರೆಲ್ಲ ಪುಣ್ಯವಂತನೆಂದು ಕರೆಯುತ್ತಿದ್ದರು. ಆದರೂ ಚೆನ್ನಾಗಿ ದುಡಿಯುತ್ತಿದ್ದನು. ದುಡಿದುದು ಹೊಟ್ಟೆಗೆ ಸಾಲುತ್ತಿರಲಿಲ್ಲ. ನಾಲ್ಕೈದು ಚಿಕ್ಕ ಚಿಕ್ಕ ಮಕ್ಕಳು. ಹೆಂಡತಿ ಇವರೆಲ್ಲ ಮನೆಯಲ್ಲಿದ್ದರು. ಬಡತನವೂ ಬಹಳವಾಗಿತ್ತು. ಪುಣ್ಯವಂತನೆಂದು ಹೆಸರುಗಳಿಸಿದ್ದರೂ ಕಡುಬಡವನಾಗಿದ್ದರಿಂದ ಎಷ್ಟೋ ದಿನ ಉಪವಾಸ ಬೀಳಬೇಕಾಗಿತ್ತು. ಹೆಂಡತಿ ಮಕ್ಕಳು ಮರಿಗಳ ಕಷ್ಟ ಹೇಳತೀರದು. ಊಟಮಾಡಲು ಸಾಕಷ್ಟು ಅನ್ನವಿರಲಿಲ್ಲ. ಉಡಲು ಸಾಕಷ್ಟು ಬಟ್ಟೆಯಿರಲಿಲ್ಲ. ತೊಡಲು ಆಭರಣಗಳಂತೂ ಮೊದಲೇ ಇರಲಿಲ್ಲ.

ಒಂದು ವರ್ಷ ಮಳೆಗಾಲದಲ್ಲಿ ದುಡಿಮೆ ಎಲ್ಲೂ ಸಿಗಲಿಲ್ಲ. ಮನೆಯಲ್ಲಿ ಆಹಾರಕ್ಕೆ ತುಂಬಾ



ತೊಂದರೆಯಾಯಿತು. ಎರಡು-ಮೂರು ದಿನ ಉಪವಾಸ ಬೀಳಬೇಕಾಯಿತು. ದೊಡ್ಡವರು ಹೇಗಾದರೂ ತಡೆದುಕೊಂಡರು. ಚಿಕ್ಕಮಕ್ಕಳ ಗತಿಯೇನು? ಮಕ್ಕಳು ಮರಿಗಳು ಅನ್ನ ಅನ್ನ ಎಂದು ಅಳಹತ್ತಿದವು. ತಾಯಿಗೆ ಬಹುದುಃಖವಾಯಿತು. ಗಂಡನನ್ನು ಕುರಿತು "ನೀವು ಬಹಳ ಯಜ್ಞಗಳನ್ನು ಮಾಡಿ ಪುಣ್ಯ ಸಂಪಾದಿಸಿದ್ದೀರಿ. ಯಾರಿಗಾದರೂ ಸ್ವಲ್ಪ ಪುಣ್ಯವನ್ನು ಮಾರಿ ಸ್ವಲ್ಪ ಹಣ ತರಬಾರದೆ? " ಎಂದಳು ಆ ಕಾಲದಲ್ಲಿ ಯಜ್ಞದಿಂದ ಬಂದ ಪುಣ್ಯಫಲವನ್ನು ಕೊಳ್ಳುವ ಶ್ರೀಮಂತರೂ ಇದ್ದರು. ಬ್ರಾಹ್ಮಣನಿಗೆ ಹೌದೆನ್ನಿಸಿತು. "ಹೀಗೆ ಮಕ್ಕಳು ಮರಿಗಳೊಡನೆ ಕಷ್ಟಪಡುವುದಕ್ಕಿಂತ ಒಂದೆರಡು ಯಜ್ಞಗಳ ಪುಣ್ಯಫಲವನ್ನು ಯಾರಿಗಾದರೂ ಮಾರಿ ಸ್ವಲ್ಪ ಹಣತಂದು ಜೀವನ ನಡೆಸಬಹುದು" ಎಂದು ಯೋಚಿಸಿ ಹೊರಡಲು ಸಿದ್ಧನಾದನು.



ಊರಿಗೆ ಹೋಗುವ ಗಂಡನಿಗೆ ಏನಾದರೂ ಸ್ವಲ್ಪ ತಿಂಡಿಯನ್ನು ಕಟ್ಟಿಕೊಡಬೇಕೆಂದು ಹೆಂಡತಿ ಯೋಚಿಸಿದಳು. ಆದರೆ ಮನೆಯಲ್ಲಿ ಏನೂ ಇದ್ದಹಾಗೆ ಅವಳ ನೆನಪಿಗೆ ಬರಲಿಲ್ಲ. ಮನೆಯೊಳಗಿನ ಎಲ್ಲ ಗಡಿಗೆಗಳನ್ನು ಹುಡುಕಾಡಿದಳು. ಕೊನೆಗೆ ಒಂದು ಗಡಿಗೆಯಲ್ಲಿ ಬಹುದಿನದ ಹಿಂದೆ ಇಟ್ಟ ಸ್ವಲ್ಪ ಗೋದಿಯ ಹಿಟ್ಟು ಕೈಗೆ ಸಿಕ್ಕಿತು. ಆ ಹಿಟ್ಟು ಅವಳ ಜ್ಞಾಪಕಕ್ಕೇ ಬಂದಿರಲಿಲ್ಲ, ಈದಿನ ಕೈಗೆ ಸಿಕ್ಕಿತು. ಅದರಲ್ಲಿದ್ದ ಹಿಟ್ಟನ್ನೆಲ್ಲ ಚಿಕ್ಕ ಚಿಕ್ಕ ಎರಡು ರೊಟ್ಟಿಯನ್ನು ತಟ್ಟಿದಳು ಗಂಡನಿಗೆ "ಎಲ್ಲಿಯಾದರೂ ನೀರಿದ್ದಲ್ಲಿ ಇದನ್ನು ತಿನ್ನಿರಿ"ಬೇಗಹೋಗಿ ಸ್ವಲ್ಪ ಪುಣ್ಯಫಲ ಮಾರಿ ದುಡ್ಡನ್ನು ತನ್ನಿರಿ" ಎಂದು ಹೇಳಿಕಳಿಸಿದಳು.

ಬ್ರಾಹ್ಮಣನು ಪಕ್ಕದ ಊರಿಗೆ ತನ್ನ ಪುಣ್ಯಫಲವನ್ನು ಮಾರಲು ಹೊರಟು. ಊರು ಏಳೆಂಟು ಮೈಲು ದೂರವಿತ್ತು. ಎರಡುಮೂರು ದಿನ ಸರಿಯಾಗಿ ಹೊಟ್ಟೆಗೆ ಅನ್ನವಿಲ್ಲದ್ದರಿಂದ ಬ್ರಾಹ್ಮಣನ ಹೊಟ್ಟೆಯೂ ಬಹು ಹಸಿದಿತ್ತು. ದಾರಿಯಲ್ಲಿ ಒಂದು ಚಿಕ್ಕ ಹಳ್ಳ ಜುಳು ಜುಳು ಹರಿಯುತ್ತಿತ್ತು. ಹಳ್ಳಕ್ಕೆ ಇಳಿದು ಮುಖ ತೊಳೆದುಕೊಂಡನು. ಆ ಹಳ್ಳದ ದಂಡೆಯ ಮೇಲೆಯೆ ಇದ್ದ ಗಿಡದ ಬುಡದಲ್ಲಿ ಕುಳಿತುಕೊಂಡು ಹೆಂಡತಿ ಕಟ್ಟಿಕೊಟ್ಟ ತಿಂಡಿಯನ್ನು ತಿನ್ನಲು ಗಂಟು ಬಿಚ್ಚಿದನು. ಒಂದು ತುತ್ತು ಮುರಿದು ಬಾಯಲ್ಲಿ ಇಟ್ಟುಕೊಳ್ಳುವಹೊತ್ತಿಗೆ ಒಂದು ಬಡಕಲ ನಾಯಿ ಕೊಂಯ್ ಕೊಂಯ್ ಎನ್ನುತ್ತ ಅವನ ಎದುರಿನಲ್ಲಿ ಬಂದು ಒದ್ದಾಡಹತ್ತಿತು.

ನಾಯಿಗೆ ನಾಲ್ಕಾರು ದಿನಗಳಿಂದ ಎಲ್ಲಿಯೂ ಅನ್ನ ಸಿಕ್ಕಿರಲಿಲ್ಲ. ಬಹಳ ಹಸಿದಿತ್ತು. ಹೊಟ್ಟೆ ಬೆನ್ನಿಗೆ ಹತ್ತಿತ್ತು. ಸೊರಗಿ ಬಡಕಲಾಗಿತ್ತು. ಇವನ ರೊಟ್ಟಿಯನ್ನು ನೋಡಿ ಆಸೆಯಿಂದ ಕೊಂಯ್, ಕೊಂಯ್ ಎಂದು ಕೊಂಯ್ ಗುಡುತ್ತಿತ್ತು. ಬಾಲ ಆಡಿಸುತ್ತಿತ್ತು ನಾಲಗೆ ಹಿರಿದುಕೊಂಡೇ ಎದುರಿಗೆ ಒದ್ದಾಡುತ್ತಿತ್ತು. ಬ್ರಾಹ್ಮಣ ಯೋಚಿಸಿದನು : ಈ ನಾಯಿ ನನ್ನಂತೆಯೇ ಬಹಳ ಹಸಿದಿದೆ. ಇರುವ ಈ ಸ್ವಲ್ಪ ರೊಟ್ಟಿಯಿಂದ ನನ್ನ ಹೊಟ್ಟೆಯೇನೂ ತುಂಬಲಾರದು. ಪಾಪ ಈ ಬಡ ನಾಯಿಯಾದರೂ ಬದುಕಿಕೊಳ್ಳಲಿ, ಎಂದು ತನ್ನಲ್ಲಿದ್ದ ಎಲ್ಲ ರೊಟ್ಟಿಯನ್ನು ನಾಯಿಯ ಮುಂದೆ ಇಟ್ಟುಬಿಟ್ಟನು. ಹಸಿದ ಬ್ರಾಹ್ಮಣನಿಗೆ ನಾಯಿಯ ಸಂಕಟದ ಮುಂದೆ ತನ್ನ ಸಂಕಟ ಕಾಣಲಿಲ್ಲ. ಮೊದಲೇ ಪುಣ್ಯಾತ್ಮ, ಪ್ರಾಣಿಗಳಮೇಲೆ ಕನಿಕರವುಳ್ಳವನು. ಪ್ರಾಣಿಗಳ ನೋವು ತನ್ನ ನೋವೆಂದು ತಿಳಿದವನು. ನಾಯಿ ತನಗೆ ಸಿಕ್ಕ ರೊಟ್ಟಿಯನ್ನೆಲ್ಲ ಗಪಗಪತಿಂದು ಹಳ್ಳದಲ್ಲಿ ನೀರು ಕುಡಿದು ಬ್ರಾಹ್ಮಣನ ಪುಣ್ಯವನ್ನು ಕೊಂಡಾಡುತ್ತ ಹೊರಟು ಹೋಯಿತು. ನಾಯಿ ಸಂತೋಷಗೊಂಡು ಹೊರಟು ಹೋದುದನ್ನು ಬ್ರಾಹ್ಮಣ ನೋಡಿ ಆನಂದಪಟ್ಟನು. ತಾನುಪುನಃ ಹಳ್ಳಕ್ಕೆ ಇಳಿದು ಮೂರು ಬೊಗಸೆ ನೀರನ್ನು ಕುಡಿದು ಹೊರಟುಹೋದನು.

ಬ್ರಾಹ್ಮಣನು ತಾನು ಹೋಗಬೇಕಾದ ಊರನ್ನು ತಲುಪಿ ಒಬ್ಬ ಶ್ರೀಮಂತನ ಮನೆಗೆ ಬಂದು ಬಾಗಿಲಲ್ಲಿ ನಿಂತು, 'ಸ್ವಾಮಿ' ಎಂದು ಕೂಗಿದನು. ಸಾಹುಕಾರ ಹೊರಗೆ ಬಂದನು. ಪುಣ್ಯಾತ್ಮನಾದ ಈ ಬ್ರಾಹ್ಮಣನು ಬಾಗಿಲಿಗೆ ಬಂದುದನ್ನು ಕಂಡನು. ಮರ್ಯಾದೆಯಿಂದ "ದಯಮಾಡಿ ಸ್ವಾಮಿ" ಎಂದು ಒಳಗೆ ಕರೆದುಕೊಂಡುಹೋಗಿ ಆಸನದಮೇಲೆ ಕುಳ್ಳಿರಿಸಿದನು. ಈ ಬ್ರಾಹ್ಮಣನ ಕೀರ್ತಿಯನ್ನು ಮೊದಲೇಕೇಳಿದ್ದನು. ಹತ್ತಿಪ್ಪತ್ತು ಯಜ್ಞಮಾಡಿ ಬಹಳ ಪುಣ್ಯ ಸಂಪಾದಿಸಿದ್ದಾನೆಂದು ಗೊತ್ತಿತ್ತು. ಬ್ರಾಹ್ಮಣನನ್ನು ಕುರಿತು ಸಾಹುಕಾರನು—"ಸ್ವಾಮಿ, ಬಹುದೂರ ಬಂದಂತಾಗಿದೆ. ಏನು ಕಾರ್ಯವಾಗಿ ಬಂದಿದ್ದೀರಿ" ಎಂದನು. ಬ್ರಾಹ್ಮಣನು — "ಸಾಹುಕಾರರೇ ನಾನು ತಮಗೆ ಒಂದು ಪದಾರ್ಥವನ್ನು ಮಾರಿ ಸ್ವಲ್ಪ ಹಣ ಪಡೆಯಬೇಕೆಂದು ಬಂದಿದ್ದೇನೆ" ಎಂದನು, ಸಾಹುಕಾರನೂ ಬಹು ಪುಣ್ಯವಂತ, ಧರ್ಮಕಾರ್ಯ ಮಾಡಿದವನು. ಬಹು ಒಳ್ಳೆಯ ಮನುಷ್ಯನೇ ಆಗಿದ್ದನು. ಅವನು ಬ್ರಾಹ್ಮಣನಿಗೆ "ಸ್ವಾಮಿ,ತಾವು ಮಾರಲು ಬಂದಿರುವ ಪದಾರ್ಥವಾವುದು ?"

"ಸಾಹುಕಾರರೇ, ನಾನು ಮಾಡಿದ ಯಜ್ಞಗಳಿಂದ ಬಂದ ಪುಣ್ಯದಲ್ಲಿ ಅರ್ಧ ಪುಣ್ಯವನ್ನು ತಮಗೆ ಮಾರಲು

ಬಂದಿದ್ದೇನೆ" ಎಂದನು ಬ್ರಾಹ್ಮಣ. "ಸ್ವಾಮಿ, ನೀವು ಮಾಡಿದ ಯಾವ ಯಜ್ಞದ ಪುಣ್ಯವೂ ನನಗೆ ಬೇಕಾಗಿಲ್ಲ. ಆದರೆ, ಬರುವಾಗ ದಾರಿಯಲ್ಲಿ ನಾಯಿಗೆ ಅನ್ನ ಹಾಕಿದುದರಿಂದ ಬಂದ ಪುಣ್ಯವನ್ನೆಲ್ಲ ನನಗೆ ಧಾರೆಯೆರೆದುಕೊಡಿರಿ. ಬೇಕಾದಷ್ಟು ಹಣ ಒಯ್ಯಿರಿ". ಎಂದನು ಸಾಹುಕಾರ ಸಾಹುಕಾರನಿಗೆ ನಾಯಿಗೆ ರೊಟ್ಟಿ ಹಾಕಿ ಪುಣ್ಯ ಸಂಪಾದಿಸಿದ ವಿಷಯ ಜ್ಞಾನದೃಷ್ಟಿಯಿಂದ ಗೊತ್ತಾಗಿತ್ತು. ಅದು ಹತ್ತಿಪ್ಪತ್ತು ಯಜ್ಞಗಳ ಫಲಕ್ಕಿಂತಲೂ ದೊಡ್ಡ ಫಲವೆಂದು ತಿಳಿದಿದ್ದನು. ಬ್ರಾಹ್ಮಣನಿಗೆ ಆಗ ತಾನು ನಾಯಿಗೆ ಮಾಡಿದ ಉಪಕಾರವನ್ನು ಸಾಹುಕಾರ ಜ್ಞಾನದೃಷ್ಟಿಯಿಂದ ತಿಳಿದುಕೊಂಡಿದ್ದಾನೆಂದು ತಿಳಿದನು.' "ಸಾಹುಕಾರರೇ, ಯಾವ ಪುಣ್ಯವನ್ನಾದರೂ ಧಾರೆಯೆರೆದು ಕೊಡಬಹುದು. ಹಸಿದ ನಾಯಿಗೆ ಅನ್ನ ಹಾಕಿದುದರಿಂದ ಬರುವ ಪುಣ್ಯವನ್ನು ಕೊಡಲಾಗುವುದಿಲ್ಲ" ಎಂದನು. ಸಾಹುಕಾರನು ಬ್ರಾಹ್ಮಣನ ದೊಡ್ಡತನವನ್ನು ತಿಳಿದು ಒಂದು ಸಾವಿರ ರೂಪಾಯಿಗಳನ್ನು ತಂದು "ಸ್ವಾಮಿ ಏನೂಬೇಡ. ತಾವು ಪುಣ್ಯವಂತರು. ತಮ್ಮ ಕಷ್ಟದಲ್ಲಿ ನಾನು ಸಹಾಯ ಮಾಡುತ್ತೇನೆ. ಇಗೋ ಈ ಸಾವಿರ ರೂಪಾಯಿ ತೆಗೆದುಕೊಂಡು ಹೋಗಿರಿ ನಿಮಗೆ ಸಾಧ್ಯವಾದಾಗ ತಂದುಕೊಡಿರೆಂದು ಹೇಳಿ ಸಾವಿರ ರೂಪಾಯಿ ಕೊಟ್ಟನು. ಬ್ರಾಹ್ಮಣನು ಆ ದುಡ್ಡನ್ನು ತೆಗೆದುಕೊಂಡು ಬಂದನು. ಕೆಲ ದಿನಗಳಮೇಲೆ ದುಡಿದು ಸಂಪಾದಿಸಿ ಸಾಲ ತೀರಿಸಿ ಬಂದನು.

## ನಾಡಗೀತೆ

ರಾಷ್ಟ್ರ ಕವಿ ಪದ್ಮಭೂಷಣ ಕುವೆಂಪುರವರ 'ಕೊಳಲು' ಎಂಬ ಕವನ ಸಂಕಲನದ ಪದ್ಯವಾದ "ಜಯಹೇ ಕರ್ನಾಟಕ ಮಾತೆ" ಎಂಬ ಪದ್ಯವನ್ನು ಕನ್ನಡ ಗೀತೆಯಾಗಿ ಕನ್ನಡ ಸಾಹಿತ್ಯ ಪರಿಷತ್ತಿನ ಸ್ವರ್ಣ ಮಹೋತ್ಸವದಿನದಂದು ಅಂಗೀಕರಿಸಲಾಯಿತು. ಅದರ ಪೂರ್ಣ ಪಾಠವನ್ನಿಲ್ಲಿ ಕೊಡಲಾಗಿದೆ.

ಜಯ್ ಭಾರತ ಜನನಿಯ ತನುಜಾತೆ,
ಜಯ ಹೇ ಕರ್ಣಾಟಕ ಮಾತೆ!
ಜಯ ಸುಂದರ ನದಿ ವನಗಳ ನಾಡೆ,
ಜಯ ಹೇ ರಸಋಷಿಗಳ ಬೀಡೆ!
ಭೂದೇವಿಯ ಮಕುಟದ ನವಮಣಿಯೆ,
ಗಂಧದ ಚದದ ಹೊನ್ನಿನ ಗಣಿಯೆ!
ರಾಘವ ಮಧುಸೂದನರವತರಿಸಿದ
ಭಾರತ ಜನನಿಯ ತನುಜಾತೆ,
ಜಯ ಹೇ ಕರ್ಣಾಟಕ ಮಾತೆ! ॥೧॥

ಶಂಕರ ರಾಮಾನುಜ ವಿದ್ಯಾರಣ್ಯ
ಬಸವೇಶ್ವರರಿಹ ದಿವ್ಯಾರಣ್ಯ,
ರನ್ನ ಷಡಕ್ಷರಿ ಪೊನ್ನ
ಪಂಪ ಲಕುಮಿಪತಿ ಜನ್ನ
ಗಬ್ಬಿಗರುದಿಸಿದ ಮಂಗಳಧಾಮ
ಕವಿಕೋಗಿಲೆಗಳ ಪುಣ್ಯಾರಾಮ!
ನಾನಕ ರಮಾನಂದ ಕಬೀರರ
ಭಾರತ ಜನನಿಯ ತನುಜಾತೆ,
ಜಯ ಹೇ ಕರ್ಣಾಟಕ ಮಾತೆ! ॥೨॥

ತೈಲಪ ಹೊಯ್ಸಳರಾಳಿದ ನಾಡೆ,
ಡಂಕಣ ಜಕಣರ ನಚ್ಚಿನ ಬೀಡೆ,
ಕೃಷ್ಣ ಶರಾವತಿ ತುಂಗಾ
ಕಾವೇರಿಯ ವರ ರಂಗ! ॥೩॥

ಚೈತನ್ಯ ಪರಮಹಂಸ ವಿವೇಕರ
ಭಾರತ ಜನನಿಯ ತನುಜಾತೆ
ಜಯ ಹೇ ಕರ್ಣಾಟಕ ಮಾತೆ! ॥೪॥

—ಕುವೆಂಪು



# ಕನ್ನಡ ಸಾಹಿತ್ಯ ಪರಿಷತ್ತಿನ

## "ಕನ್ನಡ ನಿಘಂಟು" [ಪರಿಚಯ]

—ಹೀ. ಚಿ. ಶಾಂತವೀರಯ್ಯ, ಎಂ. ಎ., ಬಿ. ಇಡಿ.

ಕನ್ನಡ ಸಾಹಿತ್ಯ ಪರಿಷತ್ತಿನ "ಕನ್ನಡ ನಿಘಂಟು" ಕನ್ನಡ ನುಡಿಯ ಒಂದು ಮೈಲಿಗಲ್ಲು. ಈ ನಿಘಂಟು ಸಿದ್ಧವಾದಮೇಲೆ ಕನ್ನಡ ನುಡಿಯ ಸಂಪತ್ತು ಸ್ಥಾಯಿಯಾಗಿ ನಿಲ್ಲುತ್ತದೆ. ಐತಿಹಾಸಿಕವಾಗಿಯೂ ತೌಲನಿಕವಾಗಿಯೂ ಶಾಸ್ತ್ರೀಯವಾಗಿಯೂ ಸಿದ್ಧವಾಗುತ್ತಿರುವ ಈ ನಿಘಂಟು. ಭಾರತದ ಬೇರಾವ ಪ್ರಾಂತೀಯ ಭಾಷೆಯಲ್ಲಿಯೂ ಈ ರೀತಿಯಲ್ಲಿ ನಡೆದಿಲ್ಲದಿರುವುದು ಕನ್ನಡ ನುಡಿಗೆ ಹೆಮ್ಮೆಯನ್ನು ತರುವಂತಿದೆ. ಈ ನಿಘಂಟು ಕನ್ನಡ ಮಾತೆಯ ಮಕುಟಮಣಿಯಾಗಿ ರಂಜಿಸಬಲ್ಲುದು.

ಕನ್ನಡದಲ್ಲಿ ಸಮರ್ಪಕವಾದ ನಿಘಂಟಿನ ಕೊರತೆ ಬಹು ಹಿಂದಿನಿಂದಲೂ ಇತ್ತು. ದಿವಂಗತ ಡಾ. ಕಿಟೆಲ್ ಅವರ ಪ್ರಯತ್ನ ಈ ದಿಸೆಯಲ್ಲಿ ಸ್ತುತ್ಯಾರ್ಹವಾದುದು. ಆದರೂ ಅದರ ಪೂರ್ಣಫಲ ಕನ್ನಡಿಗರಿಗೆ ಲಭಿಸುವಂತಿಲ್ಲ ಕಾರಣ ಅದು ಕನ್ನಡ-ಇಂಗ್ಲಿಷ್ ನಿಘಂಟು. ಇದನ್ನರಿತು ಕನ್ನಡ ಸಾಹಿತ್ಯ ಪರಿಷತ್ತು ಕ್ರಿ. ಶ. 1919 ರಿಂದ ಒಂದು ನಿಘಂಟನ್ನು ಸಿದ್ಧಪಡಿಸಬೇಕೆಂದು ಪ್ರಯತ್ನಿಸುತ್ತಿತ್ತು. 1941 ನೆಯ ಡಿಸೆಂಬರಿನಲ್ಲಿ ಹೈದರಾಬಾದಿನಲ್ಲಿ ಸೇರಿದ ಸಕಲ ಸದಸ್ಯರ ಸಭೆಯಲ್ಲಿ ನಿರ್ಣಯವನ್ನು ಡಾ. ರಂ. ಶ್ರೀ ಮುಗಳಿಯವರು ಕನ್ನಡಕೋಶ ರಚನೆಯನ್ನು ಕುರಿತು ಒಂದು ನಿರ್ಣಯವನ್ನು ಮಂಡಿಸಿದರು. ಅದು ಎಲ್ಲರಿಗೂ ಒಪ್ಪಿತವಾಗಿ ಒಂದು ಉಪಸಮಿತಿ (ನಾಲ್ಕು ಸದಸ್ಯರು) ಯನ್ನು ನೇಮಿಸಿತು. ದಿವಂಗತ ಡಾ. ಆರ್. ಕೃಷ್ಣಶಾಸ್ತ್ರಿ (ಅಧ್ಯಕ್ಷರು). ಡಾ. ಡಿ.ಎಲ್. ನರಸಿಂಹಾಚಾರ್ ಮತ್ತು ಶ್ರೀ ಕ. ವೆಂ. ರಾಘವಾಚಾರ್ಯರು (ಸದಸ್ಯರು). ದಿವಂಗತ ತೀ. ನಂ. ಶ್ರೀಕಂಠಯ್ಯನವರು (ಕಾರ್ಯದರ್ಶಿ) ಸದಸ್ಯರಾಗಿದ್ದರು. ಮೊದಲ ಸಂಪಾದಕ ಸಮಿತಿ 1934 ನೆಯ ಡಿಸೆಂಬರ್ 18 ನೆಯ ದಿನದಂದು ಸಭೆಸೇರಿ ಒಂದು ಯೋಜನೆಯನ್ನು ಸಿದ್ಧಮಾಡಿತು. ಇದರ ಪ್ರಕಾರ ಒದಗಬಹುದಾದ ಸಂದೇಹಗಳನ್ನು ಪರ್ಯಾಲೋಚಿಸಿ ಸಲಹೆಮಾಡುವುದಕ್ಕೂ ಅನ್ಯಭಾಷೆಗೆ ಸಂಬಂಧಪಟ್ಟ ವಿಶೇಷಾಂಶಗಳನ್ನು ತಿಳಿಸುವುದಕ್ಕೂ ಒಂದು ಸಮಾಲೋಚನ ಸಮಿತಿಯನ್ನು ರಚಿಸಿತು. ಇದರ ಜೊತೆಗೆ ಒಂದು ಸಹಾಯಕ ಸಮಿತಿಯನ್ನು ರಚಿಸಲಾಯಿತು. 1944 ರಲ್ಲಿ 'ಕನ್ನಡ ನಿಘಂಟು" ಕಚೇರಿ ಪ್ರಾರಂಭವಾಯಿತು ಸುಮಾರು 73 ಜನ ವಿದ್ವಾಂಸರು ದೇಶದ ಮೂಲೆಮೂಲೆಯಿಂದ ಶಬ್ದ ಸಂಗ್ರಹಕಾರ್ಯದಲ್ಲಿ ನೆರವಾದರು. ಕಚೇರಿಯಲ್ಲಿ ಒಬ್ಬಿಬ್ಬರು ಒಪ್ಪೊತ್ತಿನ ಕೆಲಸಗಾರರು ಮಾತ್ರ ಇದ್ದರು. 1951ರ ವೇಳೆಗೆ ಸುಮಾರು ಒಂದು ಸಾವಿರ ಕನ್ನಡ ಗ್ರಂಥಗಳಿಂದ ಶಬ್ದಗಳನ್ನು ಸಂಗ್ರಹಿಸಿ ಪಟ್ಟಿಕೆಗಳಲ್ಲಿ ಬರೆದಿಡಲಾಗಿತ್ತು. ಸುಮಾರು ಎರಡು ಸಾವಿರ ಮುದ್ರಿತ, ಅಮುದ್ರಿತ ಗ್ರಂಥಗಳಿಂದಲೂ ಸುಮಾರು ಹತ್ತುಸಾವಿರ ಶಾಸನಗಳಿಂದಲೂ ಶಬ್ದಗಳನ್ನು ಆರಿಸಿಕೊಳ್ಳಲಾಗಿದೆ. ಈವರೆಗೆ ಸುಮಾರು 8ಲಕ್ಷ ಪಟ್ಟಿಕೆಗಳನ್ನು ಸಂಗ್ರಹಿಸಿ ಆಕಾರಾದಿಯಾಗಿ ಜೋಡಿಸಲಾಗಿದೆ. ನಿಘಂಟಿನ ಕಾರ್ಯಕ್ಕಾಗಿ 1954 ರಲ್ಲಿ ಸರಕಾರ ಒಂದು ಲಕ್ಷ ರೂಪಾಯಿಗಳ ಧನಸಹಾಯ ನೀಡಿ ಉಪಕಾರಮಾಡಿತು. 1954ರಲ್ಲಿ ನಿಘಂಟು ಕಚೇರಿಯನ್ನು ಪುನರ್ ವ್ಯವಸ್ಥೆಗೊಳಿಸಲಾಯಿತು. ಡಾ. ಡಿ. ಎಲ್. ನರಸಿಂಹಾಚಾರ್ಯರು ಸಂಪಾದಕರಾಗಿ ಬಂದರು ಅವರ ಜೊತೆಗೆ ಶ್ರೀ ಎನ್. ಬಸವಾರಾಧ್ಯರು ಮತ್ತು ಪಂಡಿತ ಎಚ್. ದೇಶಿಕಾಚಾರ್ಯರು ಸಹಾಯಕರಾಗಿ ಬಂದರು. ಇಷ್ಟು ಹೊತ್ತಿಗೆ

ನಿಘಂಟು ಒಂದು ಹದಕ್ಕೆ ಬಂದಿತು. 8 ಪುಟಗಳ ಮಾದರಿ ನಿಘಂಟನ್ನು ಅಚ್ಚುಹಾಕಿ ನಾಡಿನ ಎಲ್ಲ ವಿದ್ವಾಂಸರ ಅಭಿಪ್ರಾಯಕ್ಕೆ ಕಳಿಸಿಕೊಡಲಾಯಿತು, ಬಂದ ಸೂಚನೆ ಸಲಹೆಗಳಂತೆ ಮತ್ತೆ ಅದನ್ನು ಅಳವಡಿಸಲಾಯಿತು. ಡಾ. ಎ. ಆರ್. ನರಸಿಂಹಾಚಾರ್ಯರು ಪ್ರಾಧ್ಯಾಪಕರಾಗಿ ನೇಮಕಗೊಂಡು ಮೈಸೂರಿಗೆ ಹಿಂತಿರುಗಿದಮೇಲೆ ಡಾ. ಡಿ. ಎಲ್. ಕೃಷ್ಣಶಾಸ್ತ್ರೀ ಅವರು ಸಂಪಾದಕ ಸಮಿತಿಯ ಅಧ್ಯಕ್ಷರ ಜೊತೆಗೆ ಸಂಪಾದಕತ್ವವನ್ನು ವಹಿಸಿಕೊಂಡರು. ಇವೆರಡನ್ನೂ ನಿರ್ವಹಿಸುವುದು ಸಾಧ್ಯವಿಲ್ಲವೆಂದು ಅಭಿಪ್ರಾಯಪಟ್ಟಮೇಲೆ ಶ್ರೀ ಎಲ್. ಗುಂಡಪ್ಪನವರು ಸಂಪಾದಕರಾದರು. ಅವರು ನಿವೃತ್ತರಾದಮೇಲೆ ಶ್ರೀ ಎನ್. ಬಸವಾರಾಧ್ಯ ಅವರು ಸಂಪಾದಕರಾಗಿ ಕೆಲಸ ನಿರ್ವಹಿಸುತ್ತಿದ್ದಾರೆ.

ನಿಘಂಟಿನ ಕಾರ್ಯಕ್ಕೆ ಒಂದು ಲಕ್ಷ ರೂ ಸಾಲದೆಂದು ತಿಳಿದ ಮೇಲೆ 29-5-1961ರಲ್ಲಿ ಸರಕಾರದೊಡನೆ ಪರಿಷತ್ತು ಒಪ್ಪಂದಮಾಡಿಕೊಂಡು ಒಂದು ಯೋಜನೆಯನ್ನು ಸಿದ್ಧಪಡಿಸಿತು. ಇದರ ಪ್ರಕಾರ ಕನ್ನಡ ನಿಘಂಟು. ಐದುಸಾವಿರ ಪುಟಗಳ ನಾಲ್ಕು ಸಂಪುಟಗಳಿರಬೇಕೆಂದೂ ಹತ್ತುಸಾವಿರ ಪ್ರತಿಗಳು ಅಚ್ಚಾಗಬೇಕೆಂದೂ ಇದಕ್ಕಾಗಿ ಸರ್ಕಾರ ಹದಿನೈದು ಲಕ್ಷರೂಗಳನ್ನು ಕೊಡಬೇಕೆಂದೂ ತೀರ್ಮಾನಿಸಲಾಯಿತು. ನಿಘಂಟಿನ ಪೂರ್ಣವಾದ ಕೆಲಸ ಪ್ರಾರಂಭವಾದುದು 1962ರಲ್ಲಿ. ನಿಘಂಟಿಗಾಗಿಯೇ ಪೂರ್ಣಕಾಲದ ಸಹಾಯಕರನ್ನು ನೇಮಕಮಾಡಿಕೊಂಡು ಕೆಲಸವನ್ನು ತೀವ್ರಗತಿಯಲ್ಲಿ ಮುಂದುವರಿಸಲಾಯಿತು. ಈ ಬೃಹತ್ ಯೋಜನೆ ಕಾರ್ಯರೂಪಕ್ಕೆ ಬಂದ ಮೇಲೆ ನಿಘಂಟಿಗೆ ಬೇಕಾದ ತಕ್ಕಷ್ಟು ಸಿಬ್ಬಂದಿಯನ್ನು ನೇಮಕಮಾಡಿಕೊಂಡು. ಕೆಲಸವನ್ನು ತೀವ್ರಗತಿಯಲ್ಲಿ ಸಾಗಿಸಲಾಗುತ್ತಿದೆ. ನಿಘಂಟಿಗೆ ಈಗ ಒಂದು ಖಚಿತ ಸ್ವರೂಪ ಬಂದಿದೆ ನಿಘಂಟಿನ ಸಂಚಿಕೆಗಳು ಬೇಗಬೇಗ ಹೊರಬರುವುದರಲ್ಲಿ ಸಂಶಯವಿಲ್ಲ. ಕನ್ನಡ ಸಾಹಿತ್ಯ ಪರಿಷತ್ತಿನ ಚಿನ್ನದ ಹಬ್ಬದ ಸಮಯದ ಸುಸಂದರ್ಭದಲ್ಲಿ ನಿಘಂಟಿನ ಮೊದಲನೆಯ ಸಂಪುಟ ಬಿಡುಗಡೆಯಾಗುತ್ತಿರುವುದು ಕನ್ನಡಿಗರಿಗೆ ಆನಂದವನ್ನು ತರುವಂಥ ವಿಷಯವಾಗಿದೆ.

ಭಾಷಾಶಾಸ್ತ್ರತತ್ವಗಳಿಗೆ ಅನುಸಾರವಾಗಿ ಚಾರಿತ್ರಿಕ ವಿವರಣೆಯಿಂದ ಕೂಡಿರುವ ಪ್ರಮಾಣಭೂತವೂ ಸಮಗ್ರವೂ ಆದ ಈ ನಿಘಂಟನ್ನು ಸಿದ್ಧಗೊಳಿಸುವ ಕಾರ್ಯದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಬಹಳ ಆಸಕ್ತಿಯನ್ನು ಹೊಂದಿದೆ. ಮೇಲಾಗಿ ನಾಡುನುಡಿಗಳ ಸಂಪೂರ್ಣ ಪ್ರಾತಿನಿಧ್ಯವಿರುವಂತೆ ರಚಿತವಾಗಿರುವ ಸಂಪಾದಕಸಮಿತಿಯಲ್ಲಿ ನಾಡಿನ ಶ್ರೇಷ್ಠ ಹಿರಿಯ ವಿದ್ವನ್ಮಣಿಗಳು ಹಗಲಿರುಳೂ ದುಡಿಯುತ್ತಲ್ಲಿದ್ದಾರೆ. ಪರಿಷತ್ತಿನ ಮತ್ತು ನಿಘಂಟು ಕಚೇರಿಯ ಸಿಬ್ಬಂದಿ ಬಿ. ಎಂ. ಶ್ರೀ ಅಚ್ಚುಕೂಟದವರು ಬಹು ಅಭಿಮಾನದಿಂದ ದುಡಿಯುತ್ತಿದ್ದಾರೆ. (ಸಂಪಾದಕ ಸಮಿತಿ 1—12—1970ರಂತೆ) ಡಾ. ಡಿ. ಎಲ್. ನರಸಿಂಹಾಚಾರ್ (ಅಧ್ಯಕ್ಷರು), ಪ್ರೊ. ಕೆ. ವಿ. ರಾಘವಾಚಾರ್ (ಉಪಾಧ್ಯಕ್ಷರು) ಶ್ರೀ ಎನ್. ಬಸವಾರಾಧ್ಯ (ಸಂಪಾದಕರು). ಪ್ರೊ. ದೇ. ಜವರೇಗೌಡ, ಡಾ. ರಂ. ಶ್ರೀ ಮುಗಳಿ, ಶ್ರೀ ಎನ್, ಲಕ್ಷ್ಮೀನಾರಾಯಣರಾವ್, ಶ್ರೀ ಕಾ. ಸ. ಧರಣೇಂದ್ರಯ್ಯ, ಪ್ರೊ. ಸ. ಸ. ಮಾಳವಾಡ, ಪ್ರೊ. ಎಂ. ಮರಿಯಪ್ಪ ಭಟ್ಟ, ಡಾ. ಆರ್.ಸಿ. ಹಿರೇಮಠ, ಪ್ರೊ, ಜಿ. ವೆಂಕಟಸುಬ್ಬಯ್ಯ, ಶ್ರೀ ಬಸವರಾಜ ಕಟ್ಟೀಮನಿ, ಡಾ. ಬಿ. ಎಸ್. ಗಾಯಿ (ಸದಸ್ಯರು), ಪದ್ಮಶ್ರೀ ಶ್ರೀ ಬಿ. ಶಿವಮೂರ್ತಿಶಾಸ್ತ್ರಿ, ಶ್ರೀ ಸಿದ್ಧಯ್ಯಪುರಾಣಿಕ, ಶ್ರೀ ವಿ. ಬಿ. ನಾಯಕ (ಸರ್ಕಾರದ ಪ್ರತಿನಿಧಿಗಳು), ಶ್ರೀ ಜಿ. ನಾರಾಯಣ, ಶ್ರೀ ಹಂ. ಪ. ನಾಗರಾಜಯ್ಯ, ಶ್ರೀ ವೆಂಕಟೇಶ ಸಾಂಗಲಿ, ಶ್ರೀ ಎನ್. ವರದರಾಜನ್ (ಪರಿಷತ್ತಿನ ಅಧಿಕಾರಪ್ರಯುಕ್ತ ಸದಸ್ಯರು).

ಕನ್ನಡ ಗ್ರಂಥಗಳಲ್ಲೂ ಶಾಸನಗಳಲ್ಲೂ ದೊರೆಯುವ ಸಂಸ್ಕೃತ, ದೇಶ್ಯ, ಅನ್ಯದೇಶ್ಯ, ತತ್ಸಮ, ತದ್ಭವ ಶಬ್ದಗಳನ್ನೂ ಶೋಧಿಸಿ ರೂಪ, ಅರ್ಥ, ಅಪೂರ್ವತೆ ಈ ಮೊದಲಾದ ದೃಷ್ಟಿಯಿಂದ ಗಮನಾರ್ಹವಾದ ಪದಗಳನ್ನು ಆರಿಸಿಕೊಂಡಿದೆ. ಅಲ್ಲದೆ ಪ್ರಾದೇಶಿಕ ಶಬ್ದಗಳೂ ಜನಪದ ಸಾಹಿತ್ಯದ ಶಬ್ದಗಳೂ, ರೂಢಿಮಾತುಗಳೂ ನುಡಿಗಟ್ಟುಗಳೂ ಗಾದೆಗಳೂ ಈ ನಿಘಂಟಿನಲ್ಲಿವೆ ಜೈನ, ವೀರಶೈವ, ವೈಷ್ಣವ ಸಾಹಿತ್ಯಕ್ಕೆ ಸಂಬಂಧಪಟ್ಟ ಧಾರ್ಮಿಕ, ದಾರ್ಶನಿಕ ಶಬ್ದಗಳು, ಸಂಗೀತ, ನೃತ್ಯ, ಶಿಲ್ಪಕಲೆಗಳಿಗೆ ಸಂಬಂಧಿಸಿದ ಪಾರಿಭಾಷಿಕ ಶಬ್ದಗಳೂ ವ್ಯಾಕರಣ, ಛಂದಸ್ಸು, ಅಲಂಕಾರ, ತರ್ಕ, ವೈದ್ಯ, ಜ್ಯೋತಿಷ, ಕಾಮಶಾಸ್ತ್ರ ಮತ್ತು ಗಣಿತಶಾಸ್ತ್ರಗಳಿಗೆ ಸಂಬಂಧಪಟ್ಟ ಶಬ್ದಗಳು. ವೈಜ್ಞಾನಿಕ ಪಾರಿಭಾಷಿಕ ಶಬ್ದಗಳೂ ಪಠ್ಯಪುಸ್ತಕಗಳು ಮತ್ತು ವೃತ್ತಪತ್ರಿಕೆಗಳಲ್ಲಿ ಪ್ರಚಲಿತವಿರುವ ಶಬ್ದಗಳು—ಈ ನಿಘಂಟಿನಲ್ಲಿ ಸೇರಿವೆ. ರೀವ್, ಕಿಟಲ್, ಸ್ಯಾಂಡರ್‌ಸನ್ ಗ್ಯಾರೆಟ್, ತೂರಮುರಿ, ಮೋಹರೆ, ಪ್ರಭಣ್ಣ, ಶಾಮಣ್ಣ, ಮೊದಲಾದವರ ಮುದ್ರಿತ ಅಮುದ್ರಿತ ನಿಘಂಟುಗಳನ್ನೂ ಬಳಸಿಕೊಳ್ಳಲಾಗಿದೆ. ಒಟ್ಟಿನಲ್ಲಿ ಬಳಕೆಯಲ್ಲಿರುವ ಯಾವ ಒಂದು ಶಬ್ದವೂ ಬಿಟ್ಟುಹೋಗಬಾರದೆಂಬುದೇ ಮುಖ್ಯ ಉದ್ದೇಶ.

ಅಂಕಿತನಾಮಗಳಲ್ಲಿ ಭಾಷಾಶಾಸ್ತ್ರದ ದೃಷ್ಟಿಯಿಂದ ವೈಶಿಷ್ಟ್ಯತೆ ಕಂಡುಬಂದಲ್ಲಿ ಮಾತ್ರ ಕೊಡಲಾಗಿದೆ. ವಿಶೇಷ ಅರ್ಥವಿದ್ದಲ್ಲಿ ಅಂಕಿತನಾಮಗಳನ್ನು ಇಟ್ಟುಕೊಂಡಿದೆ. ಉದಾ. ಅಗ್ಗಳ, ಕುಂಭಕರ್ಣ, ಕ್ರಿ. ಶ. 1000 ಕ್ಕಿಂತ ಈಚಿನ ಅಂಕಿತನಾಮಗಳನ್ನು ಕೊಡುವುದಿಲ್ಲ. 1800 ಕ್ಕಿಂತ ಹಿಂದಿನ ಗ್ರಾಮ್ಯರೂಪಗಳನ್ನು ಸೇರಿಸಿಕೊಳ್ಳಲಾಗಿದೆ. ಗ್ರಾಮ್ಯ ಶಬ್ದಗಳಿಗೆ ಈ ನಿಘಂಟಿನಲ್ಲಿ ಎಡೆಯಿಲ್ಲ. ಒಂದೇ ಅರ್ಥದ ಹಲವಾರು ಸಂಸ್ಕೃತ ಶಬ್ದಗಳು ಕನ್ನಡ ಕಾವ್ಯಗಳಲ್ಲಿ ವಿಪುಲವಾಗಿ ಸಿಕ್ಕುತ್ತವೆ ಇವುಗಳನ್ನೆಲ್ಲಾ ಇಲ್ಲಿ ಕೊಟ್ಟಿಲ್ಲ ಉದಾ. ಅಗತನಯೆ, ಅಗತನುಜೆ, ಅಗತನೂಜೆ, ಅಗಪುತ್ರಿ. ಕ್ರಿಯಾಸಮಾಸ ಮತ್ತು ಇತರ ಸಮಾಸ ಪದಗಳು ಮುಖ್ಯ ಉಲ್ಲೇಖಗಳಾಗಿ ಬರುತ್ತವೆ. ಅದು, ಅವನು, ಅವಳು ಸೇರಿದ ಶಬ್ದಗಳನ್ನು ಕೊಟ್ಟಿಲ್ಲ. ಉದಾ. ಅಗಸನದು, ಅಗಸರವನು, ಅಗಸರವಳು ಸಂಸ್ಕೃತ ಶಬ್ದಗಳನ್ನು ಶಮಸಂಸ್ಕೃತ [ಸಂ.] ಎಂದು ನಿರ್ದೇಶಿಸಲಾಗಿದೆ. ಉಳಿದವು ಎಂದರೆ ವಿಕಾರವಾಗಿರುವ ಪದಗಳನ್ನು ತದ್ಭವ ಎಂದು ಕರೆದಿದೆ. ಕೃದಂತರೂಪಗಳನ್ನು, ಆಗು, ಕೊಳ್, ಮಾಡು ಮೊದಲಾದ ಶಬ್ದಗಳು ಸೇರಿ ಆದ ಸಮಾಸಗಳನ್ನು ಅಖ್ಯಾತ ಮತ್ತು ವಿಭಕ್ತಿ ಪ್ರತ್ಯಯಗಳು ಅವುಗಳಿಂದ ಆಗುವ ಆಗಮಗಳನ್ನು ಇಲ್ಲಿ ಕೊಟ್ಟಿಲ್ಲ. ನುಡಿಗಟ್ಟುಗಳನ್ನು ಆಯಾ ಮುಖ್ಯ ಶಬ್ದಗಳಿಗೆ ಪ್ರತ್ಯೇಕವಾದ 'ಪ್ಯಾರಾ' ದೊಡನೆ ಆ ಶಬ್ದದ ಕಡೆಯಲ್ಲಿ ಕೊಟ್ಟಿದೆ. ಜೊತೆಗೆ ದ್ವಿರುಕ್ತಿಗಳನ್ನು ಅಲ್ಲಲ್ಲಿ ಕೊಡಲಾಗಿದೆ.

ಈ ನಿಘಂಟನ್ನು ಅವಲೋಕಿಸುವವರು ವಿಶೇಷವಾದ ಅನುಭವವನ್ನು ಪಡೆಯಬೇಕಾದುದು ಇದರ ವೈಶಿಷ್ಟ್ಯ. ಇದರಲ್ಲಿರುವ ಆರು ವಿಷಯಗಳನ್ನು ಲಕ್ಷದಲ್ಲಿಟ್ಟುಕೊಳ್ಳಬೇಕು.

1. **ಮುಖ್ಯ ಉಲ್ಲೇಖ :—** ಸುಮಾರು ಎರಡು ಲಕ್ಷ ಪದಗಳು ಮುಖ್ಯ ಉಲ್ಲೇಖಗಳಾಗಿ ಬರುತ್ತವೆ. ಅವು ಪ್ರಕೃತಿ ರೂಪದಲ್ಲಿಯೇ ಇದ್ದು ಕನ್ನಡ, ತದ್ಭವ, ಸಂಸ್ಕೃತ, ಅನ್ಯದೇಶ್ಯ ಮತ್ತು ಕ್ರಿಯಾವಾಚಕ ನಾಮಪದ, ಗುಣವಾಚಕ, ಸರ್ವನಾಮ, ಅವ್ಯಯ, ಪ್ರತ್ಯಯ—ಈ ಆನುಪೂರ್ವಿಯಲ್ಲಿರುತ್ತದೆ. ಇವಕ್ಕೆ 1, 2, 3, 4 ಎಂಬ ಸಂಖ್ಯೆಯನ್ನು ಕೊಟ್ಟಿದೆ.

2. **ಚಾರಿತ್ರಿಕ ವಿಧಾನ :—** ಒಂದು ಶಬ್ದಕ್ಕೆ ಹಲವಾರು ರೂಪಗಳಿದ್ದಾಗ ಭಾಷಾಶಾಸ್ತ್ರ ದೃಷ್ಟಿಯಿಂದ ಅತಿ ಪ್ರಾಚೀನವಾದ ರೂಪದ ಕೆಳಗೆ ಎಲ್ಲ ರೂಪಗಳನ್ನು ಕೊಡಲಾಗಿದೆ. ಮಿಕ್ಕ ರೂಪಗಳಿಗೆ ಅವುಗಳ ಸ್ಥಾನದಲ್ಲಿ ಮೂಲರೂಪ ನೋಡಿ ಎಂದು ನಿರ್ದೇಶಿಸಲಾಗಿದೆ. ಉದಾ. ಅಕ್ಕಸಾಲೆ, ಅಕಸಾಲ, ಅಕಸಾಲೆ, ಅಕ್ಕಸಾಲಿ, ಅಗಸಾಲ, ಅಗಸಾಲೆ, ಅರ್ಕಸಾಲೆ (ನಾ). ಅಕಸಾಲ, 'ಅಕ್ಕಸಾಲೆ' ನೋ.

ಶಬ್ದಗಳಿಗೆ ಅರ್ಥವನ್ನು ಕೊಡುವಾಗ ಸಾಮಾನ್ಯವಾಗಿ ಆಕ್ಸ್‌ಫರ್ಡ್ ಇಂಗ್ಲಿಷ್ ನಿಘಂಟನ್ನು ಮಾದರಿಯಲ್ಲಿಟ್ಟುಕೊಳ್ಳಲಾಗಿದೆ. ಮೊದಲು ವಾಚ್ಯಾರ್ಥವನ್ನೂ ಆಮೇಲೆ ಲಕ್ಷ್ಯಾರ್ಥವನ್ನೂ ಕೊಡಲಾಗಿದೆ. ಶಬ್ದದ ಅರ್ಥಸ್ಪಷ್ಟವಾಗುವಂತೆ ಬೇರೆಬೇರೆ ಮಾತುಗಳಿಂದ ಸಂಕ್ಷೇಪವಾಗಿ ನಿರೂಪಿಸಿ ಸಂಸ್ಕೃತ ಪರ್ಯಾಯ ಪದಗಳನ್ನು ಯಥೋಚಿತವಾಗಿ ಕೊಡಲಾಗಿದೆ. ಹೆಚ್ಚು ಅರ್ಥಗಳಿದ್ದರೆ ಅವುಗಳನ್ನು ಸಂಖ್ಯೆಗಳಿಂದ ನಿರ್ದೇಶಿಸ

ಲಾಗಿದೆ. ಮುಖ್ಯ ಶಬ್ದಗಳಿಗಿರುವ ಸಾದೃಶ್ಯ ವೈದೃಶ್ಯಗಳನ್ನು ಇತರ ಶಬ್ದಗಳೊಂದಿಗೆ ಪರಾಮರ್ಶಿಸು, ಹೋಲಿಸು ಎಂಬುದಾಗಿ ಗಮನ ಸೆಳೆಯಲಾಗಿದೆ. ಉದಾ:-ಅಂಶಗಣ(ನಾ) 'ದೇವಗಣ' ಪರಾ, 'ಅಕ್ಕಾಜಿ' (ನಾ), ಅಣ್ಣಾಜಿ, ಭಾವಾಜಿ, ಮಾವಾಜಿ ಹೋ.

ದಿನ ಬಳಕೆಯ ಶಬ್ದಗಳಾದ ಅಕ್ಕ, ಅಣ್ಣ, ಇಲಿ, ಕತ್ತೆ, ಮಗು, ಹೊಳೆ ಮೊದಲಾದ ಶಬ್ದಗಳಿಗೂ ವಿವರಣಾತ್ಮಕವಾದ ಅರ್ಥವನ್ನು ಕೊಟ್ಟು ಸಂಸ್ಕೃತ ಪರ್ಯಾಯ ಶಬ್ದಗಳನ್ನು ಕೊಡಲಾಗಿದೆ. ಗುಣವಾಚಕಗಳೆಲ್ಲ ನಾಮವಾಚಕದ ಪ್ರಭೇದಗಳಾದುದರಿಂದ ಪ್ರಯೋಗಗಳನ್ನು ಹೊಂದಿಸಿಕೊಳ್ಳಬೇಕು. ಧಾತುಗಳಿಗೆ ಅರ್ಥವನ್ನು ಕೊಡುವಾಗ ಶಬ್ದಮಣಿದರ್ಪಣದ ಕ್ರಮವನ್ನು ಅನುಸರಿಸಲಾಗಿದೆ.

3. **ಪ್ರಯೋಗ** :—ಶಬ್ದಗಳಿಗೆ ಅರ್ಥಗಳನ್ನು ಸೂಚಿಸಿದ ಮೇಲೆ ಪ್ರತಿ ಅರ್ಥಕ್ಕೂ ಶಾಸನ ಕಾವ್ಯಗಳಿಂದ ಸಾಧ್ಯವಾದಷ್ಟು ಪ್ರಯೋಗಗಳನ್ನು ಕೊಡಲಾಗಿದೆ. ಶಾಸನ ಪ್ರಯೋಗಗಳಿಗೆ ಕಾಲವನ್ನು ಸೂಚಿಸಿದೆ. ಕಾವ್ಯಗಳನ್ನು ಕಾಲಾನುಕ್ರಮದಲ್ಲಿ ಕೊಡಲಾಗಿದೆ. ದೇಶ್ಯ ಶಬ್ದಗಳಿಗೆ ಮಾತ್ರ ಹಳಗನ್ನಡ,ನಡುಗನ್ನಡ, ಹೊಸಗನ್ನಡ ಪ್ರಯೋಗಗಳನ್ನು ಕೊಡಲಾಗಿದೆ. ಸಾಧ್ಯವಾದಷ್ಟೂ ಉತ್ತಮವಾದ ಪ್ರಯೋಗಗಳನ್ನು ಆರಿಸಿಕೊಡಲಾಗಿದೆ. ಜೊತೆಗೆ ಆಕರ ಮತ್ತು ಸಂಖ್ಯೆಯನ್ನು ಸೂಚಿಸಲಾಗಿದೆ. ಸುಮಾರು ಎರಡುಸಾವಿರ ಆಕರದ ಸಂಕೇತಗಳಿವೆ. (ಎಕ. VIII, ಸೊರಬ. 46—6; 1008 = ಎಪಿಗ್ರಾಫೀಯಾ ಕರ್ನಾಟಕ. ಭಾಗ VIII, ಸೊರಬ ತಾಲ್ಲೂಕು ಶಾಸನ 46ಸಾಲು 6; ಕಾಲ 1008), (ಪಂಪಬಾ. 8—58ವ= ಪಂಪ ಭಾರತ. ಆಶ್ವಾಸ 8 ಪದ್ಯ 58 ಅದರವಚನ). (ಬಸವ. 562= ಬಸವಣ್ಣನವರ ಷಟ್ಸ್ಥಲ ವಚನಗಳು, ಸಂಖ್ಯೆ. 562), (ಪುರಂದ. 1—56—3= ಪುರಂದರ ದಾಸರ ಕೀರ್ತನೆಗಳು ಭಾಗ 1. ಕೀರ್ತನೆ 56 ಪದ. 3),(ನಡೆದಾ. II, 1158= ನಡೆದುಬಂದ ದಾರಿ. ಭಾಗ. II, ಪುಟ—1158), (ನಿರಾಭ. 64—7 = ನಿರಾಭರಣಸುಂದರಿ. ಪುಟ. 64 ಸಾಲು 7).

ದೇಶ್ಯ ಶಬ್ದಗಳಿಗೆ ಕೊಟ್ಟಂತೆ ಸಂಸ್ಕೃತ ಶಬ್ದಗಳಿಗೆ ಹೆಚ್ಚು ಪ್ರಯೋಗಗಳನ್ನು ಕಾಣಿಸಿಲ್ಲ. ಅನ್ಯದೇಶ್ಯಗಳಿಗೆ ದೊರೆತಷ್ಟೂ ಪ್ರಯೋಗಗಳನ್ನು ಕೊಡಲಾಗಿದೆ. ನಿಘಂಟು, ವ್ಯಾಕರಣಗಳಿಂದ ತೆಗೆದುಕೊಂಡ ಉದ್ಧರಣಗಳನ್ನೆಲ್ಲಾ ಉದ್ಧರಣ ಚಿಹ್ನೆಯಲ್ಲಿ ಕೊಡಲಾಗಿದೆ. ಎಲ್ಲ ನಿಘಂಟುಗಳನ್ನು ಉಲ್ಲೇಖಿಸಿಲ್ಲ. ಉದಾ :—"ಅಗುಂದಲೆ=ಪಿರಿದು" (ಶಮದ. ಪರಿ 2) "ಅಗಿದನಳ್ಕಿದಂ ........ ಎನಲ್ಕೆ ಭಯಭರಿತನಕ್ಕು" (ಕವಿಕಂ. 109) ರೂಢಿಯಲ್ಲಿರುವ ಶಬ್ದಕ್ಕೆ ಪ್ರಯೋಗ ಸಿಕ್ಕದಿದ್ದಲ್ಲಿ ಒಂದು ವಾಕ್ಯವನ್ನು ನಿಯೋಜಿಸಿ(ರೂಢಿ) ಎಂದು ಕರೆಯಲಾಗಿದೆ. ಉದಾ:—ಅಚ್ಚಾಗು (ಕ್ರಿ) ೨. ಮುದ್ರಣ ಹೊಂದು : ಈ ಪುಸ್ತಕ ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟದಲ್ಲಿ ಅಚ್ಚಾಯಿತು(ರೂಢಿ)

4. **ನಿಷ್ಪತ್ತಿ ವಿಧಾನ** :— ನಿಷ್ಪತ್ತಿಯನು ಪ್ರತಿ ಮುಖ್ಯ ಉಲ್ಲೇಖಕ್ಕೂ ಕೊಡಲಾಗಿದೆ. ನಿಷ್ಪತ್ತಿ ತಿಳಿಯದಿರುವ ಕಡೆ ಪ್ರಶ್ನೆ[?]ಹಾಕಿದೆ, ಸಂಸ್ಕೃತ ಶಬ್ದಗಳ ನಿಷ್ಪತ್ತಿಯನ್ನು ಬಿಡಿಸಿ ತೋರಿಸದೆ. ಸಿದ್ಧರೂಪವನ್ನು ಮಾತ್ರ ಕೊಡಲಾಗಿದೆ ಸಮಸಂಸ್ಕೃತ ಶಬ್ದಗಳಿಗೆ [ಸಂ.] ಎಂದೂ ತದ್ಭವ ರೂಪಗಳಿಗೆ ಸಂಸ್ಕೃತ ರೂಪಗಳನ್ನು ಕೊಡಲಾಗಿದೆ. ಉದಾ:—ಅಕುಲಜ (ನಾ).[ಸಂ.] ಅಂಗಾರ (ನಾ) [ಸಂ.] ಅಕೂಬಾರ(ನಾ) [ಸಂ. ಅಕೂವಾರ].

ದೇಶ್ಯಶಬ್ದಗಳಿಗೆ ಅವುಗಳ ರಚನೆ ಸ್ಪಷ್ಟವಾಗುವಂತೆ ಪ್ರಕೃತಿ, ಪ್ರತ್ಯಯಾದಿಗಳನ್ನು ವಿಭಜಿಸಿ ತೋರಿಸಿದೆ, ಆದರೆ ಸಂಧಿಕಾರ್ಯಗಳನ್ನು ಆಗಮಗಳನ್ನು ತೋರಿಸಲಾಗುವುದಿಲ್ಲ. ಈ ಶಬ್ದಗಳಿಗೆ ಸೋದರ ಭಾಷೆಯಲ್ಲಿ ದೊರೆಯುವ ಜ್ಞಾತಿ ಶಬ್ದಗಳನ್ನು ಕೊಟ್ಟಿದೆ. ಭೇದವಿದ್ದಲ್ಲಿ ಮಾತ್ರ ಅರ್ಥವನ್ನು ಬರೆದಿದೆ. ದೇ =ದೇಶ್ಯ, ಸಂ= ಸಂಸ್ಕೃತ, ಅನ್ಯದೇ= ಅನ್ಯದೇಶ್ಯ. ಎಂದು ತೋರಿಸಿದೆ. ಉದಾ :—ಅಣ್ಕೆ



(ನಾ).[ಅಣ್+-ಕೆ], ಅಜ್ಜರಿಗವಿ (ಕ್ರಿ). [ಅಚ್ಚರಿ+ಕವಿ], ಅಡಂಗು (ನಾ). [ದೇ|| ತಮಿ ಅಡಙು, ತುಳು, ಅಡೆಂಗು, ಡೆಂಗುನಿ, ತೆಲು, ಅಡಗು, ಕೊಲಾ, ಡಾಂಗ್.]

**ಈ ನಿಘಂಟಿನ ವೈಶಿಷ್ಟ್ಯವೆಂದರೆ ನಿಷ್ಪತ್ತಿಯನ್ನು ಸೂಚಿಸುವ ವಿಧಾನ. ಭಾಷಾಶಾಸ್ತ್ರದ ನಿಯಮದಂತೆ ನಿಷ್ಪತ್ತಿಯನ್ನು ಶಾಸ್ತ್ರೀಯವಾಗಿಯೂ ಸುಸಂಬದ್ಧವಾಗಿಯೂ ಸೂಚಿಸಲಾಗಿದೆ. ಈ ತೆರನಾದ ವೈಶಿಷ್ಟ್ಯ ಕಿ ಮತ್ತಾವ ನಿಘಂಟಿನಲ್ಲಿಯೂ ಇದುವರೆಗೆಕಂಡುಬಂದಿಲ್ಲ· ಇದು ಪ್ರಪ್ರಥಮವಾದುದು.**

5. **ವಿರಾಮ ಚಿಹ್ನೆಗಳು** –**ಈ ನಿಘಂಟಿನಲ್ಲಿ ಪ್ರತಿಯೊಂದು ವಿರಾಮ ಚಿಹ್ನೆಗೂ ವಿಶೇಷವಾದ ಅರ್ಥವಿದೆ. ಪೂರ್ಣವಿರಾಮ (.), ಅಲ್ಪವಿರಾಮ (,), ಅರ್ಧವಿರಾಮ (;), ವಿವರಣ ವಿರಾಮ (:), ಉದ್ಧರಣ ' ', ಚೌಕಕಂಸ [ ], ಇಕಂಸ [—], ದುಂಡುಕಂಸ ( ), ಮೊದಲಾದುವು ಮುಖ್ಯವಾದುವುಗಳು.**

6. **ಅಕ್ಷರಗಳು :—**

**12. ಪಾಯಿಂಟ್ ದಪ್ಪಅಕ್ಷರಗಳನ್ನು ಮುಖ್ಯ ಉಲ್ಲೇಖಗಳು ಮತ್ತು ಇತರ ರೂಪಗಳು. 12 ಪಾಯಿಂಟ್ ಸಾದಾಕ್ಷರಗಳನ್ನು ಅರ್ಥವನ್ನು ಕೊಡುವಾಗ, ವಿಶೇಷಾಂಶವನ್ನು ಕೊಡುವಾಗ, ಹೋಲಿಸು, ಪರಾ ಎನ್ನುವಾಗ ಬಳಸಿದೆ. 10 ಪಾಯಿಂಟ್ ದಪ್ಪಅಕ್ಷರಗಳನ್ನು ವಿಶಿಷ್ಟ ರೂಪಗಳು ನುಡಿಗಟ್ಟುಗಳು ಮತ್ತು ಭಾಷೆಗಳನ್ನು ತಿಳಿಸಂವಲ್ಲಿ ಬಳಸಲಾಗಿದೆ. 10 ಪಾಯಿಂಟ್ ಸಾದಾ ಅಕ್ಷರಗಳನ್ನು ಪ್ರಯೋಗಗಳನ್ನು ಉದ್ಧರಿಸುವಾಗ, ಜ್ಞಾತಿ ಶಬ್ದಗಳ ರೂಪಗಳನ್ನು ಕೊಡುವಾಗ ಬಳಸಿದೆ. 8 ಪಾಯಿಂಟ್ ಸಾದಾಕ್ಷರಗಳನ್ನು ಆಕರಗಳನ್ನು ಸೂಚಿಸುವಾಗ ಉಪಯೋಗಿಸಿದೆ.**

7. **ಇತರ ಅಂಶಗಳು.**

**ವರ್ಗಪಂಚಮಾಕ್ಷರಗಳಿಂದ ಕೂಡಿದ ಶಬ್ದಗಳನ್ನು ಬಿಂದು ಸಹಿತವಾಗಿ ಕೊಡಲಾಗಿದೆ. ಉದಾ :** ಅಙ್ಕ= ಅಂಕ. ಕನ್ನಡ ವರ್ಣಮಾಲೆಯಲ್ಲಿ ಬಿಂದುವಿಗಿರುವ ಸ್ಥಾನವನ್ನು ಅನುಸರಿಸಿ ಅಂಕ, ಅಂಚೆ, ಅಂಬು, ಅಂಶ, ಅಕಟ, ಅಕ್ಕ ಈ ಕ್ರಮದಲ್ಲಿ ಕೊಡಲಾಗಿದೆ. ಶಾಸನ ಪ್ರಯೋಗಗಳನ್ನು ಯಾವ ಮಾರ್ಪಾಡುಗಳನ್ನು ಮಾಡದೆ ಯಥಾವತ್ತಾಗಿ ಉದ್ಧರಿಸಲಾಗಿದೆ. "ರ" ಕಾರ ಸಂಯುಕ್ತಾಕ್ಷರವನ್ನು ಅರ್ಕಾವೊತ್ತನ್ನು ಸೇರಿಸಿ ಬಳಸಲಾಗಿದೆ. ಉದಾ: ಆರ್ಯ= ಆರ್ಯ.

ಸುಮಾರು 1100ರ ವರೆಗಿನ ಶಾಸನ ಮತ್ತು ಕಾವ್ಯಗಳಲ್ಲಿ ಪ್ರಯೋಗವಾಗಿರುವ "ರಳ" ವನ್ನು 1700 ರವರೆಗೆ ಶಕಟರೇಫವನ್ನು ಉಳಿಸಿಕೊಳ್ಳಲಾಗಿದೆ. ಶಬ್ದ ಸಮುದಾಯವನ್ನು **ತಪ್ಪಾಗಿ** ಬಿಡಿಸುವುದು, ಲೇಖಕ ಸ್ಖಾಲಿತ್ಯಗಳು, ಮುದ್ರಣ ದೋಷಗಳು, ಇವೇ ಮೊದಲಾದವುಗಳಿಂದ ಸಂಭವಿಸಿರಬಹುದಾದ ಮಿಥ್ಯಾಶಬ್ದಗಳನ್ನು ಈ ನಿಘಂಟಿನಲ್ಲಿ ಕೊಟ್ಟಿಲ್ಲ. ಉದಾ. ಅ ಗ ಲ್ತೆ, ಅಗ್ಗಾಯಿತಿ. [= ಅಗಲ್ಕೆ, ಅಗ್ಗಾಯಿಲೆ].

ಈ ನಿಘಂಟು ಸುಮಾರು ಐದುಸಾವಿರ ಪುಟಗಳಷ್ಟಾಗಬಹುದೆಂದು ಅಂದಾಜು ಮಾಡಲಾಗಿದೆ. ಇದರಲ್ಲಿ ಸಾವಿರದ ಇನ್ನೂರೈವತ್ತು ಪುಟಗಳ ನಾಲ್ಕು ಸಂಪುಟಗಳಿರುತ್ತವೆ. ಪ್ರತಿ ಪುಟದಲ್ಲಿಯೂ ಎರಡೆರಡು ಕಾಲಂಗಳಿರುತ್ತವೆ. ಪ್ರತಿ ಕಾಲಂದಲ್ಲಿ ನಲವತ್ತಾರು ಸಾಲುಗಳಿರುತ್ತವೆ. ಓದುಗರಿಗೆ ಅನುಕೂಲವಾಗಲೆಂಬ ದೃಷ್ಟಿಯಿಂದ ಸಾಲುಗಳಿಗೂ ಅಂಕೆಗಳನ್ನು ಕೊಡಲಾಗಿದೆ. ಪ್ರಾರಂಭದಿಂದ ಇದು ವರೆಗೆ ಸುಮಾರು 8ಲಕ್ಷ ಪಟ್ಟಿಕೆಗಳು 35 ಸಾವಿರ ಪುಟಗಳ ಮೊದಲಹಸ್ತಪ್ರತಿ (ಸಕಾರದವರೆಗೆ), ಮುದ್ರಣ ಹಸ್ತಪ್ರತಿ ಎಂಟುಸಾವಿರ ಪುಟಗಳು. (ಕಕಾರದ ವರೆಗೆ) ಮುದ್ರಣ ಪುಟಗಳು 1163 ಮತ್ತು ಸಂಕೇತ ಸೂಚಿ ಸಿದ್ಧವಾಗಿದೆ. ಸಂಪಾದಕ ಸಮಿತಿ 171 ಬಾರಿ ಸಭೆಸೇರಿ ಚರ್ಚಿಸಿದೆ.

ಈ ನಿಘಂಟನ್ನು ಸಿದ್ಧಪಡಿಸುವಲ್ಲಿ ತಮ್ಮ ಜೀವಮಾನವನ್ನೇ ಮುಡುಪಾಗಿಟ್ಟು ಕೊನೆಯ ಉಸಿರು

ಇರುವವರೆಗೂ ದುಡಿದ ದಿವಂಗತ ತೀ. ನಂ. ಶ್ರೀಕಂಠಯ್ಯನವರನ್ನು ನೆನೆಯುವುದು ಕನ್ನಡಿಗರ ಆದ್ಯ ಕರ್ತವ್ಯವಾಗಿದೆ. ಅವರು ಹಾಕಿಕೊಟ್ಟ ಮಾರ್ಗದಲ್ಲಿ ನಿಘಂಟು ಮುಂದುವರಿಯುತ್ತಿದೆ. ವಿದ್ವನ್ಮಣಿಗಳಾದ ಡಾ. ಡಿ. ಎಲ್. ನರಸಿಂಹಾಚಾರ್ ಅವರ ನೇತೃತ್ವದಲ್ಲಿ ಶ್ರೀ ಎಸ್. ಬಸವಾರಾಧ್ಯ ಅವರ ಸಂಪಾದಕತ್ವದಲ್ಲಿ ನಿಘಂಟು ಜಾಗ್ರತೆಯಾಗಿಯೂ ಕ್ರಮಬದ್ಧವಾಗಿಯೂ ಬರುವುದರಲ್ಲಿ ಸಂದೇಹವಿಲ್ಲ. ಅವರ ಅವಿರತ ಸೇವೆ ಸ್ತುತ್ಯಾರ್ಹವಾದುದು. ಮನನೀಯವಾದುದು.

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರುಗಳು ನಿಘಂಟಿನ ಬಿಡುಗಡೆಗಾಗಿ ಬಹಳ ಶ್ರಮಪಟ್ಟರು. ಮೈಸೂರು ಸರ್ಕಾರ ಉದಾರವಾಗಿ ಧನಸಹಾಯಮಾಡಿದೆ, ಮಾಡುತ್ತಿದೆ. ನಿಘಂಟಿನ ಮೊದಲ ಸಂಚಿಕೆಯನ್ನು ದಿನಾಂಕ 26—1—1964ರಂದು ಮುಖ್ಯಮಂತ್ರಿಗಳಾಗಿದ್ದ ಮಾನ್ಯಶ್ರೀ ಎಸ್. ನಿಜಲಿಂಗಪ್ಪನವರು ಬಿಡುಗಡೆ ಮಾಡಿದ್ದರು. ಮೊದಲನೆಯ ಸಂಪುಟವನ್ನು ಅರ್ಥಸಚಿವರಾದ ಮಾನ್ಯ ಶ್ರೀ ರಾಮಕೃಷ್ಣ ಹೆಗ್ಗಡೆಯವರು ಸಾಹಿತ್ಯ ಪರಿಷತ್ತಿನ ಸುವರ್ಣ ಮಹೋತ್ಸವ ಮತ್ತು 47ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸುಸಂದರ್ಭದಲ್ಲಿ ಬಿಡುಗಡೆ ಮಾಡುತ್ತಿರುವುದು ಯಥಾರ್ಥವಾಗಿದೆ. ನಿಘಂಟನ್ನು ಪಡೆಯಲು ಸುಮಾರು ಐದುನೂರು ಸಂಸ್ಥೆ ಮತ್ತು ವ್ಯಕ್ತಿಗಳು ಸದಸ್ಯರಾಗಿ ಸಂಚಿಕೆಗಳನ್ನು ಪಡೆಯುತ್ತಿದ್ದಾರೆ. ನಿಘಂಟಿನ ಒಟ್ಟು ಬೆಲೆ ಒಂದು ನೂರು ರೂಗಳು. ಪ್ರತಿ ಸಂಚಿಕೆಗೆ ನಾಲ್ಕು ರೂಪಾಯಿಗಳು ಕನ್ನಡ ಜನತೆ ಬಿಚ್ಚು ಮನದಿಂದ ನಿಘಂಟಿಗೆ ಸದಸ್ಯರಾಗಿ, ಅದನ್ನು ಅಭ್ಯಾಸಮಾಡಿ ತನ್ಮೂಲಕ ಕನ್ನಡ ನಾಡು ಮತ್ತು ನುಡಿಯ ಸೇವೆ ಸಲ್ಲಿಸಬೇಕಾಗಿ ಪ್ರಾರ್ಥನೆ. ಸಹೃದಯರ ದೃಷ್ಟಿಯಿಂದ ನಿಘಂಟಿನಲ್ಲಿ ಅಚ್ಚಾದ ದೇಶ್ಯ, ತದ್ಭವ, ಸಂಸ್ಕೃತ, ಮತ್ತು ಅನ್ಯದೇಶ್ಯಗಳ ಮೂರು ಉಲ್ಲೇಖಗಳನ್ನು ಇಲ್ಲಿ ಕೊಡಲಾಗಿದೆ.

"ಬರೆಹದಲಿ ಉರುಳಿದುವು ವರುಷವೀರೆಂಟು
ಸರಿಯಾಗಿ ಬಂತು ಚಿನ್ನದ ಹಬ್ಬಕೆಮೊದಲಗಂಟು
ಬರೆಯುವಗೆ ಗೊತ್ತುದರ ಬಿರುಸ ಕಗ್ಗಂಟು
ಅರಸುವ ಕನ್ನಡಿಗನಿಗೆ ಇದೊಂದು ಕೈಗಂಟು"

॰ ॰ ॰ ॰

**ಅಕ್ಕಿ 1** (ನಾ). ೧. **ಬತ್ತದ ಹೊಟ್ಟು ತೆಗೆದ ಮೇಲೆ ಉಳಿಯುವ ಕಾಳು : ಕಳಶವುಂ ಕನ್ನಡಿಯುಂ ಪೂವುಮಕ್ಕಿಯುಂ ಮಾಧುಫಲಮುಂ** (ವಡ್ಡಾರಾ. ೭೮—೭). **ಪನ್ನಿರ್ಕಂಡುಗದಕ್ಕಿಯ ಕೂಳುಮ** [೦] (ಪಂಪಭಾ. ೩—೨೫ ವ) **ಜಲವುಕ್ಕುವುದಕ್ಕೆ ಮುನ್ನವೆ ಅಕ್ಕಿ ಬೆಂದಿತು** (ಮೋಳಿಮಾ. ೮೦೧); **ಅಕ್ಕಿಯಮೇಲೆ ಆಸೆ ನಂಟರ ಮೇಲೆ ಪ್ರೀತಿ** (ಗಾದೆ). P ಸಣ್ಣಕ್ಕಿ, ದಪ್ಪಕ್ಕಿ, ಕೇಸಕ್ಕಿ, ಬೆಣತಕ್ಕಿ, ನೆಲ್ಲಕ್ಕಿ, ಗಂಧಸಾಲೆಯಕ್ಕಿ, ಜೀರಾಸಣ್ಣಕ್ಕಿ, ದೇಮಲ್ಲಿಗೆಯಕ್ಕಿ, ಮರಳಕಾಂತಿಯಕ್ಕಿ, ಇತ್ಯಾದಿ ಹೋ. ೨. ಅಕ್ಕಿಯಂತಿರುವ ಕಾಳು : **ವೇಣುವಿಗೆ ಅಕ್ಕಿ ಹುಟ್ಟದ** [ರೆ] ಮತ್ತೆ **ಬಾಳುವೆಯುಂಟೆ?** (ಮಾದೂಳ ೨೧). P ಬಿದಿರಕ್ಕಿ, ನವಣೆಯಕ್ಕಿ, ಸಾವೆಯಕ್ಕಿ, ರಾಜಾನ್ನದಕ್ಕಿ, ಹಾರಕದಕ್ಕಿ, ಏಲಕ್ಕಿ ಇತ್ಯಾದಿ ಹೋ. ೩. ರಂಗೋಲಿಯ ಹಸೆ ಬರೆಯುವಾಗ ಇಡುವ ಅಕ್ಕಿಯ ಆಕಾರದ ಚುಕ್ಕಿ. **ಪಸುರ್ಪೊನ್ನ ಜಗಲಿ ಪಚ್ಚೆಯ ಪಸುರ್ವಂದರ್ ಮುತ್ತಿನಕ್ಕಿ ನೀಲದ ಜಾಗಂ** (ಕಾವ್ಯಾವ, ೨೩೬) ೪. ಮಂತ್ರಾಕ್ಷತೆ : **ಜನನಂ ಪೂಜಿಸಿದಕ್ಕಿ ಮಾಲೆ ಸೊಡರ್ಗಳ್** (ಲೀಲಾವ ೩—೭೭). ಅಕ್ಕಿಯಭೋಜ—ಅಕ್ಕಿಭೋಜ **ಗೌಡರ ಮನೆಯಲ್ಲಿ ಜವಾನನಿಗೆ ಔತಣದ ಊಟವಾಗುತ್ತಿತ್ತು. ಅವನಿಗೆ ಕುಡಿಯುವ ಚಟವಿದ್ದರೆ ಬಗನೆ ಕಳ್ಳನ್ನು ಅಥವಾ ಅಕ್ಕಿಯ ಭೋಜವನ್ನು ಕುಡಿಸುತ್ತಿದ್ದರು** (ಪಂಜಪಂ. ೪೭). **ತಲೆಗೆ ಅಕ್ಕಿ** ಕಾಣಿಸು = ಮದುವೆಮಾಡು; ಅಕ್ಷತಾರೋಪಣ ಮಾಡಿಸು : **"ಮಗು, ತಂಗಿಗೆ ಹದಿನೇಳು ವರ್ಷ ತುಂಬಿತು. ಬಸಪ್ಪಯ್ಯನ ಮನೆ ಒಳ್ಳೆಯದಲ್ಲ. ಆದಷ್ಟು ಬೇಗನೆ ತಲೆಗೆಅಕ್ಕಿಕಾಣಿಸುವ ಯೋಚನೆ ನನಗೆ"** (ಮಸಕೂ ೯) **ಬಾಯಿಗೆ ಅಕ್ಕಿ ಕಾಳು ಹಾಕಿಕೊಂಡಿರು**= ಏನು ಕೇಡಾಗುವುದೋ ಎಂದು ಹೆದರಿ ನಡುಗುತ್ತಿರು,—ಆತಂಕಪಟ್ಟುಕೊಳ್ಳುತ್ತಿರು (ಹೆಣದ ಬಾಯಿಗೆ ಅಕ್ಕಿಯನ್ನು ಹಾಕುವ ಸಂಪ್ರದಾಯದಿಂದ ಈ ಅರ್ಥ ಬಂದಿರಬಹುದು. [ದೇ॥ *ಅರ್ಕಿ. ತಮಿ. ಅರಿ, ಅರಿಚಿ. ಮಲ. ತುಳು. ಅರಿ; ಕೊಡ. ಅರಿ, ಅಕ್ಕಿ; ತೆಲು. ಅಕ್ಕುಳ್ಳು]

ಅಕ್ಕಿ2 (ನಾ). ಕಣ್ಣು (ಕಿ). [ಸಂ ಅಕ್ಷಿ]

ಅಕುಲೀನೆ (ನಾ). ೧. ಸತ್ಕುಲದಲ್ಲಿ ಹುಟ್ಟಿಲ್ಲದವಳು; ಹೀನಕುಲದವಳು. ೨. ಭೂಮಿಯ ಸ್ಪರ್ಶವಿಲ್ಲದವಳು. ೧, ೨: **ಮಲಯಮೇಖಲೆಯಂತೆ ಚಂದನಪಲ್ಲವಾವತಂಸೆಯುಂ..... ದಿವ್ಯಕಾಂತೆಯಂತಕುಲೀನೆಯುಂ...... ಯಕ್ಷಾಧಿಪಲಕ್ಷ್ಮಿಯಂತಳಕೋದ್ಭಾಸಿಯೆನಿಸಿದೇರಂಜವ್ವನೆಯ ರೂಪಾತಿಶಯಮನೆಮೆಯಿಕ್ಕದೆ ಶೂದ್ರಕಂ ನೋಡುತ್ತಮತಿವಿಸ್ಮಿತಚಿತ್ತನಾಗಿ** (ಕಾದಂಪೂ ೪೯).

[ಸಂ. ಅಕುಲೀನಾ (ಅ—+ಕುಲೀನಾ ; ಅ—+ಕು+ಲೀನಾ)]

ಅಗ್ನಿ (ನಾ.) ೧. ಬೆಂಕಿ; ಕಿಚ್ಚು. ೨. ಬೆಂಕಿಯ ಅಧಿದೇವತೆ ; ಅಷ್ಟದಿಕ್ಪಾಲಕರಲ್ಲಿ ಒಬ್ಬ ; ಆಗ್ನೇಯ ದಿಕ್ಕಿನ ಅಧಿಪತಿ. ೩. ಆಹಾರವನ್ನು ಜೀರ್ಣಿಸುವ ಅಂತಶ್ಶಕ್ತಿ ; ಜಠರಾಗ್ನಿ. ೪. ಪಿತ್ತರಸ. ೫. ಮೂರು ಎಂಬ ಸಂಖ್ಯೆಗೆ ಒಂದು ಸಂಕೇತ. ೬, ಚಿನ್ನ. ೭. ಚಿತ್ರಮೂಲ ಎಂಬ ಗಿಡ : **"ಚಿತ್ರಮೂಲಂ ವ್ಯಾಳವಗ್ನಿ ಚಿತ್ರಕವಕ್ಕು"** (ಮಂಗರಾ. ೩೯—೨೬). ೮, ತುಗ್ಗಲು ಎಂಬ ಮರ ; **"ಅಗ್ನಿಯೆನೆ ತುಗ್ಗಿಲಕ್ಕುಂ"** (ಮಂಗರಾ, ೩೬—೧೮). ೯, ನಿಂಬೆ. ೧೦. [ಛಂದ] ಅಕ್ಷರಗಣಗಳಲ್ಲಿ ಒಂದು ; ರಗಣ (—u—) : **"ಆದ್ಯಂತ ಗುರುವಿರಲಗ್ನಿಯಕ್ಕು"** (ಮಂಗರಾ,೧೦೭—೨೦). ೧೧ "ಕೇಸರ" (ಗುವಿಮೋ) [ಸಂ.]

ಅಕ್ಖಡ, ಆಕ್ಕಡ, ಅಖಾಡ (ನಾ). ಕುಸ್ತಿಮಾಡುವ ಪ್ರದೇಶ; ಮಲ್ಲಯುದ್ಧದ ರಂಗ : **ಸುಮಿತ್ರನೆಂಬರಸಂ ಮಾನಕಷಾಯ ಮಹಾಗರ್ವಿತಂ ಮಲ್ಲಯುದ್ಧದೊಳ್ ಕುಶಲನಕ್ಖ** [ಡ] **ದೊಳ್ ಪಲರುಮನಿಕ್ಕಿ ಗೆಲ್ದು**(ಚಾವುಂಊ.೪೦—೨). **ಮತ್ತಂ ಮಲೆತು ನಿಂದು ಅಕ್ಖಡದೊಳ್ ಪೊಕ್ಕು ಬಾಹಪ್ಪಳಿಸಿ** (ಗಿರಿಕ. ೨—೧.೫ವ). **ಇಕ್ಕುಳದಂತಖ್ಖ** [ಕ್ಕ] **ಡದೊಳ್ ಕಡಂಗಿ ಪಿಡಿದೌಂಕಲ್ ಬಲ್ಲಮಲ್ಲರ್** (ಧರ್ಮನಾ. ೨—೪೮) **ಕೆಂಬಟ್ಟೆಯ ಮಿಸುಗುವ ಪಾಸೆಂಬಕ್ಖಡದೊಳು ನವ ಘಸೃಣ ವಿಮಿಶ್ರಿತ ಗಂಧರಜಮನಂಗದೊಳಿಟ್ಟು** (ಜಯಕಾ ೮-೫೦). **ಅಕ್ಕಡ; ಜಗಜಟ್ಟಿಗಳಕ್ಕಡಂಗಳೊಳ್ ಮರಳದೆ ಪೋರ್ವ**(ಸೂಕ್ತಿಸು. ೪-೮೫). **ಕರತಳವ ಮಾಲಭುದ್ದಿಂಜದಲಿ ಶಿರದಲಂದಕ್ಕಡದ ಮಣ್ಣನು ಬೆರಳಲುದುರಿಚಿ** (ಕುವ್ಯಾಕ ೧೯—೪೧). **ಜಟ್ಟಿಗಳಾ ಪಿರಿಯಕ್ಕಡಮಾ ಮೊದಲ ಬಾಹೆಯೊಳು ಬಂಧುರವಾಗಿಯೆ ತೀವಿಹುದು**(ಶ್ರೀಪಾಲ ೧-೬೮) ಅಖಾಡ : **ಮೂರನೆಯ ಜಾವದಹೊತ್ತಿಗೆ ಎಲ್ಲರೂ ಅಖಾಡದಲ್ಲಿ ಸೇರಿದರು** (ಝೂರಾಣಿ.೨೮) ←ಪ್ರಾ. ಅಕ್ಖಾಡಗ,ಅಕ್ಖಾಡಯ)←ಸಂ. ಅಕ್ಷವಾಟಕ, ಅಕ್ಷಪಾಟ ; ಪಾಲಿ. ಅಕ್ಖವಾಟ; ಮರಾ. ಅಖಾಡಾ, ಅಕ್ಖಾಡ; ಹಿಂ. ಅಖಾಡಾ]



## ರಾಷ್ಟ್ರಪ್ರಶಸ್ತಿ ವಿಜೇತ ಆದರ್ಶ ಪ್ರಾಥಮಿಕ ಶಾಲಾಧ್ಯಾಪಕ
## ಶ್ರೀ ಆರ್. ಲಿಂಗಪ್ಪ ಅವರು



1970-71ನೆಯ ಸಾಲಿನಲ್ಲಿ ರಾಷ್ಟ್ರಮಟ್ಟದ ಉಪಾಧ್ಯಾಯ ಪ್ರಶಸ್ತಿ ಗಳಿಸಿದ ಸೂಲಿಕೇರೆ ಪಟೇಲ್
ರೇವಣ್ಣನವರ ಪುತ್ರರೂ ಉದಾರಿಗಳೂ ಸಿದ್ಧಗಂಗಾ ಹಳೆಯ ವಿದ್ಯಾರ್ಥಿ ಸಂಘದ ಹಿತಚಿಂತಕರೂ ಆದ
ಶ್ರೀಮಾನ್ ಆರ್. ಲಿಂಗಪ್ಪನವರು ದೆಹಲಿಯಲ್ಲಿ ಉಪರಾಷ್ಟ್ರಪತಿಗಳಿಂದ ಪ್ರಶಸ್ತಿಪತ್ರ ಸ್ವೀಕರಿಸುತ್ತಿರುವ ದೃಶ್ಯ

ಶ್ರೀಯುತ ಆರ್. ಲಿಂಗಪ್ಪನವರು 30-4-1916ನೆಯ ಇಸ್ವಿಯಲ್ಲಿ ಜನ್ಮತಾಳಿ ಬೆಂಗಳೂರಿಗೆ ಬಂದು
ಪ್ರಾಥಮಿಕಶಾಲಾ ಉಪಾಧ್ಯಾಯರಾಗಿ ಕಾಯಕ ಕೈಗೊಂಡು ತಮ್ಮ ಕಾರ್ಯದಲ್ಲಿ ಶ್ರದ್ಧಾಭಕ್ತಿ ವಿಶ್ವಾಸ
ಗಳಿಂದ ದುಡಿದಿದ್ದಾರೆ. ಅನೇಕ ದಾನಧರ್ಮಗಳನ್ನು ಮಾಡಿದ್ದಾರೆ. ತಮ್ಮ ಸ್ವಂತ ಊರಾದ ಸೂಲಿಕೇರೆ
ಯಲ್ಲಿ 'ವಿಶ್ವೇಶ್ವರಸ್ವಾಮಿ'ಯ ಶಿವಾಲಯ ಕಟ್ಟಿಸಿದ್ದಾರೆ. ಇದೇ ಹೆಸರಿನ ಹೈಸ್ಕೂಲ್ ಕಟ್ಟಡವೊಂದನ್ನು
ಕಟ್ಟಿಸಿ ಗ್ರಾಮಾಂತರ ಪ್ರದೇಶದ ಮಕ್ಕಳ ವಿದ್ಯಾಭ್ಯಾಸಕ್ಕೆ ಅನುವುಮಾಡಿಕೊಟ್ಟಿದ್ದಾರೆ. ಒಂದು ಸಾರ್ವ
ಜನಿಕ ವಿದ್ಯಾರ್ಥಿನಿಲಯವನ್ನು ಕಟ್ಟಿಸಿ ಅನೇಕ ಬಡ ಮಕ್ಕಳಿಗೆ ಉಚಿತ ಅಶನ ವಸತಿಯ ಸೌಲಭ್ಯ ಕಲ್ಪಿಸಿ
ದ್ದಾರೆ. ಇವರ ಸೇವೆ, ತ್ಯಾಗಬುದ್ಧಿಗಳು ಆದರ್ಶಪ್ರಾಯವಾದುವು. ಇವರಿಗೆ ಸಿದ್ಧಗಂಗಾ ಹಳೆಯ
ವಿದ್ಯಾರ್ಥಿಸಂಘವು ಅಭಿನಂದನೆ ಸಲ್ಲಿಸುತ್ತದೆ.

—ಸಂ.



### ಆದರ್ಶ ಉಪಾಧ್ಯಾಯ
## ರಾಷ್ಟ್ರಪ್ರಶಸ್ತಿ ವಿಜೇತ ಆಸ್ಥಾನವಿದ್ವಾನ್
## ಎಂ. ಜಿ. ನಂಜುಂಡಾರಾಧ್ಯ ಅವರು



ಆಸ್ಥಾನವಿದ್ವಾನ್, ಶಕ್ತಿವಿಶಿಷ್ಟಾದ್ವೈತ ವಿದ್ಯಾವಿಭೂಷಣ ಎಂ. ಜಿ. ನಂಜುಂಡಾರಾಧ್ಯರು 1970ನೇ ಇಸ್ವಿಯ ಉಪಾಧ್ಯಾಯ ದಿನಾಚರಣೆಯಂದು ಉಪರಾಷ್ಟ್ರಪತಿಗಳಿಂದ ರಾಷ್ಟ್ರೀಯಪ್ರಶಸ್ತಿ ಪಡೆಯುತ್ತಿರುವ ದೃಶ್ಯ.

ಶ್ರೀ ಸಿದ್ಧಗಂಗಾ ಕ್ಷೇತ್ರದ ಹಳೆಯ ವಿದ್ಯಾರ್ಥಿಗಳೂ ಶ್ರೀ ನಿ॥ ನಿ॥ ಪ್ರ॥ ಉದ್ದಾನ ಶಿವಯೋಗಿಗಳವರ ಮತ್ತು ಶ್ರೀ ನಿ॥ ನಿ॥ ಪ್ರ॥ ಶಿವಕುಮಾರಸ್ವಾಮಿಗಳವರ ಕೃಪೆಗೆ ಪಾತ್ರರಾದವರೂ ಆದ ಶ್ರೀಮಾನ್ ಎಂ. ಜಿ. ನಂಜುಂಡಾರಾಧ್ಯರು ಮೈಸೂರಿನ ಮಹಾರಾಜಾ ಸಂಸ್ಕೃತ ಕಾಲೇಜಿನಲ್ಲಿ ಶಕ್ತಿವಿಶಿಷ್ಟಾದ್ವೈತದ ಪ್ರೊಫೆಸರ್ ಆಗಿ ಕೆಲಸಮಾಡುತ್ತಿದ್ದಾರೆ. ಇವರ ವಿದ್ವತ್ತಿಗೆ ಮೆಚ್ಚಿ ಬಹುದಿನಗಳ ಹಿಂದೆಯೇ ಮೈಸೂರಿನ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಅವರು ಇವರಿಗೆ ಆಸ್ಥಾನವಿದ್ವಾನ್ ಪದವಿಯನ್ನಿತ್ತಿದ್ದರು. 1970ನೆಯ ಇಸ್ವಿಯಲ್ಲಿ ಉತ್ತಮವರ್ಗದ ಉಪಾಧ್ಯಾಯರೆಂದು ರಾಷ್ಟ್ರೀಯ ಮಟ್ಟದ ಉಪಾಧ್ಯಾಯ ಪ್ರಶಸ್ತಿಯನ್ನು ಪಡೆದ ಶ್ರೀಯುತರನ್ನು ಸಿದ್ಧಗಂಗಾ ಹಳೆಯ ವಿದ್ಯಾರ್ಥಿ ಸಂಘವು ಅತೀವ ಅಭಿಮಾನದಿಂದ ಅಭಿನಂದಿಸುತ್ತದೆ. ಇವರು ಮೈಸೂರಿನಲ್ಲಿ ಪ್ರಬೋಧ ಗ್ರಂಥಮಾಲೆಯಿಂದ ಸುಮಾರು 60ಕ್ಕೂ ಮಿಕ್ಕು ಗ್ರಂಥಗಳನ್ನು, ಸಂಪಾದಿಸಿ, ರಚಿಸಿ, ಅನುವಾದಿಸಿ, ಪ್ರಕಟಿಸಿದ್ದಾರೆ. ಸೇವೆಯು ಇತೋಽತಿಶಯ ಅ[illegible]ಗೊಂಡು ಕನ್ನಡನಾಡು ನುಡಿ, ಸಂಸ್ಕೃತಿಗೆ ನೆರವಾಗಲೆಂದು ಹಾರೈಸುತ್ತೇವೆ.

—ಸಂ.

# ಕಲಾತಪಸ್ವಿ ದಿ|| ಎಂ. ವೀರಪ್ಪ

—ಪಿ. ಆರ್. ತಿಪ್ಪೇಸ್ವಾಮಿ.

ಚಿತ್ರಕಲಾ ವಿಶಾರದ ಶ್ರೀಯುತ ಪಿ. ಆರ್. ತಿಪ್ಪೇಸ್ವಾಮಿ, ಬಿ.ಎ. ಅವರ ಹೆಸರನ್ನು ಕೇಳದ ಕನ್ನಡಿಗರಿಲ್ಲ. ಕಲಾ ಪ್ರಪಂಚಕ್ಕೆ ತಮ್ಮ ಜೀವಿತದ ಬಹು ಭಾಗವನ್ನು ವ್ಯಯಿಸಿ ಅನೇಕ ಅತ್ಯುತ್ತಮ ಕೃತಿ ರಚನೆ ಮಾಡಿ ಕನ್ನಡ ನಾಡಿನ ಚಿತ್ರ ಕಲಾ ಪ್ರಪಂಚಕ್ಕೆ ಅಮೋಘ ಕಾಣಿಕೆ ಸಲ್ಲಿಸಿರುವ ಶ್ರೀಯುತರು ಕನ್ನಡ ನಾಡಿನ ಶ್ರೇಷ್ಠ ಕಲಾವಿದ ದಿ|| ಎಂ. ವೀರಪ್ಪನವರ ಬಗೆಗೆ ಬರೆದ ಪರಿಚಯಾತ್ಮಕ ಲೇಖನ ಬರೆದು ನಮ್ಮ ಓದುಗರಿಗೆ ಒದಗಿಸಿದ್ದಾರೆ. ಶ್ರೀಯುತರಿಗೆ ಧನ್ಯವಾದಗಳು.

—ಸಂ.



(ಮೇಲಿನ ಚಿತ್ರ ವೀರಪ್ಪನವರ ಕಲಾ ಶಾಲೆಗೆ ರಾಜ್ಯದ ಮುಖ್ಯ ಮಂತ್ರಿ ಶ್ರೀ ವೀರೇಂದ್ರ ಪಾಟೀಲರು ಸಂದರ್ಶಿಸಿದಾಗ ತೆಗೆದುದು. ಎಡಗಡೆಯಿಂದ ಮೊದಲಿನವರೇ ಶ್ರೀ ದಿ|| ವೀರಪ್ಪನವರು, ಬಲ[illegible] ಮೊದಲ ನೆಯವರೇ ಲೇಖಕರೂ, ಕಲಾವಿದರೂ ಆದ ಶ್ರೀ ಪಿ. ಆರ್. ತಿಪ್ಪೇಸ್ವಾಮಿ ಅವರು.)

1969ರ ಜೂನ್ ಐದರ ನಡುರಾತ್ರಿ ನಿದ್ರೆಯಲ್ಲಿದ್ದ ನನ್ನನ್ನು ಮೈಸೂರು ನಗರದ ಪತ್ರಿಕೋದ್ಯೋಗಿ ಮಿತ್ರ ಶ್ರೀ ಕೃಷ್ಣವಟ್ಟಂ ಅವರು ಎಬ್ಬಿಸಿದರು. "ದೊಡ್ಡ ಕಲಾವಿದರೊಬ್ಬರು ತೀರಿಕೊಂಡರಂತೆ! ನಿಮಗೆ ಗೊತ್ತಿಲ್ಲವೇ?" ಎಂದು ವಿಚಾರಿಸಿದರು.

ಅವರ ಹೆಸರನ್ನು ಕೇಳಿದೆ "ಯಾರವರು" ಎಂದು.

'ವೀರಪ್ಪ' ಎಂಬ ಮಾತನ್ನು ಅವರ ಬಾಯಿಂದ ಕೇಳಿ ದಿಗ್ಭ್ರಾಂತನಾದೆ ಹೃದಯ ಶೂನ್ಯವಾಯಿತು. ಬಾಯಿಂಬಾರದಾಯಿತು. ಅವರ ಕೇಳಿಕೆಗೆ ಉತ್ತರವೇ ನನ್ನಿಂದ ಬಾರದಾಯಿತು, ಕನ್ನಡ ನಾಡಿನ ಧೀಮಂತ ಕಲಾವಿದ ವೀರಪ್ಪನವರು ಇಷ್ಟುಬೇಗ ನಮ್ಮಿಂದ ದೂರವಾದರೆ? ಎಂದು ತತ್ತರಿಸುತ್ತ–ಮಹಡಿಯಿಂದ ಕೆಳಗಿಳಿದು ಬಂದೆ.

ಎರಡು ಮೂರು ವರ್ಷಗಳಿಂದ ರಕ್ತದ ಒತ್ತಡದಿಂದ ವೀರಪ್ಪನವರು ನರಳುತ್ತಿದ್ದರು ಅದೆಷ್ಟೋ ಸಾರಿ ಸಾವಿನ ದವಡೆಯಿಂದ ಪಾರಾಗಿದ್ದರು. ಆದರೂ ನಮ್ಮ ಸಂದರ್ಶನದ ವೇಳೆಯಲ್ಲಿ ಆದಾವ ನೋವನ್ನೂ ತೋರ್ಪಡಿಸಿದವರಲ್ಲ. ನಮ್ಮೊಡನೆ ಎಂದಿನಂತೆಯೇ ನಗುಮುಖದಿಂದ ಮಾತನಾಡುತ್ತಿದ್ದರು.

ವೀರಪ್ಪನವರು ಕರ್ನಾಟಕದ ಪ್ರಬುದ್ಧ ಕಲಾವಿದರಲ್ಲಿ ಒಬ್ಬರು ಮಾತ್ರ ಅಲ್ಲ ಹಿರಿಯ ವ್ಯಕ್ತಿತ್ವ ಪಡೆದಿದ್ದವರು. ಸಹೃದಯತೆ, ಅನುಕಂಪ, ಅವರಲ್ಲಿ ಮೈಗೂಡಿಕೊಂಡು ಬಂದಿದ್ದವು. ಅವರ ಮನೆಯಲ್ಲಿ ಅತಿಥಿಗಳಿಗೆ ಸದಾ ಸ್ವಾಗತವಿತ್ತು. ಬಡತನದಲ್ಲಿ ಬೆಳೆದು ಬಂದು ಶ್ರೀಮಂತ ಗದ್ದುಗೆಗೆ ಏರಿದ ಅವರಲ್ಲಿ ಅಟ್ಟಹಾಸ ಲವಲೇಶವೂ ಇರಲಿಲ್ಲ. ಉಡುಗೆ ತೊಡುಗೆಯಲ್ಲೂ ಅವರು ಸರಳ ಹಾಗೂ ಸ್ವಚ್ಛತೆಯನ್ನೂ ಕಾಪಾಡಿಕೊಂಡು ಬಂದಿದ್ದರು. ತುಂಬ ಸುಸಂಸ್ಕೃತ ಸಂಸಾರ ಅವರದು. ತನ್ನ ಸೋದರರನ್ನೂ ಸಮಾನ ದೃಷ್ಟಿಯಿಂದ ನೋಡಿಕೊಂಡು ಕಲಾರಂಗದಲ್ಲಿ ಬಹು ದೊಡ್ಡ ಸಾಧನೆಯನ್ನು ಸಾಧಿಸಿ ನಮಗೆ ಮೇಲ್ಪಂಕ್ತಿ ಹಾಕಿಕೊಟ್ಟರು.

ಯಾವ ಕಲಾವಿದರಿಗಾದರೂ ಗೌರವಿಸುವಂತಾದಾಗ ಸಹಾಯ ಧನಕ್ಕೆ ಒದ್ದಾಡುತ್ತಿದ್ದ ನಮಗೆ ಪ್ರಥಮ ನೆನಪು ಬರುತ್ತಿದ್ದ ಹೆಸರು ವೀರಪ್ಪನವರದು. ಅದೆಷ್ಟೋಸಾರಿ ಕಲಾವಿದರ ಸಮ್ಮೇಳನಗಳಿಗೆ, ಸಭೆಗಳಿಗೆ, ಕಲಾವಿದರ ಗೌರವ ಕೂಟಗಳಿಗೆ, ಬಡ ಕಲಾವಿದ್ಯಾರ್ಥಿಗಳಿಗೆ – ಹೀಗೆ ನೂರೆಂಟು ಕಡೆ ಉದಾರ ಹಸ್ತ ನೀಡಿದ ಇವರನ್ನು ಯಾರುತಾನೆ ಮರೆತಾರು?

ಸಾವಿನ ಸೆಣಸಾಟದ ಆ ಅಂತಿಮ ಗಳಿಗೆಯವರೆಗೂ ಅವರು ಅಪಾರ ಕೃತಿಗಳನ್ನು ರಚಿಸಿದರು, ಶ್ರೀ ಬಸವಣ್ಣನವರ ವಚನಗಳಿಗೆ ಅನುಸಾರವಾಗಿ ಅನೇಕ ಚಿತ್ರಗಳು ಅವರ ಕುಂಚದಿಂದ ಮೂಡಿ ಹೊರಬಂದವು. ಹಂಪೆಯ ವಿರೂಪಾಕ್ಷ ದೇಗುಲ ಮತ್ತು ಗಾಂಧೀಜಿಯವರ ಸಾನ್ನಿಧ್ಯ – ಎಂಬುವು ತೈಲ ವರ್ಣದ ಬೃಹತ್ ಕೃತಿಗಳು.

ವೀರಪ್ಪನವರನ್ನು ನಾನು ಸಂದರ್ಶಿಸಿದಾಗಲೆಲ್ಲ ಒಂದೊಂದು ನೂತನ ಚಿತ್ರವನ್ನು ತೋರಿಸುತ್ತಿದ್ದರು. "ನನ್ನ ಆರೋಗ್ಯ ಈ ಬಗೆಯ ಚಿತ್ರ ರಚನೆಯಿಂದ ಸುಧಾರಿಸುತ್ತಾ ಬಂದಿದೆ' ಎಂದು ನುಡಿಯುತ್ತಿದ್ದರು. ಈಚೆಗೆ ಮೈಸೂರು ವಿಶ್ವವಿದ್ಯಾನಿಲಯದಿಂದ ಆಚರಿಸಲಾದ ಬಸವ ಜಯಂತಿ ಸಂದರ್ಭದಲ್ಲಿ ವೀರಪ್ಪನವರ ಕೃತಿಗಳ ಪ್ರದರ್ಶನದ ಏರ್ಪಾಟು ಮಾಡಲಾಗಿದ್ದಿತು, ಬಹುಜನ ವಿದ್ಯಾವಂತರು ಇವರ ಕಲಾಕೃತಿಗಳನ್ನು ನೋಡಿ ಮೆಚ್ಚಿಗೆಯನ್ನು ಸೂಚಿಸಿದ್ದರು,

ಕಲಾರಾಧನೆಯಲ್ಲಿ ಕಷ್ಟ ಕಾರ್ಪಣ್ಯಗಳು ದೂರವಾಗಿ ಸುಖ ಸಂತೋಷ ಸಿಗಬಲ್ಲದು ಎಂಬುದನ್ನು ವೀರಪ್ಪನವರು ತೋರಿಸಿಕೊಟ್ಟಿದ್ದರು. ಇವರು ಡಂಕಣಿಕೋಟೆಯಲ್ಲಿ ತಮ್ಮ ಬಾಲ್ಯವನ್ನು ಕಳೆದು ಮೈಸೂರಿಗೆ ವಿದ್ಯಾಭ್ಯಾಸಕ್ಕಾಗಿ ಬಂದರು. ಮರಿಮಲ್ಲಪ್ಪ ಹೈಸ್ಕೂಲಿನಲ್ಲಿ ವ್ಯಾಸಂಗ ಮಾಡಿದರು, ಚಿತ್ರಕಲೆಯ ಗೀಳು ಬಾಲ್ಯದಿಂದಲೂ ಇದ್ದ ಕಾರಣ ಚಾಮರಾಜೇಂದ್ರ ಕಲಾ ಶಾಲೆಗೆ ಸೇರಿದರು. ನಂತರ ಬೊಂಬಾಯಿಯ ಜೆ. ಜೆ. ಕಲಾಶಾಲೆಗೆ ಸೇರಿದರು. ಅಲ್ಲಿಯ ಪ್ರಿನ್ಸಿಪಾಲರಾಗಿದ್ದ ಗ್ಲಾಡ್ ಸ್ಟೋನ್ ಸಾಲೊಮನ್, ಕಲಾಧ್ಯಾಪಕ ಎಂ. ವಿ. ಧುರಂದರ್ ಅವರ ಮಾರ್ಗದರ್ಶನವಾಯಿತು. ವೀರಪ್ಪನವರ ಶ್ರದ್ಧೆ ಮತ್ತು ತಮ್ಮ ಸಾಧನೆಯಿಂದ ಪ್ರತಿ ವರ್ಷವೂ ತರಗತಿಗೆ ಪ್ರಥಮರಾಗಿಯೇ ಉತ್ತೀರ್ಣರಾಗುತ್ತಾ ಬಂದರು. ಮೆಚಿನ ಶಿಷ್ಯರಾದರು,

ಅಜಂತಕ್ಕೆ ಕಲ್ಯಾಭ್ಯಾಸ ಮಾಡಲು ಕಲಾಶಾಲೆಯ ವಿದ್ಯಾರ್ಥಿಗಳೊಂದಿಗೆ ವೀರಪ್ಪನವರೂ ಹೋದರು. ಅಲ್ಲಿ ಇವರು ಮನಸ್ಸಿಟ್ಟು ಚಿತ್ರಿಸಿ ತಂದ ತಾಯಿ ಮಗು ಮತ್ತು ಅನೇಕ ಅಜಂತದ ಭಿತ್ತಿ ಪ್ರತಿ ಚಿತ್ರಗಳು ಅವರಿಗೆ ಹೆಚ್ಚು ಕೀರ್ತಿಯನ್ನು ತಂದುಕೊಟ್ಟವು. ಅವರ ಕಲಾ ನೈಪುಣ್ಯತೆಯನ್ನು ಕಂಡು ಎಲ್ಲರೂ ಬೆರಗಾದರು. ಅಜಂತಾ ಸಂದರ್ಶನ ವೀರಪ್ಪನವರನ್ನು ಪರಿವರ್ತಿಸಿತು. ಬೊಂಬಾಯಿಯಿಂದ ಮೈಸೂರಿಗೆ ಬಂದವರೆ ಚಾಮರಾಜ ಕಲಾ ಶಾಲೆಯ ಕಲಾಧ್ಯಾಪಕ ವೃತ್ತಿಗೆ ಸೇರಿದರು. ಅಂದಿನ ಕಹಿ ವಾತಾವರಣ ಅಲ್ಲಿಂದ ಹೊರಬರುವಂತೆ ಮಾಡಿತು. ಬೊಂಬಾಯಿ ಆರ್ಟ್ಸ್ ಸ್ಟುಡಿಯೋ ಎಂಬುದನ್ನು ತೆರೆದರು. ನಂತರ ತಮ್ಮ ವ್ಯಕ್ತಿತ್ವವನ್ನು ವಿಸ್ತರಿಸಿ "ಮೈಸೂರು ಟಾಯ್ಸ್‌ಕೊ" ಎಂಬ ಆಟದ ಸಾಮಾನಿನ ಕಾರ್ಖಾನೆಯನ್ನು ೧೯೩೭ರಲ್ಲಿ ಸ್ಥಾಪಿಸಿದರು. ಪಾಶ್ಚಾತ್ಯ ದೇಶಗಳಿಂದ ಈ ಸುಂದರ ಕೃತಿಗಳಿಗೆ ಪ್ರಶಂಸೆ ಬಂದು ಈ ಕಲೆಗೆ ಕೀರ್ತಿಯೂ ಬಂದಿತು. ಮಕ್ಕಳಿಗಾಗಿ "ನಿರ್ಮಲ ಡ್ರಾಯಿಂಗ್ ಬುಕ್" ರಚಿಸಿ ಮುದ್ರಿಸಿ ಪ್ರಕಟ ಮಾಡಿದರು.

ಮೈಸೂರಿನ ಕೈಗಾರಿಕಾ ಉದ್ಯಮಕ್ಕೆ ಹೆಚ್ಚಾಗಿ ನೆರವನ್ನು ತೆಗೆದು ಕೊಳ್ಳಲು ವೀರಪ್ಪನವರಿಗೆ ೧೯೪೭ರಲ್ಲಿ ಅದೇ ಚಾಮರಾಜ ಕಲಾ ಶಾಲೆಯ ಕಲಾ ಪ್ರಾಧ್ಯಾಪಕರಾಗಲು ಕರೆ ಬಂದಿತು. ಅಲ್ಲಿ ಚಿತ್ರ ಕಲಾ ತರಗತಿಗಳ ಮಾರ್ಪಾಟು ಮಾಡಿದರು. ಶಾಲೆಯ ಪ್ರಗತಿಗೆ ಅನೇಕ ರೀತಿಯಲ್ಲಿ ದುಡಿದರು.

ಒಮ್ಮೆ ದೆಹಲಿಗೆ ಹೋಗಿ ಅಲ್ಲಿ ರಾಷ್ಟ್ರಪತಿ ಭವನದಲ್ಲಿ ಮೈಸೂರಿನ ಕಲಾಕೃತಿಗಳನ್ನು ಶೃಂಗರಿಸಿ ಬರುವ ಅವಕಾಶವನ್ನು ಸರ್ಕಾರ ಇವರಿಗೆ ನೀಡಿದ್ದಿತು. ಆಗ ದೆಹಲಿಯ ಕೆಂಪುಕೋಟೆ, ಬಿರ್ಲಾದೇವಾಲಯಗಳನ್ನೂ ಚಿತ್ರಿಸಿಕೊಂಡು ಬಂದರು. ಜಪಾನ್ ದೇಶಕ್ಕೆ ವೀರಪ್ಪನವರನ್ನು ಮೈಸೂರು ಸರ್ಕಾರ ಕಳಿಸಿಕೊಟ್ಟು ಅಲ್ಲಿಯ ಕರಕುಶಲ ಕಲೆಯಲ್ಲಿ ಹೆಚ್ಚಿನ ಅನುಭವವನ್ನು ಅಧ್ಯಯನವನ್ನು ಮಾಡಿಬರುವಂತೆ ಮಾಡಿತು. ಅಲ್ಲಿಂದ ಬಂದ ನಂತರ ಮೈಸೂರಿನಲ್ಲಿ "ಪ್ಯಾಕಿಂಗ್ ಸೆಂಟರ್" ತರಬೇತಿ ಕೇಂದ್ರಕ್ಕೆ ಇವರನ್ನು ಮತ್ತೆ ಅಧಿಕಾರಿಗಳನ್ನಾಗಿ ಕೇಂದ್ರ ಕರಕುಶಲ ಸಂಸ್ಥೆ ನೇಮಿಸಿತು. ಜಪಾನ್ ಮಾದರಿಯ ಕುಶಲ ಕೈಗಾರಿಕೆಯ ಉದ್ಯಮದಲ್ಲಿ ಬಹು ಒಳ್ಳೆಯ ಹೆಸರು ಗಳಿಸಿದರು. ಕನ್ನಡಿಗರ ಹಾಗೂ ಕೇಂದ್ರದವರ ಕಣ್ಣನ್ನು ಆ ನಿಟ್ಟಿನಲ್ಲಿ ತೆರೆಸಿದವರು ವೀರಪ್ಪನವರು.

ವೀರಪ್ಪನವರು ಅಪೂರ್ವವಾದ ಕೃತಿಗಳನ್ನು ರಚಿಸಿದ್ದಾರೆ. ರಷ್ಯಾ, ಚೀನಾ ಮುಂತಾದ ಕಡೆಗಳಲ್ಲಿ ಅಲ್ಲಿನ ರಾಷ್ಟ್ರಭಕ್ತರ ಚಿತ್ರ ರಚನೆಗೆ ತೊಡಗಿರುವವರುನವು ಕಲಾವಿದರಲ್ಲಿ ವಿರಳ ಆದರೆ ವೀರಪ್ಪನವರು ರಾಷ್ಟ್ರಮಣಿಗಳಿಗೆ ಸಂಬಂಧಪಟ್ಟ ಅನೇಕ ಕಲಾಕೃತಿಗಳನ್ನು ನಿರ್ಮಿಸಿರುವುದು ತುಂಬಾ ಹೆಮ್ಮೆಯ ವಿಷಯ. ಅವುಗಳಲ್ಲಿ ಅತಿ ಮುಖ್ಯವೆನಿಸಬಹುದಾದುವು, ಎರಡು "ಗಾಂಧೀಜಿ ಪ್ರಾರ್ಥನೆಯಲ್ಲಿ" ಮತ್ತು "ಬಾಪೂಜಿಯ ದಿವಾಯಾತ್ರೆ". ಒಂದರಲ್ಲಿ ಬಾಪೂಜಿಯು ವಿಶಾಲವಾದ ಮರದ ನೆರಳಿನ ಅಡಿಯಲ್ಲಿ ತಮ್ಮ ಸುತ್ತಲೂ ನವಭಾರತ ನಿರ್ಮಾಣದಲ್ಲಿ ತೊಡಗಿರುವ ದೇಶಭಕ್ತರೊಂದಿಗೆ ಎತ್ತರವಾದ ವೇದಿಕೆಯ ಮೇಲೆ ಕುಳಿತು ಪ್ರಾರ್ಥನೆ ಗೈಯುವ ಚಿತ್ರಣ. ಇಲ್ಲಿ ನಮ್ಮ ಮೈಸೂರಿನ ರಾಜಕಾರಣಿಗಳನ್ನು ಗುರುತಿಸಬಹುದು. ಇಲ್ಲಿ ಬಳಸಿರುವ ಬಣ್ಣ, ರೇಖಾ ವಿನ್ಯಾಸ ನಿಜಕ್ಕೂ ಸ್ವಾಭಾವಿಕವಾಗಿವೆ. ಮತ್ತೊಂದು ಚಿತ್ರ ಬಾಪೂವಿನ ಪ್ರಾಣಪಕ್ಷಿ ಹಾರಿಹೋದ ದಿನದ ಚಿತ್ರಣವಾಗಿದೆ. ನಮ್ಮ ರಾಷ್ಟ್ರಭಕ್ತರು ಬಾಪೂಜಿಯ ದೇಹದ ಸುತ್ತಲೂ ಸುತ್ತುಗಟ್ಟಿಕೊಂಡು ಚಿಂತಾಜನಕರಾಗಿರುವ ಚಿತ್ರಣ. ಆತನ ಪ್ರಾಣಪಕ್ಷಿ ತಿಳಿಯಾದ ಆಕಾಶದಲ್ಲಿ ಸ್ವರ್ಗಕ್ಕೆ ತೆರಳುತ್ತಿರುವ ಅಪೂರ್ವ ಚಿತ್ರಣ ಇದು. ಇಲ್ಲಿನ ಸನ್ನಿವೇಶ, ವರ್ಣಗಳ ಬಳಕೆ, ವಾತಾವರಣ ಸಹಜವಾಗಿಯೂ ಸ್ವಚ್ಛವಾಗಿಯೂ ಮೂಡಿ ಬಂದಿವೆ. ಇವು ನಮ್ಮವರಿಗೆ ಅತ್ಯಂತ ಪ್ರಿಯವಾದುವುಗಳೆಂದು ಹೇಳಬಹುದು.

ಭಾರತೀಯ ಚಿತ್ರಕಲಾಶೈಲಿ ಇವರಿಗೆ ಅಚ್ಚುಮೆಚ್ಚು ಸ್ವಾಭಾವಿಕತೆಗೆ ಹೆಚ್ಚು ಮಾನ್ಯತೆ ಇವರ ಕಲಾಕೃತಿಗಳಲ್ಲಿ ಕಾಣಬಹುದು. ವೀರಪ್ಪನವರು ತಮ್ಮ ಜೀವನದ ಕೊನೆಯ ದಿನಗಳಲ್ಲಿ ತಮ್ಮ ಮನಸ್ಸನ್ನು ಶ್ರೀ ಬಸವಣ್ಣನವರ ವಚನಗಳ ಕಡೆ ಹರಿಸಿದ್ದರು. ಅನೇಕ ಸನ್ನಿವೇಶಗಳಿಗೆ ತಕ್ಕಂತೆ ಅನೇಕ ಚಿತ್ರಗಳನ್ನು ಬಿಡಿಸಿದರು. ಈ ಬಗೆಯ ಕೆಲಸ ಅವರಿಗೆ ಶಾಂತಿಯನ್ನು ತಂದಿತ್ತು.

ಇಂಥ ಹಿರಿಯ ಕಲಾಜೀವಿ ನಮ್ಮಿಂದ ದೂರವಾಗಿದ್ದಾರೆ. ಆದರೆ ಇವರ ಕಲಾಕೀರ್ತಿ ಹೂಬಳ್ಳಿಯಂತೆ ಕರ್ನಾಟಕದ ಎಲ್ಲೆಡೆಯಲ್ಲೂ ಹಬ್ಬಿದೆ. ಪುಣ್ಯಜೀವಿ ವೀರಪ್ಪನವರ ನೆನಪು ಕನ್ನಡ ಕಲಾವಿದರ ಕಲಾಭಿಮಾನಿಗಳ ಮನಸ್ಸಿನಲ್ಲಿ ಸದಾ ಹಸಿರಾಗಿ ನಿಲ್ಲುತ್ತದೆ.



# ಆತ್ಮಾವಲಂಬನ

—ಟಿ. ವಿ. ರಾಚಪ್ಪ, ಎಂ.ಎ. ಬಿ.ಟಿ.

"ಆತ್ಮ" ಎಂದರೆ 'ನಾನು' ಎಂದರ್ಥ. ಅವಲಂಬನ ಎಂದರೆ ತನ್ನಲ್ಲಿ ತನಗೆ ನಂಬಿಕೆ ಎಂದರ್ಥ. ಎಲ್ಲ ಸಂದರ್ಭ, ಸನ್ನಿವೇಶ ಮತ್ತು ಅವಸ್ಥೆಗಳಲ್ಲೂ ಸ್ವಸಾಮರ್ಥ್ಯದಿಂದಲೇ ಮುಂದುವರಿಯುವ ಮನೋನಿಶ್ಚಯ ಯಾರಿಗುಂಟೋ ಅವನೇ ಆತ್ಮಾವಲಂಬಿ. ಸರ್ವಶಕ್ತನಾದ ಪರಮಾತ್ಮನ ಚೈತನ್ಯಾಂಶವು ಬೀಜರೂಪವಾಗಿ ತನ್ನಲ್ಲಿ ಹುದುಗಿರುವುದೆಂದೂ, ಪರಮಪುರುಷೋತ್ತಮನು ಸಾಧಿಸಿ ಅಭಿವ್ಯಕ್ತಮಾಡಿಕೊಂಡಿರುವಂತಹ ಸಮಸ್ತ ಗುಣಗಳನ್ನೂ ತಾನು ಕೂಡ ಕಾಲಾನುಗುಣವಾಗಿ ಬೆಳಸಿಕೊಂಡು ತನ್ನ ತಂದೆಯಾದ ಈಶ್ವರನಂತೆ ಲೋಕ ಕಲ್ಯಾಣ ಕಾರ್ಯವನ್ನು ಸಾಧಿಸಬಲ್ಲನೆಂದೂ, ಭರವಸೆಯು ಯಾರಿಗಿರುವುದೋ ಅವನನ್ನು ಸಂಶಯದ ನೆರಳೂ ಕೂಡ ಬಾಧಿಸುವುದಿಲ್ಲ. ಲೋಕಕಲ್ಯಾಣಕಾರ್ಯವೆಂದರೆ ಈಶ್ವರನು ಹೇಗೆ ತನ್ನ ಬ್ರಹ್ಮಾಂಡವನ್ನು ಸೃಷ್ಟಿಮಾಡಿ ಸಂಸರಣ ಪಥದಲ್ಲಿ ಅದನ್ನು ಮುಂದುವರಿಸಿ ಪಕ್ವಮಾಡುತ್ತಿರುವನೋ ಹಾಗೆ ತಾನೂ ಕೂಡ ಒಂದಾನೊಂದು ಕಾಲಕ್ಕೆ ತನ್ನದೇ ಆದ ಒಂದು ಬ್ರಹ್ಮಾಂಡವನ್ನು ನಿರ್ಮಿಸಿ ಅದನ್ನು ಸಲಹಿ ಕೊನೆಮುಟ್ಟಿಸುವ ಸಾಮರ್ಥ್ಯವನ್ನು ಪಡೆಯುವುದು ಎಂದರ್ಥ.

ಮನುಷ್ಯನು ಮೊದಲು ದೇಹವೇ ತಾನೆಂದು ವರ್ತಿಸುತ್ತಾನೆ. ಕನ್ನಡಿಯಲ್ಲಿ ನಮ್ಮ ಮುಖವನ್ನು ನಾವು ನೋಡಿಕೊಂಡಾಗ ನಮ್ಮಲ್ಲಿರಬಹುದಾದ ಲೇಶಮಾತ್ರ ಅಂದಚಂದಕ್ಕಾಗಿ ಆನಂದಪಡುತ್ತೇವೆ. ಇತರರ ದೃಷ್ಟಿಯಲ್ಲಿ ನಾವು ಅಂದರೆ ನಮ್ಮ ದೇಹಗಳು ಚೆನ್ನಾಗಿಯೂ ಆಕರ್ಷಣೀಯವಾಗಿಯೂ ಕಾಣಬೇಕೆಂದು ಬಯಸುತ್ತೇವೆ. ರೋಗ ಬಂದರೆ ನನಗೆ ಬಾಧೆಯಾಗಿದೆಯೆಂದು ನರಳುತ್ತೇವೆ. ವಯಸ್ಸಾಗುತ್ತಾ ಬಂದಂತೆಲ್ಲಾ ವೃದ್ಧಾಪ್ಯದ ಚಿಹ್ನೆಗಳು ತಲೆದೋರಿ ದೇಹದ ಶೈಥಿಲ್ಯ ಮತ್ತು ಅದರ ಪರಿಣಾಮವಾಗಿ ಕೊನೆಗೆ ಸಂಭವಿಸುವ ಮರಣಕ್ಕಾಗಿ ಕಳವಳ ಪಡುತ್ತೇವೆ. ಈ ವಿಕಾರಗಳೆಲ್ಲಾ ದೇಹವೇ ತಾನೆಂಬ ಭಾವನೆಯಿಂದ ಹುಟ್ಟುವುವು. ಈ ಸುಖದುಃಖ ರೂಪವಾದ ರೋಗಕ್ಕೆ ಆತ್ಮಾನಾತ್ಮ ವಿಚಾರವೇ ದಿವ್ಯ ಔಷಧವು. ದೇಹವು ಹುಟ್ಟುವುದಕ್ಕೆ ಮೊದಲು ಇರಲಿಲ್ಲ. ಮರಣಾನಂತರ ಇರುವುದಿಲ್ಲ. ಇದು ಬದುಕಿರುವಷ್ಟು ಕಾಲದಲ್ಲೂ ಕೂಡ ಕ್ಷಣಕ್ಷಣಕ್ಕೂ ನದಿಯ ಪ್ರವಾಹದಂತೆ ಬದಲಾವಣೆಯನ್ನು ಹೊಂದುತ್ತಲೇ ಇರುವುದು. ಒಟ್ಟಿನಲ್ಲಿ ಈ ದೇಹವು ನಶ್ವರವಾದುದು. ಒಂದು ಗೊತ್ತಾದ ಉದ್ದೇಶ ಸಾಧನೆಗಾಗಿ ಇದು ನಮಗೆ ಲಭಿಸಿದೆ, ಆ ಉದ್ದೇಶವು ಪೂರ್ತಿಯಾದ ಕೂಡಲೇ ಅದು ಬಿದ್ದುಹೋಗುವುದು. ಆದರೆ "ಅಜೋ ನಿತ್ಯಃ ಶಾಶ್ವತೋಽಯಂ" ಎಂಬ ಗೀತಾವಾಕ್ಯದಂತೆ ದೇಹಿಯು ಶಾಶ್ವತನು; ಬದಲಾವಣೆಯ ಪರಂಪರೆಗಳ ಪ್ರವಾಹಕ್ಕೆ ಬದಲಾಯಿಸದೆ, ಸ್ಥಿರವಾಗಿ ಇರುವ ಒಂದು ಅಡಿಗಲ್ಲು; ಇಂತಹವನು ಇದ್ದೇ ಇರಬೇಕೆಂದು ವಿಚಾರದಿಂದ ತಿಳಿದುಬರುವುದು. ಉದಾಹರಣೆಗಾಗಿ ರೈಲುಗಾಡಿಯ ಗಾಲಿಗಳು ವೇಗವಾಗಿ ಉರುಳಿಕೊಂಡು ಹೋಗುತ್ತವೆ. ಆದರೆ ಅವು ಆ ರೀತಿ ವೇಗವಾಗಿ ಮುಂದೆ ಸಾಗಲು ಅನುಕೂಲಿಸುವಂತೆ ಚಲಿಸದೆ ನಿಂತಿರುವ ಕಂಬಿಗಳು ಅವಶ್ಯಕವು. ಆದುದರಿಂದ ದೇಹ ಬಿದ್ದುಹೋದರೂ ಆತ್ಮಕ್ಕೆ ನಾಶವಿಲ್ಲ. "ನನ್ನ ದೇಹ ಮೃತವಾದರೂ 'ನಾನು' ಇದ್ದೇ ಇರುವೆನು, ನಾನು ನನ್ನ ದೇಹಕ್ಕೆ ಅತೀತನು" ಈ ಹಂತವನ್ನು ಹೊಂದಿದವರು ದೇಹವು ಭೋಗಸಾಧನವಸ್ತುವೆಂಬ ಭ್ರಾಂತಿಯನ್ನು ಕಳೆದುಕೊಂಡು ತಮ್ಮ ಕಾರ್ಯಸಾಧನೆಗೆ ಇದನ್ನು ಒಂದು ಕರಣವೆಂದು ಖಚಿತವಾಗಿ ತಿಳಿದುಕೊಳ್ಳುವರು. ಅಂಥವರು ಪರಾವಲಂಬನವನ್ನು ದೂರೀಕರಿಸಿ "ಕಾಯಕವೇ ಕೈಲಾಸ"ವೆಂಬ ಪರಮಧ್ಯೇಯದಿಂದ ಕೆಲಸಮಾಡತಕ್ಕವರಾಗುತ್ತಾರೆ. ಯಾವ ಕಾರ್ಯವನ್ನು ತನ್ನ ದೇಹಬಲದಿಂದಲೇ ಸಾಧಿಸ

ಬಹುದೋ ಅದನ್ನೆಲ್ಲಾ ಪಾಲುಮಾರದೆ ತಾವೇ ಮಾಡುತ್ತಾ ಬರುತ್ತಾರೆ. ತಾವು ಮಾಡಬಲ್ಲ ಕಾರ್ಯವನ್ನು ಸೋಮಾರಿತನಕ್ಕೆ ಸೋತು ಇತರರಿಂದ ಮಾಡಿಸಿಕೊಳ್ಳಲು ಬಯಸುವುದಿಲ್ಲ. ನನ್ನ ಮಿತ್ರರಲ್ಲಿ ಒಬ್ಬರು ಗೆಜಿಟೆಡ್ ಆಫೀಸರು ಇದ್ದಾರೆ. ಇವರಿಗೆ ಜವಾನರುಗಳ ಸೌಕರ್ಯವು ಯಥೇಚ್ಛವಾಗಿ ಇದ್ದರೂ ಇವರು ತಮ್ಮ ಬಟ್ಟೆಗಳನ್ನು ತಾವೇ ಒಗೆದುಕೊಳ್ಳುತ್ತಾರೆ. ಅಲ್ಲದೆ ತಮ್ಮ ಮನೆಯ ಆವರಣದಲ್ಲಿ ಒಂದು ತೋಟವನ್ನೂ ಬೆಳಸಿರುತ್ತಾರೆ. ಮನೆಗೆ ಬೇಕಾದ ತರಕಾರಿಗಳನ್ನೂ ಹಣ್ಣುಹಂಪಲುಗಳನ್ನು ತಾವೇ ಬೆಳೆದುಕೊಳ್ಳುತ್ತಾರೆ. ಅಲ್ಲದೆ ತಮ್ಮ ಉಡುಪಿಗೆ ಬೇಕಾದಷ್ಟು ನೂಲನ್ನು ನೂಲುತ್ತಾರೆ. ಮನೆಗೆ ಬಂದ ಅತಿಥಿ ಅಭ್ಯಾಗತರಿಗೆ ತಾವೇ ಬಂಟರಂತೆ ಬಡಿಸಿ ಉಪಚರಿಸುತ್ತಾರೆ. ಇವರ ಧರ್ಮಪತ್ನಿಯೂ ಕೂಡ ಇವರಂತೆ ಸರಳಜೀವಿಯಾದುದರಿಂದ ಅಡಿಗೆಗೆ ಪರಿಚಾರಕರ ಸಹಾಯವನ್ನು ಅಪೇಕ್ಷಿಸದೆ ತಾವೇ ಸ್ವತಃ ಪಾಕ ಮಾಡುತ್ತಾರೆ. ಇವರಿಬ್ಬರೂ ಬಂಟರಂತೆ ಬಡಿಸುತ್ತಿರುವುದನ್ನೂ ದೈಹಿಕವಾದ ಶ್ರಮವನ್ನು ಲೆಕ್ಕಿಸದೆ ಸೇವಿಸುತ್ತಿರುವುದನ್ನೂ ಇವರ ಮನೆಗೆ ಅತಿಥಿಗಳಾಗಿ ಬಂದ ಇವರ ಬಂಧುಗಳು ನೋಡಿ ಚಕಿತರಾದುದನ್ನು ನಾನು ಸ್ವತಃ ಕಂಡೆನು. ತಮ್ಮ ವಿರಾಮ ಕಾಲವನ್ನೆಲ್ಲಾ ಈ ರೀತಿ ಫಲಪ್ರದವಾಗಿ ಉಪಯೋಗಿಸುತ್ತಿದ್ದರೂ ಸಹ ತಮ್ಮ ಸರ್ಕಾರಿ ಕೆಲಸವನ್ನು ಅತ್ಯಂತ ದಕ್ಷತೆಯಿಂದಲೂ ಶ್ರದ್ಧೆಯಿಂದಲೂ ಮಾಡುತ್ತಾರೆ. ಇದಲ್ಲವೇ ಆತ್ಮಾವಲಂಬನದ ಆದರ್ಶ. ಆತ್ಮನ ಶಕ್ತಿಯು ಸ್ಥೂಲದೇಹದ ಮೂಲಕವಾಗಿ ವ್ಯಕ್ತವಾಗುವ ತ್ಯಾಗವೆಂದೆನಿಸಿಕೊಳ್ಳುವುದು. ದೇಹವು ಸಾಕಿದ ಒಂದು ಕುದುರೆಯಿದ್ದಂತೆ. ಇದನ್ನು ಸೇವೆಗೆ ಸಾಧನವಸ್ತುವನ್ನಾಗಿ ವಿನಿಯೋಗಿಸಿದರೆ ಅದು ಚುರುಕಾಗಿಯೂ ದೃಢವಾಗಿಯೂ ಉಲ್ಲಾಸದಿಂದಲೂ ಕೆಲಸ ಮಾಡುತ್ತದೆ. ಹಾಗಲ್ಲದೆ ಅದನ್ನು ಚೆನ್ನಾಗಿ ಮೇಯಿಸಿ ಅದರಿಂದ ಸಾಕಾದಷ್ಟು ಕೆಲಸವನ್ನು ತೆಗೆಯದೆ ಇದ್ದರೆ ಅದು ಕೊಬ್ಬಿ ನಮ್ಮ ಹತೋಟಿ ಮೀರಿ ಹೋಗುವುದು.

ಕೆಲವರು ಸ್ವಾಭಾವಿಕವಾಗಿ ಯಾವಾಗಲೂ ಹೆಬ್ಬಾವಿನಂತೆ ಸೋಮಾರಿಗಳಾಗಿ ಬಿದ್ದಿರುತ್ತಾರೆ. ಹಸಿವು ಬಾಯಾರಿಕೆ ಇವುಗಳನ್ನು ತಪ್ಪಿಸಿಕೊಳ್ಳಲು ಎಷ್ಟು ಬೇಕೋ ಅಷ್ಟು ಮಾತ್ರ ಕೆಲಸಮಾಡುತ್ತಾರೆ. ಇಂಥವರಿಗೆ ಹೆಂಡ, ಭಂಗಿ ಅಥವಾ ಭೋಗದ ಆಸೆಯು ಹುಟ್ಟಿದರೆ ಆಗ ಅವರು ಸದಾ ಶ್ರಮಿಸಿ ದುಡಿಯುವಂಥವರಾಗುತ್ತಾರೆ. ದೇಹಕ್ಕೆ ಸಹಜ ಧರ್ಮವೇ ಇದು. ಜೀವನದ ಸುಖಕ್ಕೆ ದೇಹಶ್ರಮವು ಅತ್ಯಾವಶ್ಯಕವು. "ಕೈ ಕೆಸರಾದರೆ ಬಾಯಿ ಮೊಸರಾದೀತು" ಎಂಬ ನಾಣ್ಣುಡಿಯು ಎಲ್ಲರಿಗೂ ಗೊತ್ತು. ನಿಜವಾದ ವಿಶ್ರಾಂತಿ ಸುಖವು ಸಹಜವಾದ ದೇಹಶ್ರಮದ ಫಲವು "ಯುಕ್ತಾಹಾರ ವಿಹಾರಸ್ಯ ಯುಕ್ತ ಸ್ವಪ್ನಾವಬೋಧಸ್ಯ ಯೋಗೋಭವತಿ ದುಃಖಹಾ" ಎಂಬ ಗೀತಾಶ್ಲೋಕದ ಅಭಿಪ್ರಾಯದಂತೆ ಕೆಲಸ, ಆಹಾರ, ವ್ಯವಹಾರ ಮತ್ತು ನಿದ್ರೆ, ಎಚ್ಚರ ಇವುಗಳನ್ನು ದೇಹಕ್ಕನುಗುಣವಾಗಿ ಬಳಸುವವನೇ ಯೋಗಿಯು. ಇವನಿಗೆ ಎಲ್ಲಾ ದುಃಖಗಳೂ ನಾಶವಾಗುವುವು. ಈ ಧ್ಯೇಯದಿಂದ ಬಾಳುತ್ತಿರುವವರು ಸ್ಥೂಲದೇಹವೇ ತಾವೆಂಬ ಮೆಟ್ಟಲನ್ನು ದಾಟಿ ಆಶೆಯೇ ತಾವೆಂಬ ಹಂತಕ್ಕೆ ಹತ್ತಿರುತ್ತಾರೆ. ಇವರು ಈ ರೀತಿ ಆಶಾನ್ವಿತರಾಗಿ ವ್ಯವಹರಿಸುತ್ತಿರುವಾಗ ಒಂದು ಮೇಲುಮಟ್ಟದ ಅನುಭವವು ಇವರಿಗೆ ಉಂಟಾಗುವುದು. ಅದೇನೆಂದರೆ ಇಂದ್ರಿಯಜನ್ಯವಾದ ಸುಖವು ದುಃಖದಲ್ಲಿ ಕೊನೆಗೊಳ್ಳುವುದು ಈ ಸುಖವು ಕೇವಲ ಕ್ಷಣಿಕವಾದುದು ಎಂಬುದೇ ಆ ಅನುಭವವು. ಇಂದ್ರಿಯಗಳಿಗೆ ಪ್ರಿಯವಾದ ವಿಷಯಸಾಂಗತ್ಯದಿಂದ ಇಂದ್ರಿಯಗಳು ಕೊಬ್ಬುತ್ತವೆ. ಆಶೆಗಳು ಮತ್ತಷ್ಟೂ ವೀರ್ಯವತ್ತಾಗುತ್ತವೆ. ಆಶಾರಾಹಿತ್ಯವೇ ಸ್ವಾತಂತ್ರ್ಯವು. ಆಶೆಯೇ ಪಾರತಂತ್ರ್ಯವು. ಆಶಾ ಪೂರ್ತಿಯು ಅನ್ಯವಸ್ತುವನ್ನು ಅವಲಂಬಿಸಿರುತ್ತೆ. ಈ ಭೋಗವಸ್ತುವು ನಾವು ಬಯಸಿದಾಗ ದೊರೆಯುವುದಿಲ್ಲ. ಆಶೆಗಳಿಗೆ ತಕ್ಕ ವಿಷಯಗಳು ದೊರೆಯದೆ ಇದ್ದರೆ ತಪನ ಅಥವಾ ದುಖಃವು ಉಂಟಾಗುವುದು ಶತಸ್ಸಿದ್ಧ. ಆಶೆಗಳಿಗೆ ಪದೇ ಪದೇ ಒಳಗಾಗುವವನು ಮರಳುಗಾಡಿನಲ್ಲಿ ಸಂಚರಿಸುವ ಪ್ರಯಾಣಿಕನಂತೆ ದುಃಖಕ್ಕೆ ಸಿಕ್ಕಿಕೊಳ್ಳುತ್ತಾನೆ. ಮರಳಿನ ಮೇಲೆ ಬೀಳುವ ಬಿಸಿಲಿನ ಝಳವು ನೀರಿನಂತೆ ಕಂಡರೂ ದಾಹವನ್ನು ಶಮನಮಾಡಲಾರದು. ಈ ಅಂಶವನ್ನೆ



ಯಯಾತಿ ಎಂಬ ರಾಜನು ತನ್ನ ಅನುಭವದಿಂದ ಕಂಡುಕೊಂಡು ಇತರರ ಪ್ರಯೋಜನಾರ್ಥವಾಗಿ ಈ ಕೆಳಗೆ ಕಂಡಂತೆ ಸಾರಿ ಹೇಳಿರುತ್ತಾನೆ. ಯಯಾತಿಯು ಯೌವನ ಇರುವವರೆಗೆ ಸಮಸ್ತ ಸುಖಭೋಗಗಳನ್ನು ಅನುಭವಿಸಿದನು. ತನ್ನ ದೇಹವು ಮುದಿಯಾಗುತ್ತಾ ಕೊಡಲಾರದಷ್ಟು ಬರಲು ಅದು ತನ್ನ ಆಶೆಗೆತಕ್ಕಷ್ಟು ಸುಖವನ್ನು ಕೊಡಲಾರದಷ್ಟು ದುರ್ಬಲವಾದದ್ದನ್ನು ಕಂಡನು. ಆಗ ಆತನುತನ್ನ ಮಕ್ಕಳಲ್ಲಿ ಒಬ್ಬನೊಂದಿಗೆತನ್ನ ಮುದಿತನಕ್ಕೆ ಬದಲಾಗಿ ಪ್ರಾಯವನ್ನು ವಿನಿಮಯ ಮಾಡಿಕೊಂಡು ಪುನಃ ಯಥೇಚ್ಛವಾಗಿ ಭೋಗೋಪಭೋಗಗಳಲ್ಲಿ ಆಸಕ್ತನಾದನಂತೆ. ಇದಾದ ಕೊಂಚಕಾಲದಲ್ಲೇ ಇವನಿಗೆ ವಿವೇಕವು ಉದಯವಾಯಿತು. ಆಗ ಅವನು ಹೀಗೆ ಬೋಧಿಸಿರುತ್ತಾನೆ. "ಇಂದ್ರಿಯಜನ್ಯವಾದ ಆಶೆಯು ಬೆಂಕಿ ಇದ್ದಂತೆ; ಇದಕ್ಕೆ ಸೌದೆ, ತುಪ್ಪ ಮೊದಲಾದ ಹೋಮ ದ್ರವ್ಯಗಳನ್ನು ಕೊಟ್ಟು ತೃಪ್ತಿಪಡಿಸುತ್ತೇರೆನೆಂದು ಪ್ರಯತ್ನಿಸುತ್ತಿರುವವನು ಹುಚ್ಚ" ಏಕೆಂದ ಆಶಾಗ್ನಿಗೆ ಬೇಕಾಗುವ ಇಂದ್ರಿಯ ಸುಖವನ್ನು ಕೊಟ್ಟಷ್ಟೂ ಅದು ಪ್ರಜ್ವಲಿಸುವುದು. ಮತ್ತಷ್ಟೂ ವೀರ್ಯವತ್ತಾಗುವುದು. ಆದುದರಿಂದ ಆಶೆಯನ್ನು ಶಮನಮಾಡುವುದಕ್ಕೆ ಇರುವುದು ಒಂದೇ ದಾರಿ, ಅದೇನೆಂದರೆ ಆಶೆಯ ಟೊಳ್ಳುತನವನ್ನು ಕಂಡುಕೊಂಡು ಅವನ್ನು ತ್ಯಜಿಸುವುದು. ಇದಕ್ಕೆ ಭಗವದ್ಗೀತೆಯಲ್ಲಿ ನಿರಾಹಾರ ವ್ರತವೆಂದು ಹೇಳುತ್ತಾರೆ. ಇಂದ್ರಿಯಗಳು ಕೇಳುವ ವಿಷಯವನ್ನು ಕೊಡದೆ ಅವುಗಳನ್ನು ತಡೆಯುವುದು ಎಂದು ಇದರ ಅರ್ಥ. "ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ ರಸವರ್ಜಂ ರಸೋಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ" ಈ ರೀತಿ ಇಂದ್ರಿಯದಮನ ಮಾಡುತ್ತಿರುವ ಸಾಧಕನಿಂದ ವಿಷಯಗಳು ದೂರ ಸರಿಯುವುವು ಆದರೆ ಅವನ ಮನಸ್ಸಿನಲ್ಲಿ ಅವುಗಳ ಮೇಲಿನ ಅಭಿರುಚಿ ಮಾತ್ರ ಉಳಿಯುತ್ತದೆ. ಈ ಅಭಿರುಚಿಯೂ ಕೂಡ ಮೇಲಂದರ್ಜೆಯ ಸಾಕ್ಷಾತ್ಕಾರದಿಂದ ಪೂರ್ಣ ತೊಲಗಿ ಹೋಗುತ್ತದೆ. ಇಲ್ಲಿ ಪರಂ ದೃಷ್ಟ್ವಾ ಎಂಬ ಶಬ್ದದಲ್ಲಿ ಔಚಿತ್ಯವಿದೆ. ಅಂದರೆ ಈ ಶಬ್ದದಿಂದ ಪರಮಾತ್ಮಸಾಕ್ಷಾತ್ಕಾರವೆಂದೂ ಅರ್ಥವಾಗುತ್ತದೆ ಅಥವಾ ಮೇಲ್ದರ್ಜೆಯ ಸುಖವೆಂದೂ ಅರ್ಥಮಾಡಬಹುದು. ಕೀಳು ಆಶೆಗಳಿಗೆ ಸಂಬಂಧಪಟ್ಟ ಅಭಿರುಚಿಯು ಪೂರ್ತಿಯಾಗಿ ಲಯಹೊಂದಬೇಕಾದರೆ ಮೇಲುಮಟ್ಟದ ಆನಂದವು ಕರಗತವಾಗಬೇಕು. ಉದಾಹರಣೆಗಾಗಿ ಮಕ್ಕಳು ಸ್ವಾಭಾವಿಕವಾಗಿ ಆಟದಲ್ಲಿ ಆಸಕ್ತರಾಗಿರುತ್ತಾರೆ. ಆದರೆ ಅದೇ ಬಾಲಕನು ಪ್ರಾಯಸಮರ್ಥನಾಗಿ ಗೃಹಕೃತ್ಯಕ್ಕೆ ಸಂಬಂಧಪಟ್ಟ ಸುಖಗಳನ್ನು ಕಂಡಮೇಲೆ ಆತನಿಗೆ ಆಟದಲ್ಲಿನ ಆಸಕ್ತಿಯು ಕಳಚಿ ಹೋಗುವುದು ಸಹಜ. ಆಗ ಅವನು ಬಾಲಕನಲ್ಲ. ಪ್ರೌಢ. ಆದರೆ ಮಗುವಿಗೆ ದೊಡ್ಡವನಂತೆ ಉಡಿಗೆ ತೊಡಿಗೆಗಳನ್ನು ತೊಡಿಸಿದರೆ ದೊಡ್ಡವನಾಗುತ್ತಾನೆಯೇ? ಇಲ್ಲ, ಸರ್ವಥಾ ಇಲ್ಲ. ನಮ್ಮ ದೇಶದ ಸನ್ಯಾಸಿಗಳಲ್ಲಿ ಅನೇಕರು ವೇಷಧಾರಿಗಳು ಮಾತ್ರ: ಉಡುಪಿನ ದೃಷ್ಟಿಯಿಂದ ಸನ್ಯಾಸಿಗಳೇ ವಿನಾ ವರ್ತನೆಯಿಂದ ಅಲ್ಲ. ಆದುದರಿಂದ ಸಹಜವಾದ ಪರಿವರ್ತನೆಯು ಒಳಗಿನ ಸ್ವಭಾವಕ್ಕೆ ಸೇರಿದುದು. 'ಅನಾಶ್ರಿತ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ ಸ ಸನ್ಯಾಸೀ ಚ ಯೋಗೀಚ ನ ನಿರಗ್ನಿಃ ನಚಾಕ್ರಿಯಃ" ಎಂಬ ಗೀತೆಯ ಶ್ಲೋಕದಂತೆ ನಿಜವಾದ ಸನ್ಯಾಸಿಗಳು ಸ್ವಾರ್ಥ ಪರರಲ್ಲ. ಯಾವ ಫಲವನ್ನೂ ಕೋರದೆ ವಿಶ್ವ ಕುಟುಂಬದ ಕಲ್ಯಾಣಕ್ಕಾಗಿ ದುಡಿಯುವವರೇ ಅವರು. ಗೃಹಸ್ಥಾಶ್ರಮಕ್ಕೆ ಸಂಬಂಧಪಟ್ಟ ಕರ್ತವ್ಯಗಳನ್ನು ಬಿಟ್ಟು ಹೆಸರನ್ನೂ ಬಟ್ಟೆಯನ್ನೂ ಬದಲಾಯಿಸಿದ ಮಾತ್ರಕ್ಕೆ ಸನ್ಯಾಸತ್ವವು ಲಭ್ಯವಾಗಲಾರದು ಎಂದು ಗೀತೆಯು ಸ್ಪಷ್ಟಪಡಿಸುತ್ತದೆ ಹಾಗಲ್ಲದೆ ಗೃಹಸ್ಥನ ಪ್ರೇಮವು ತನ್ನ ಕುಟುಂಬದ ಸುಖದಲ್ಲೇ ತೃಪ್ತಿಹೊಂದದೆ ಆ ಎಲ್ಲೆಯನ್ನು ಮೀರಿ ಇಡೀ ಮಾನವ ವರ್ಗವನ್ನೇ ಆಲಿಂಗಿಸಿ ತನ್ನ ನೀಚ ಸ್ವಭಾವಕ್ಕೆ ಸಂಬಂಧಪಟ್ಟ ಕೋರಿಕೆಗಳನ್ನೆಲ್ಲಾ ಜ್ವರ ಸದೃಶವೆಂದು ತಿಳಿದು ಇಂದ್ರಿಯ ದಮನ ಮತ್ತು ಮನೋನಿಯಮಗಳಿಂದ ಕಾಲಾನುಗುಣ್ಯವಾಗಿ ಹೃದಯ ಪ್ರಶಾಂತತೆಯನ್ನು ಪಡೆದರೆ ಅವನೇ ನಿಜವಾದ ಸನ್ಯಾಸಿಯು. ಅಂತಹ ಪ್ರಶಾಂತವಾದ ಹೃದಯಮಧ್ಯದಲ್ಲಿ ಪ್ರತಿಬಿಂಬಿತನಾದ ಪರಮಾತ್ಮನ ದರ್ಶನಾನಂದವನ್ನು ಪಡೆದವನಿಗೆ ಎಲ್ಲ ವಿಧವಾದ ಕೀಳುದರ್ಜೆಯ ಆಶೆಗಳೂ

ಬುಡಮಟ್ಟ ನಾಶವಾಗಿ ಹೋಗುವುವು. ಆದರೆ ಆ ವಿಧವಾದ ಸಾಕ್ಷಾತ್ಕಾರವನ್ನು ಹೊಂದುವುದಕ್ಕೆ ಮುಂಚೆಯೇ ಸಾಧಕನು ಅಂತಹ ಸ್ಥಿತಿಯನ್ನು ಪಡೆಯುವುದು ಖಂಡಿತವೆಂಬ ದೃಢ ನಿಶ್ಚಯವನ್ನು ಹೊಂದಿ ಇಂದ್ರಿಯಗಳನ್ನು ದಮನ ಮಾಡಲೇಬೇಕು. ಎಲ್ಲಿಯವರೆಗೆ ಸಾಧಕನು ತನ್ನ ಆಶೆಗಳಿಗೆ ದಾಸನಾಗಿರುತ್ತಾನೆಯೋ ಅಲ್ಲಿಯವರೆಗೆ ಆತ್ಮಾವಲಂಬನವು ಸಿದ್ಧಿಸುವುದಿಲ್ಲವೆಂಬುದು ಖಂಡಿತ. ಎಲ್ಲಿಯವರೆಗೆ ಸಾಧಕನು ಆತ್ಮಾವಲಂಬನದ ಸಿದ್ಧಿಯನ್ನು ಪಡೆಯಲಾರನೋ ಅಲ್ಲಿಯವರೆಗೆ ಶಾಂತ್ಯಾನಂದಗಳು ಅವನಿಂದ ಬಹುದೂರ ಇರುವುವು. ಇಂದ್ರಿಯಗಳಿಗೆ ವಶನಾದ ದಾಸನ ಸುಖವು ಒಂದು ಮಾದರಿ, ಇಂದ್ರಿಯಗಳನ್ನು ಜಯಿಸಿದ ಈಶನ ಆನಂದವು ಮತ್ತೊಂದು ಮಾದರಿ. ಮೊದಲನೆಯದು ಕ್ಷಣಿಕವಾದುದು. ಅಸಹಜವಾದುದು. ಎರಡನೆಯದು ಶಾಶ್ವತವೂ ಸಹಜವೂ ಆಗಿರುತ್ತದೆ.

ಏಕೆಂದರೆ ಆತ್ಮವು ದೇಹೇಂದ್ರಿಯಗಳಲ್ಲ; ಇವುಗಳಿಗೆ ಅತೀತವಾದುದು ಆತ್ಮನಿಗೆ ಈ ಸುಖವು ಬೇಕಿಲ್ಲ ಆದರೂ "ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ" ಎಂದು ಗೀತೆಯು ಹೇಳುವಂತೆ ಸಾಧಕನಿಗೆ ಪಾಪಮಾಡಲು ಇಷ್ಟವಿಲ್ಲದಿದ್ದಾಗ್ಯೂ ಪಾಪಕಾರ್ಯಕ್ಕೆ ಇವನು ಬಲಾತ್ಕಾರದಿಂದ ದೂಡಲ್ಪಡುತ್ತಾನೆ, ಇದರ ಮರ್ಮವೇನು ? "ಕಾಮ ಏಷ ಕ್ರೋಧ ಏಷ ರಜೋಗುಣ ಸಮುದ್ಭವಃ ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹವೈರಿಣಂ', ಎಂಬ ಶ್ರೀಕೃಷ್ಣನ ವಾಣಿಯಂತೆ ರಜೋಗುಣದಿಂದ ಹುಟ್ಟಿದ ಕಾಮಕ್ರೋಧಗಳು ಬಹು ದೊಡ್ಡ ಹೊಟ್ಟೆಯವು; ಅಂದರೆ, ಎಷ್ಟು ಅನುಭವಿಸಿದರೂ ಸಾಲದು ಎಂಬ ಸ್ವಭಾವವುಳ್ಳವು. ಇವುಗಳನ್ನು ಜ್ಞಾನಿಯು ಶತ್ರುಗಳೆಂದು ಮನಗಂಡು ಸ್ವಾಧೀನಕ್ಕೆ ತೆಗೆದುಕೊಳ್ಳಬೇಕು. ಈ ಅಂಶವನ್ನು ಥಿಯಾಸಫಿಯು ಬಹು ಸಮಂಜಸವಾಗಿ ವಿವರಿಸಿ ಹೇಳುತ್ತದೆ. ಥಿಯಾಸಫಿ ಅಂದರೆ ಅನುಭವಶಾಸ್ತ್ರ. ಇದರ ಬೆಳಕಿನಲ್ಲಿ ಈ ಅಂಶವನ್ನು ಸ್ವಲ್ಪ ವಿಚಾರಮಾಡೋಣ :— ನಮ್ಮ ಇಂದ್ರಿಯ ಗೋಳಗಳು ಸ್ಥೂಲ ದೇಹದಲ್ಲಿದ್ದಾಗ್ಯೂ ಅವುಗಳ ಬೇರುಗಳು ಕಾಮದೇಹದಲ್ಲಿರುತ್ತವೆ. ಸಂಸರಣ ನಿಯಮಕ್ಕನುಸಾರವಾಗಿ ಈ ಕಾಮದೇಹ ಪ್ರಕೃತಿಯ ಭೂತವು (Desire Elemental) ಸ್ಥೂಲವಾದ ಖನಿಜಸ್ಥಿತಿಗೆ ಬರಲು ಯತ್ನಿಸುತ್ತಿರುವುದು. ಆದುದರಿಂದಲೇ ಅದು ಒರಟು ಒರಟಾದ ಕಾಮಕ್ರೋಧಗಳಂತಹ ಉದ್ವೇಗಗಳನ್ನು ಬಯಸುತ್ತದೆ. ಈ ಒರಟಾದ ಸ್ಪಂದಗಳು ಅದನ್ನು ಸ್ಥೂಲದೇಹಕ್ಕೆ ಇಳಿಸಲು ಸಹಾಯ ಮಾಡುತ್ತವೆ. ಕಾಮಕ್ರೋಧಾದಿಗಳನ್ನು ಬಯಸುವವರು ನಾವಲ್ಲ. ಕಾಮ ದೇಹದಲ್ಲಿ ಮನೆಮಾಡಿಕೊಂಡಿರುವ ಈ ಭೂತವು ಅದನ್ನು ಬಯಸುತ್ತದೆ. ಆದುದರಿಂದ ಗೀತೆಯಲ್ಲಿ ಇದನ್ನು ಕಾಮ ಏಷ ಕ್ರೋಧ ಏಷ ಎಂದು ಕರೆದಿರುತ್ತಾರೆ. ನಮ್ಮ ಸುತ್ತಮುತ್ತಲಿನ ಮನೆ ಮೊದಲಾದ ಆಸ್ತಿಪಾಸ್ತಿಗಳನ್ನೂ ಹೆಂಡತಿ ಮಕ್ಕಳು ಮೊದಲಾದ ಜನರನ್ನೂ, ನಮ್ಮವು, ನಮ್ಮವರೆಂದು ನಾವು ತಪ್ಪಾಗಿ ಭಾವಿಸುವಂತೆ ನಮ್ಮ ದೇಹದೊಳಗಿರುವ ಈ ಭೂತದ ರಾಗದ್ವೇಷಗಳನ್ನು ನಮ್ಮವೆಂದು ಭ್ರಮಿಸಿ ಅವುಗಳನ್ನು ಕಾರ್ಯಗತ ಮಾಡಲು ಯತ್ನಿಸುತ್ತಿರುತ್ತೇವೆ. ಇದೊಂದು ದೊಡ್ಡ ಅಜ್ಞಾನ. ಕಾಮದೇಹದ ಭೂತವು ನಮಗಿಂತಲೂ ಸಂಸರಣದಲ್ಲಿ ನಾಲ್ಕುದರ್ಜೆ ಹಿಂದಿದೆ. (೧. ಮನುಷ್ಯರು, ೨. ಪಶುಗಳು, ೩. ಸಸ್ಯಗಳು, ೪. ಖನಿಜಗಳು, ೫. ಕಾಮದೇಹದ ಭೂತ) ಇಷ್ಟುದೂರ ಮುಂದೆ ಹೋಗಿರುವ ನಾವು ಖನಿಜವರ್ಗಕ್ಕೂ ಹಿಂದಿರುವ ಈ ಭೂತದ ಒಲವುಗಳಿಂದ ಪರವಶರಾಗುವುದು ಶೋಚನೀಯವಲ್ಲವೇ ? ಆದುದರಿಂದ ಜ್ಞಾನಿಯು 'ಜಹಿ ಶತ್ರುಂ ಮಹಾ ಬಾಹೋ ಕಾಮರೂಪಂ ದುರಾಸದಂ" ಎಂಬ ಶ್ರೀಕೃಷ್ಣನ ಬೋಧೆಯನ್ನು ಮನನ ಮಾಡುತ್ತಾ ಆಶೆಯನ್ನು ಜಯಿಸಬೇಕು ಎಂದರೆ ಧರ್ಮಕ್ಕೆ ವಿರುದ್ಧವಾದ ಯಾವ ಆಶೆಗಳೂ ತನ್ನಲ್ಲಿ ಹುಟ್ಟದಂತೆ ನೋಡಿಕೊಳ್ಳಬೇಕು. ಅಸ್ವಾರ್ಥ ಪ್ರೇಮದಿಂದ ತನ್ನ ಕಾಮದೇಹವನ್ನು ಶುದ್ಧಿಮಾಡಬೇಕು. ಸೂರ್ಯನು ತನ್ನ ಕಿರಣಗಳನ್ನು ಹತ್ತು ದಿಕ್ಕುಗಳಲ್ಲೂ ಪ್ರಸರಿಸುವಂತೆ ಜ್ಞಾನಿಯು ತನ್ನ ಪ್ರೇಮವನ್ನು ಸಮಸ್ತ ಪ್ರಾಣಿಗಳ ಮೇಲೂ ವರ್ಷಿಸಬೇಕು. ಜ್ಞಾನ, ವೈರಾಗ್ಯಗಳಲ್ಲಿ ತನಗಿಂತ



ಹಿರಿಯರಾದವರಿಗೆ ಅಸ್ವಾರ್ಥ ಸೇವಾರೂಪವಾಗಿ ಹೊಮ್ಮುವ ಭಕ್ತಿಭಾವವನ್ನೂ, ತನಗಿಂತ ಕೀಳುಮಟ್ಟದಲ್ಲಿರುವ ಜೀವರಾಶಿಗಳಲ್ಲಿ ಅವುಗಳ ಕಷ್ಟಗಳನ್ನು ನಿವಾರಿಸುವಂತಹ ಕರುಣೆಯನ್ನೂ, ತನ್ನ ಸರಿಸಮಾನರಲ್ಲಿ ವಿಶ್ವಾಸವನ್ನೂ ಮೈಗೂಡಿಸಿಕೊಳ್ಳುವ ಮೂಲಕ ಅವನು ತನ್ನ ಕಾಮದೇಹವನ್ನು ಶುದ್ಧಿಮಾಡಿಕೊಳ್ಳುತ್ತಾನೆ. ಇತರರನ್ನು ತನ್ನ ಸುಖ ಸಾಧನೆಗೆ ಉಪಯೋಗಿಸಿಕೊಳ್ಳುವ ದುರಭ್ಯಾಸವನ್ನು ಬಿಟ್ಟು ಎಲ್ಲರ ಮೇಲೆ ಭಕ್ತಿ, ಪ್ರೇಮ, ಕರುಣೆಗಳನ್ನು ಮಳೆಗರೆಯುತ್ತಾ ಆನಂದಿಸುತ್ತಾನೆ. ಯಾವ ತನು ತನ್ನ ದೇಹ ಮತ್ತು ಆಶೆಗಳು ತಾನಲ್ಲವೆಂದು ಖಚಿತವಾಗಿ ತಿಳಿದು ಆಚರಿಸುತ್ತಾನೋ ಅವನೇ ಆತ್ಮಾವಲಂಬಿ. ಇವನು ಮನಸ್ಸೇ ತಾನೆಂಬ ಹಂತಕ್ಕೆ ಏರಿರುತ್ತಾನೆ.

ಮುಂದಿನತನ್ನ ಅಂತಸ್ತಿನಲ್ಲಿ ಆತನು ಭೋಗ ಮತ್ತು ಅಧಿಕಾರ ಲೋಲುಪ್ತತೆಯ ದೆಸೆಯಿಂದ ಗಂಟುಬಿದ್ದಿರುವ ಅಹಂಕಾರ, ಚಂಚಲತೆ, ಭಯ, ಕಳವಳ ಇವೇ ಮೊದಲಾದ ದೌರ್ಬಲ್ಯಗಳಿಂದ ಕೂಡಿದ ಮನಸ್ಸು ತಾನಲ್ಲವೆಂದೂ, ಕಾರಣ ದೇಹಾಂತರ್ಗತವಾದ ಚೈತನ್ಯವೇ ತಾನೆಂದೂ, ವಿಚಾರಪರತೆಯಿಂದ ತಿಳಿದು ಬಾಳಲು ಪ್ರಯತ್ನಿಸುತ್ತಾನೆ. ಮನಸ್ಸು ಸಾಮಾನ್ಯವಾಗಿ ಕುಲ, ವಿದ್ಯೆ, ಯೌವನ, ರೂಪ, ಲಾವಣ್ಯ, ತಪಸ್ಸು, ಬಲ, ಅಧಿಕಾರ ಇವೇ ಮೊದಲಾದ ಕಾರಣಗಳಿಂದ ತಾನು ಇತರರಿಗಿಂತ ಶ್ರೇಷ್ಠವೆಂದು ಭಾವಿಸುತ್ತದೆ. ಈ ಭಾವನೆಯು ಅಜ್ಞಾನ ಜನ್ಯವಾದುದು. ಏಕೆಂದರೆ ಒಬ್ಬರಿಗಿಂತ ಇಬ್ಬರು ಮೇಲ್ಕಂಡ ಗುಣಗಳಲ್ಲಿ ಶ್ರೇಷ್ಠರಾಗಿರುವುದು ಸರ್ವರಿಗೂ ತಿಳಿದಂಶ. ಅಲ್ಲದೆ ಇವು ಯಾವುವೂ ಶಾಶ್ವತವಲ್ಲ. ಒಂದು ಕಾಲದಲ್ಲಿ ರಾಜರು ಪ್ರಬಲರಾಗಿದ್ದರು, ಈಗ ಪ್ರಜೆಗಳು ಪ್ರಬಲರಾಗಿರುತ್ತಾರೆ. ಅಲ್ಲದೆ ನೀಚವೆಂದೆನಿಸಲ್ಪಡುವ ಕುಲ, ಬಡತನ, ರೋಗ, ಕುರೂಪಿತನ ಇವುಗಳಿಂದಲೂ ಜೀವನು ಕಲಿಯಬೇಕಾದ ಪಾಠವಿರುತ್ತದೆ. ಬಡವನಾಗಿರುವಾಗ ಚಟುವಟಿಕೆಯಿಂದ ಕೆಲಸಮಾಡುವ ಸ್ವಭಾವವನ್ನೂ, ನಮ್ರತೆಯನ್ನೂ, ಮಿತವ್ಯಯವನ್ನೂ ಕಲಿತುಕೊಳ್ಳುತ್ತಾನೆ. ಹೀಗೆಯೇ ಅಧಿಕಾರ, ಐಶ್ವರ್ಯ ಮೊದಲಾದ ಸೌಲಭ್ಯಗಳು ಒದಗಿದಾಗ ದಾನ, ಪರೋಪಕಾರ ಮೊದಲಾದ ಗುಣಗಳನ್ನು ಕಲಿಯಲು ಅವಕಾಶವಿರುತ್ತದೆ. ಆದುದರಿಂದ ಇವುಗಳಲ್ಲಿ ಯಾವುದೊಂದು ಕೀಳೂ ಅಲ್ಲ, ಮೇಲೂ ಅಲ್ಲ. ಈ ವಿಧವಾದ ವಿಚಾರದಿಂದ ಜೀವನು ಕುಲಾದಿಗಳ ಮೇಲಿರುವ ದುರಭಿಮಾನವನ್ನು ಕಳೆದುಕೊಳ್ಳುವನು. ಅಲ್ಲದೆ ಮನಸ್ಸು ಇತರರಿಂದ ಹೊಗಳಿಸಿಕೊಳ್ಳಬೇಕೆಂದು ಬಯಸುತ್ತದೆ. ಈ ಮನಸ್ಸಿನೊಳಗಾಗಿರುವ ನಾವೆಲ್ಲರೂ ಲೋಕಾಭಿಪ್ರಾಯಕ್ಕೆ ಮನ್ನಣೆ ಕೊಡುತ್ತೇವೆ. ಆತ್ಮಾವಲಂಬಿಯು ಈ ರೀತಿ ಪರರ ತಾಳಕ್ಕನುಗುಸಾರವಾಗಿ ಕುಣಿಯಲು ಇಷ್ಟಪಡುವುದಿಲ್ಲ. ಯಾರು ಏನೇ ಹೇಳಲಿ ತನಗೆ ಸರಿಯಾಗಿ ತೋರಿದ್ದನ್ನು ಮಾಡದೆ ಬಿಡುವುದಿಲ್ಲ, ಸರಿಯಲ್ಲದ್ದನ್ನು ಮಾಡುವುದಿಲ್ಲ.

ಸಾಮಾನ್ಯ ಮನುಷ್ಯನು ಜ್ಞಾನವನ್ನು ಹೊರಗಿನ ಪ್ರಪಂಚದಿಂದ ಪಡೆಯುವಂತೆ ತಿಳಿಸುತ್ತಾನೆ. ಜ್ಞಾನಿಯು ದೇಹ, ಇಂದ್ರಿಯ, ಮನಸ್ಸು ಇವುಗಳಿಗೆ ಅತೀತನಾದ ಆತ್ಮನೇ ತಾನೆಂದೂ, ಎಲ್ಲ ಜ್ಞಾನವೂ ತನ್ನೊಳಗೆ ಬೀಜರೂಪವಾಗಿ ಅಡಗಿರುವುದೆಂದೂ ಖಚಿತವಾಗಿ ತಿಳಿದಿರುತ್ತಾನೆ. ತಾನು ಇತರರಿಂದ ಪಡೆಯಬಹುದಾದ ವಾಗ್ರೂಪವಾದ ಉಪದೇಶದಿಂದಲೂ, ಗ್ರಂಥವ್ಯಾಸಂಗದಿಂದಲೂ, ಬರುವ ತಿಳಿವಳಿಕೆಯು ನಿಜವಾಗಿಯೂ ತನ್ನದಲ್ಲ. ಗುರೂಪದೇಶ, ಗ್ರಂಥವ್ಯಾಸಂಗ ಇವೇ ಮೊದಲಾದ ಹೊರಗಿನ ಸಹಾಯವು ಜ್ಞಾನದ ಕಿಡಿಯನ್ನು ಹೊತ್ತಿಸುವ ಬೇರೊಂದು ಚಕ್ಕಮುಕ್ಕಿ ಕಲ್ಲಿನಂತೆ ಇರುತ್ತದೆ. ಇದರ ತಾಡನದಿಂದ ತನ್ನ ಸ್ವಂತ ಅನುಭವ ರೂಪವಾದ ಕಿಡಿಯನ್ನು ಜಾಜ್ವಲ್ಯಮಾನವಾಗಿ ಉರಿಯುವ ಬೆಂಕಿಯಂತೆ ಮಾಡಿಕೊಳ್ಳುವುದು ಸ್ವಪ್ರಯತ್ನಕ್ಕೆ ಸೇರಿದುದೆಂದು ಆತನು ದೃಢವಾಗಿ ವ್ಯಾಪಕನಾಗಿದ್ದರೂ ಒಬ್ಬೊಬ್ಬರಲ್ಲಿ ಒಂದೊಂದು ವಿಧವಾಗಿ ಕಾಣಿಸಿಕೊಳ್ಳುತ್ತಾನೆ. ಸಂಪಿಗೆ, ಜಾಜಿ, ಮಲ್ಲಿಗೆ ಮೊದಲಾದ ಎಲ್ಲಾ ಹೂಗಳೂ ಪರಿಮಳವುಳ್ಳವುಗಳೇ. ಆದರೆ ಒಂದೊಂದರಲ್ಲೂ ಒಂದೊಂದು ವಿಶೇಷವಾದ ಪರಿಮಳವಿರುವಂತೆ ಒಬ್ಬೊಬ್ಬ ಜೀವನಲ್ಲೂ ಒಂದೊಂದು ವಿಶೇಷ ಸಂದೇಶವೂ, ಸೇವಾ

ಸಾಮರ್ಥ್ಯವೂ ಗೂಢವಾಗಿ ಅಡಗಿರುತ್ತದೆ. ಇದನ್ನು ಕಂಡುಕೊಂಡು ಅಭಿವ್ಯಕ್ತ ಪಡಿಸಿಕೊಳ್ಳುವುದೇ ಪುರುಷಾರ್ಥ ಸಿದ್ಧಿಯು. ಇದನ್ನು ತಾನು ಸ್ವತಃ ಶ್ರಮಿಸಿ ಮಾಡಿಕೊಳ್ಳದಿದ್ದರೆ ಗುರುಗಳಾಗಲೀ, ಈಶ್ವರನಾಗಲೀ ಇದನ್ನು ನಮಗೆ ಮಾಡಿಕೊಡಲಾರರು ಎಂಬ ನಿಶ್ಚಿತವಾದ ಮನೋದಾರ್ಢ್ಯವೇ ಸ್ವಾವಲಂಬನದ ತಿರುಳು. ಉದಾಹರಣೆಗಾಗಿ ಕಾಮ ಕ್ರೋಧವೇ ಮೊದಲಾದ ದೋಷಗಳನ್ನು ನಿವಾರಿಸಬೇಕೆಂದು ದೇವರು ಅಥವಾ ಗುರುಗಳನ್ನು ಪ್ರಾರ್ಥಿಸುತ್ತಿರುವ ಅಭ್ಯಾಸಿಗಳಿಗೆಲ್ಲಾ ಒಂದು ಮನವಿ. ಇಂತಹ ಪ್ರಾರ್ಥನೆಯಿಂದ ತಿಲಾಂಶವಾದ ಪ್ರಯೋಜನವಿದೆಯೇ ? ನೀವೇ ಪರಿಕ್ಷಿಸಿ ನೋಡಿಕೊಳ್ಳಿ. ಹೊರಗಿನ ದೇವರಿಗೆ ಪರ್ವತದಷ್ಟು ಪ್ರಾರ್ಥನೆ ಸಲ್ಲಿಸಿದರೂ ರವೆಯಷ್ಟೂ ಪ್ರಯೋಜನವಿಲ್ಲ. ಆದರೆ ಒಳಗಿನ ದೇವರು ಮನಸ್ಸು ಮಾಡಿದರೆ ಎಲ್ಲವೂ ಸಾಧ್ಯ. 'ನಿನ್ನ ಬಿಟ್ಟು ದೇವರಿಲ್ಲ, ಮಣ್ಣು ಬಿಟ್ಟು ಮಡಕೆಯಿಲ್ಲ' ಎಂಬ ಗಾದೆಯು ಇದೇ ಅರ್ಥದಲ್ಲಿ ಹುಟ್ಟಿ ಬಳಕೆಗೆ ಬಂದಿರಬೇಕು. (ಎಂದರೆ ಗುರುಗಳೂ ದೇವರೂ ಸಹಾಯ ಮಾಡುತ್ತಿಲ್ಲವೆಂದು ಅರ್ಥವಲ್ಲ. ಸೂರ್ಯನು ಹೇಗೆ ಯಾವಾಗಲೂ ಪ್ರಕಾಶವನ್ನೂ ಶಾಖವನ್ನೂ ಪ್ರಸರಿಸುತ್ತಿರುವನೋ ಹಾಗೆ ಭಗವಂತನೂ ಅವನ ಪ್ರತಿನಿಧಿಗಳಾದ ಮಹಾತ್ಮರೂ ಬಿಡುವಿಲ್ಲದೆ ಅನುಗ್ರಹಶಕ್ತಿಯನ್ನು ವರ್ಷಿಸುತ್ತಲೇ ಇರುವರು. ಎಲ್ಲ ಭೂಮಿಯ ಮೇಲೂ ಮಳೆ ಬೀಳುತ್ತದೆ. ಆದರೆ ಚನ್ನಾಗಿ ಉತ್ತ ಭೂಮಿಯು ಹೀರುವಷ್ಟು ತೇವವನ್ನು ವ್ಯವಸಾಯ ಮಾಡಲ್ಪಡದೇ ಇರುವ ಭೂಮಿಯು ಹೀರಲಾರದು. ಬಂಡೆಯು ಅಲ್ಪಸ್ವಲ್ಪವನ್ನೂ ಗ್ರಹಿಸುವುದಿಲ್ಲ. ಹೀಗೆಯೇ ಯಾರು ಹೆಚ್ಚು ಪುರುಷ ಪ್ರಯತ್ನ ಮಾಡುಡುತ್ತಾರೆಯೋ ಅವರ ಸ್ವಭಾವವು ಉಳಲ್ಪಟ್ಟ ಭೂಮಿಯಂತೆ ಹದವಾಗಿರುತ್ತದೆ. ಅಂಥವರು ಹೆಚ್ಚು ಪ್ರಯೋಜನ ಪಡೆಯುತ್ತಾರೆ. ಮುಂದುವರಿಯುತ್ತಾರೆ ಆದುದರಿಂದ ಪುರುಷ ಪ್ರಯತ್ನವೇ ಸ್ವಾವಲಂಬನದ ಹೆಗ್ಗುರುತು.)

ಒಟ್ಟಿನಲ್ಲಿ ಸ್ವಾವಲಂಬನವೇ ಪರಮ ಸ್ವಾತಂತ್ರ್ಯದ ಸಾಮ್ರಾಜ್ಯವು. ಸ್ವಾವಲಂಬನವೇ ಪರಮ ವೈರಾಗ್ಯದ ಸೌಭಾಗ್ಯವು, ಸ್ವಾವಲಂಬನವೇ ಪರಮ ಶಾಂತಿಯ ನೆಲೆವೀಡು, ಸ್ವಾವಲಂಬನವೇ ಪರಸ್ಪರ ಸತ್ಯಾನುಭವದ ಗೂಡು.



ಆಕಾರದಲ್ಲಿ ಚಿಕ್ಕವರಾದರೂ ಕೆಲವರು ದೊಡ್ಡ ಕೆಲಸಗಳನ್ನು ಮಾಡಬಲ್ಲರು ; ಇತರರು ಆಕಾರದಲ್ಲಿ ದೊಡ್ಡವರಾದರೂ ಚಿಕ್ಕ ಕೆಲಸಗಳನ್ನೂ ಕೂಡ ಮಾಡಲಾರರು.

ಹೇಗೆಂದರೆ, ಆಲದ ಬೀಜವು ಬಹಳ ಚಿಕ್ಕದಾದರೂ ದೊಡ್ಡ ಮರವಾಗಿ ಅನೇಕರಿಗೆ ನೆಳಲನ್ನು ಕೊಡುತ್ತದೆ ; ತೆಂಗಿನ ಬೀಜವು ದೊಡ್ಡದಾಗಿದ್ದರೂ ಮರವಾದರೆ ಒಬ್ಬರಿಗೂ ಕೂಡ ನೆಳಲಾಗುವುದಿಲ್ಲ.

ಜನರು ಹಿತವಾಗಿಯೂ ಮೃದುವಾಗಿಯೂ ಮಾತನಾಡಿದರೆ ಮರ್ಯಾದೆಯನ್ನು ಹೊಂದುತ್ತಾರೆ ; ಇಲ್ಲದೆ ನಿಷ್ಠುರವಾದ ಮಾತನ್ನಾಡಿದರೆ ಅಪಮಾನಪಡುತ್ತಾರೆ.

ಹೇಗೆಂದರೆ, ಗಿಳಿ ಎಲ್ಲರಿಗೂ ಸಂತೋಷವುಂಟಾಗುವಂತೆ ಮಾತನಾಡುವುದರಿಂದ ಹಾಲನ್ನು ಕೊಟ್ಟು ಅದನ್ನು ಲಾಲಿಸುತ್ತಾರೆ ; ಕತ್ತೆ ಕಠೋರವಾಗಿ ಕೂಗುವುದರಿಂದ ಆದನ್ನು ಕೋಲಿನಿಂದ ಹೊಡೆದು ಓಡಿಸುತ್ತಾರೆ.



# ಪ್ರಾಚೀನ ಕರ್ನಾಟಕದ ಸ್ತ್ರೀವಿದ್ಯಾಭ್ಯಾಸದ ಒಂದು ಸಮೀಕ್ಷೆ

—ಎಸ್. ವಿ. ಜೇವೂರ, ಡಿ. ಪಿ. ಐ., ಬೆಂಗಳೂರು.

ಬಹು ಪ್ರಾಚೀನ ಕಾಲದಲ್ಲಿ ಭಾರತದ ಸ್ತ್ರೀಯರ ವಿದ್ಯಾಭ್ಯಾಸವು ಮೇಲ್ಪಟ್ಟದ್ದಾಗಿತ್ತೆಂದು ಊಹಿಸಲು ಸಾಕಷ್ಟು ಆಧಾರಗಳು ಉಪಲಬ್ಧವಾಗುತ್ತವೆ. ವೇದಗಳ ಕಾಲದಲ್ಲಿ ಅನೇಕ ಸ್ತ್ರೀಯರು ವಿದ್ಯಾವತಿಯರಾಗಿ ಸಾಧಕರಾಗಿ ಪುರುಷರ ಸಮಾನ ಸ್ಥಾನಮಾನ ಗಳಿಸಿಕೊಂಡಿದ್ದರು ಅನೇಕ ಸ್ತ್ರೀಯರು ವೇದಗಳ ಮಂತ್ರಗಳನ್ನು ರಚಿಸಿದವರಾಗಿದ್ದಾರೆ. ಋಗ್ವೇದ V. 28 ನೆಯ ಮಂತ್ರವನ್ನು "ವಿಶ್ವವಾರಾ" ಎಂಬುವಳೂ, ಋಗ್ವೇದ VIII. 91ನೆಯ ಮಂತ್ರವನ್ನು "ಅಪಾಲಾ" ಎಂಬುವಳೂ, ಋಗ್ವೇದ X. 39ನೆಯ ಮಂತ್ರವನ್ನು "ಘೋಷಾಕಾಕ್ಷೀವತೀ" ಎಂಬುವಳೂ ರಚಿಸಿದ್ದಾರೆ.[1] ಬೃಹದಾರಣ್ಯಕೋಪನಿಷತ್ತಿನಲ್ಲಿ ಬರುವ ಯಾಜ್ಞವಲ್ಕ್ಯ ಗಾರ್ಗಿಯರ ಚರ್ಚೆಗಳು ಪ್ರಸಿದ್ಧವಾದ ಈ ದಿಸೆಯಲ್ಲಿ ಯೋಚಿಸಬೇಕಾದ ಅಂಶಗಳಾಗಿವೆ.[2] ಗಾರ್ಗಿಯು ಯಾಜ್ಞವಲ್ಕ್ಯರಿಗೆ ಗಹನವಾದ ಆಲೋಚನೆಗಳಿಂದ ಕೂಡಿದ ಪ್ರಶ್ನೆಗಳನ್ನು ಹಾಕುತ್ತಾಳೆ. ಯಾಜ್ಞವಲ್ಕ್ಯರ ಪತ್ನಿಯಾದ ಮೈತ್ರೇಯಿಯೂ ಆಧ್ಯಾತ್ಮಿಕ ಚರ್ಚೆಗಳಲ್ಲಿ ಭಾಗವಹಿಸುತ್ತಿದ್ದಳು[3] ಎಂಬ ಬಗೆಗೆ ವಿವರಣೆ ನಮಗೆ ಸಿಗುತ್ತವೆ. "ಅದೇ ಉಪನಿಷತ್ತಿನಲ್ಲಿ ಪಂಡಿತೆಯಾದ ಮಗಳನ್ನು ಬಯಸುವ ಪ್ರಾರ್ಥನೆಯನ್ನೊಳಗೊಂಡ ಒಂದು ವಿಧಿಕರ್ಮದ ಹೆಸರಿದೆ"[4]. ವೇದಕಾಲದ ಪ್ರಸಿದ್ಧ ವಿದ್ಯಾವತಿಯರಾದ ಸ್ತ್ರೀಯರಲ್ಲಿ ಲೋಪಾಮುದ್ರಾ, ಕದ್ರೂ, ವಿಶ್ವವಾರಾ, ಘೋಷಾ,ಜುಹೂ,ಪೌಲೋಮಿ, ಜರಿತಾ,ಶ್ರದ್ಧಾ ಕಾಮಾಯನೀ,ದೇವಾಜಮಿಾಮುಂತಾದವರ ಹೆಸರುಗಳನ್ನು ಹೆಸರಿಸಬಹುದು.ಸೂತ್ರಗಳು ರಚನೆಯಾಗುವ ಕಾಲದವರೆಗೂ ವೈದಿಕಯುಗದ ಇದೇ ಸಂಪ್ರದಾಯ ಬೆಳೆದುಕೊಂಡು ಬಂದಿತು. ಪತ್ನಿಯಾದವಳು ಯಜ್ಞಯಾಗಾದಿ ಕರ್ಮಗಳಲ್ಲಿ ಭಾಗವಹಿಸುವ ಶಕ್ತಿ ಸಂಪನ್ನೆಯಾಗಬೇಕಾದರೆ ಅವಳನ್ನು ವಿದ್ಯಾವಂತಳನ್ನಾಗಿ ಮಾಡಿರಬೇಕು ಎಂಬಂಶವನ್ನು "ಗೋಭಿಲ ಗೃಹ್ಯ ಸೂತ್ರವು" ಅಭಿಪ್ರಾಯಪಡುತ್ತದೆ[5]. ರಾಮಾಯಣ ಕಾಲದಲ್ಲಿ ಸ್ತ್ರೀಯರು ವೇದಾಧ್ಯಾಯಿನಿಯರಾಗಿದ್ದರೆಂಬುದಕ್ಕೆ ಕೌಸಲ್ಯೆ, ತಾರೆಯರಿಗೆ 'ಮಂತ್ರವಿತ್' ಎಂಬ ವಿಶೇಷಣವಿರುವುದರಮೇಲಿಂದ ಗ್ರಹಿಸಲು ಶಕ್ಯವಿದೆ. ಆದರೆ ಧರ್ಮಶಾಸ್ತ್ರಗಳಕಾಲಕ್ಕೆ ಸ್ತ್ರೀವಿದ್ಯಾಭ್ಯಾಸದ ವಿಷಯದಲ್ಲಿ ಪೂರ್ಣ ಬಣ್ಣವೇ ಬದಲಾಯಿಸಿದುದು ಕಂಡುಬರುತ್ತದೆ. ಸ್ತ್ರೀಯರು ಅಧ್ಯಯನ ನಡೆಯಿಸಿದ ಯಾವ ಗುರುಕುಲದ ಹೆಸರೂ ಧರ್ಮಶಾಸ್ತ್ರಗಳಲ್ಲಿ ಕಂಡುಬರುತ್ತಿಲ್ಲ. ಧರ್ಮಶಾಸ್ತ್ರಗಳು ಎಂಟು ಅಥವಾ ಹನ್ನೆರಡನೆಯ ವಯಸ್ಸಿನಲ್ಲಿಯೇ ಹುಡುಗಿಯರು ಲಗ್ನವಾಗಬೇಕೆಂದು ವಿಧಿಸಿದುದರ ಪರಿಣಾಮವಾಗಿ ಅವರ ವಿದ್ಯಾಭ್ಯಾಸವು ಕುಂಠಿತಗೊಂಡ ಹಾಗೆ ಕಂಡುಬರುತ್ತವೆ. ಮನುಧರ್ಮಶಾಸ್ತ್ರದ ಪ್ರಕಾರ ಸ್ತ್ರೀಯು ಉತ್ತಮ ಗೃಹಿಣಿಯೂ, ಆದರ್ಶ ಮಾತೆಯೂ ಆಗಿದ್ದರೆ ಸಾಕು. ಅವಳಿಗೆ ಇದಕ್ಕಿಂತ ಹೆಚ್ಚಿನ ವಿದ್ಯೆಯಿಲ್ಲ. ಅವಳು ತನ್ನ ಭರ್ತಾರನೊಡನೆ ವಾಸಿಸುವುದು ಗುರುವಿನಲ್ಲಿ

1. History of Dharmasastra II i P. 362.
2. ಬೃಹದಾರಣ್ಯಕೋಪನಿಷತ್ (ಅನು: ಸ್ವಾಮಿ ಆದಿದೇವಾನಂದ)ಗಾರ್ಗೀ ಯಾಜ್ಞವಲ್ಕ್ಯರ ಸಂಭಾಷಣೆ ಪು. 199 ರಿಂದ 201 ಮತ್ತು 217 ರಿಂದ 227.
3. ಇದೇ ಗ್ರಂಥ ಪು. 131—146.
4. ಕ. ಶಾ. ಸಾ. ಅಧ್ಯಯನ. ಡಾ॥ ಚಿದಾನಂದಮೂರ್ತಿ (1966)
5. Ancient Indian Education P. 208. By Mookharji.

ಶಿಷ್ಯನಿರುವುದಕ್ಕೆ ಸಮಾನ. ಗೃಹಕಾರ್ಯಗಳೇ ಸಂಧ್ಯಾವಂದನಾದಿ ಕರ್ಮಗಳಿಗೆ ಸಮಾನ[6] ಎಂದು ವಿದ್ಯಾಭ್ಯಾಸಕ್ಕೆ ಸೊನ್ನೆ ಸುತ್ತಿಬಿಟ್ಟಮೇಲೆ ಸಮಾಜದಲ್ಲಿ ಅವಳಿಗೆ ವಿದ್ಯಾಭ್ಯಾಸಮಾಡಲು ಸ್ಥಾನವೆಲ್ಲಿ ? ಹೀಗೆ ವಿಧಿಸಿದುದೇ ಸ್ತ್ರೀಯರು ವಿದ್ಯಾಭ್ಯಾಸದಲ್ಲಿ ಹಿಂದುಳಿಯಲು ಕಾರಣವಾಯಿತು. "ನ ಸ್ತ್ರೀ ಸ್ವಾತಂತ್ರ್ಯಮರ್ಹತಿ" ಎಂಬುದೇ ಅವನ ಅಭಿಪ್ರಾಯವಾಗಿ ಅದು ಸಾರ್ವಜನಿಕ ಕಾರ್ಯಕ್ಷೇತ್ರದಲ್ಲಿ ಸ್ತ್ರೀಯರ ಸ್ಥಾನಮಾನಗಳನ್ನು ಮೂಲೆಗೊತ್ತಲು ಕಾರಣವಾಯಿತು. ಉತ್ತಮ ವಧುವಿನ ಯೋಗ್ಯತೆಗಳಲ್ಲಿ ವಿದ್ಯೆಯೂ ಒಂದೆಂದು ಮನುಮಹರ್ಷಿ ಸ್ವೀಕರಿಸಲಿಲ್ಲ. ಕಾರಣವಾಗಿ ಇತಿಹಾಸಗಳ ಕಾಲದವರೆಗೂ ಸ್ತ್ರೀಯರು ವಿದ್ಯಾಭ್ಯಾಸಮಾಡುವ ಅವಶ್ಯಕತೆ ಇಲ್ಲವೆಂದು ಗ್ರಹಿಸಲ್ಪಟ್ಟಿತ್ತು. ಆದರೆ ಬುದ್ಧನ ಜಗದ್ವಿಖ್ಯಾತ ಕ್ರಾಂತಿಯ ಕಾಲದಲ್ಲಿ ಸ್ತ್ರೀಯರ ವಿದ್ಯಾಭ್ಯಾಸದ ವಿಷಯದಲ್ಲಿರುವ ನಿಬಂಧನೆಗಳು ಸಡಿಲಾಗಹತ್ತಿದವು. ಜೈನ ಬೌದ್ಧ ಧರ್ಮೀಯರಲ್ಲಿ ಪುನಃ ಸ್ತ್ರೀ ಶಿಕ್ಷಣದ ಅವಶ್ಯಕತೆಯ ಬಗೆಗೆ ವಿಚಾರಯುಗವು ಪ್ರಾರಂಭವಾಗಿ ಸ್ತ್ರೀಯರ ವಿದ್ಯಾಭ್ಯಾಸವು ಪುನಃ ಪ್ರಾರಂಭವಾಯಿತೆಂದು ಸ್ಥೂಲವಾಗಿ ತಿಳಿಯಬಹುದಾಗಿದೆ.

ಆದರೂ ಕೆಲವು ಪ್ರಾಚೀನಕಾಲದ ಸ್ತ್ರೀಯರ ವಿದ್ಯಾಪ್ರೌಢಿಮೆಯ ಬಗೆಗೆ ಶಾಸನಗಳಲ್ಲಿ ಅನೇಕ ಹೆಸರುಗಳು ಅಪವಾದವೋ ಎಂಬಂತೆ ದೊರಕುವುದುಂಟು. ಉದಾಹರಣೆಗಾಗಿ "ಸಾವಿಸಿರ್ಮಡಿ"[7] ಯು ಸರ್ವಶಾಸ್ತ್ರ ಪ್ರಸಿದ್ಧಳಂತೆ, ಮಹಾ ಸಾಮಂತ ಶೂದ್ರಕಾಂಕನ ಹೆಂಡತಿ "ಜಕ್ಕಿ "ಸಹಜ" ಸರಸ್ವತಿ" ಎಂದು ಖ್ಯಾತಳಾಗಿದ್ದಾಳೆ[8]. ಮಂಡಳಿಕ ಉದಯಾದಿತ್ಯನ ಪತ್ನಿ "ಲಚ್ಚಲದೇವಿ"[9] ತ್ರಿಭುವನದೇವನ ಪಟ್ಟಮಹಿಷಿ "ಚಂದಲದೇವಿ"[10] ಕೇತಲದೇವಿ[11], ತಿಬ್ಬಲದೇವಿ[12], ಮೇಚಲದೇವಿ[13], ಬಾಚಲದೇವಿ[14], ಶಾಂತಲಾದೇವಿ[15] ಮುಂತಾದವರ ಹೆಸರುಗಳನ್ನು ಹೇಳಬಹುದು. ಆದರೆ ಇವರಲ್ಲಿ "ಸಾವಿನಿರ್ಮಡಿ" ಯನ್ನು ಬಿಟ್ಟು ಉಳಿದವರೆಲ್ಲ ಕಲಾಶಕ್ತಿಯುಳ್ಳವರೆಂಬುದನ್ನು ಮರೆಯಲಾಗದು. ಮತ್ತು ಇವರೆಲ್ಲ ರಾಜಮಹಾರಾಜರು, ಸಾಮಂತರು, ದಂಡನಾಯಕರು ಇವರೇ ಮೊದಲಾದವರ ಪತ್ನಿಯರಲ್ಲದೆ ಸಾಮಾನ್ಯ ಸ್ತ್ರೀಯರಲ್ಲ. ಸಾಮಾನ್ಯ ಸ್ತ್ರೀಯರ ವಿದ್ಯಾಭ್ಯಾಸವು ಪ್ರಾಚೀನ ಕಾಲದಲ್ಲಿ ಶೋಚನೀಯವೇ ಆಗಿತ್ತೆಂಬಂಶವು ಗಮನಾರ್ಹವಾದುದು.

ಕ್ರಿ ಶ. ಆರಂಭದ ಕಾಲದಿಂದ 1000ರ ವರೆಗೆ ಭಾರತದ ಇನ್ನಿತರ ಪ್ರದೇಶಗಳಲ್ಲಿ ವಾಸಿಸತಕ್ಕ ಸ್ತ್ರೀಯರಂತೆಯೇ ಕರ್ನಾಟಕದ ಸ್ತ್ರೀಯರುಕೂಡ ಅಷ್ಟೊಂದು ಸ್ವಾತಂತ್ರ್ಯವನ್ನು ಉಪಭೋಗಿಸುತ್ತಿದ್ದಿಲ್ಲವೆಂಬ ಮಾತು ಸ್ಪಷ್ಟವಿದೆ. ಅವರಿಗೆ ಸಾಮಾಜಿಕ ಜೀವನದಲ್ಲಿ ಸ್ಥಾನವೂ ಇರಲಿಲ್ಲ. ಅಂದರೆ ಅವರು ಒಂದು ರೀತಿಯ ದಾಸ್ಯವೃತ್ತಿಯಿಂದಲೇ ಜೀವಿಸುತ್ತಿದ್ದರು. ಆರ್ಯರು ದ್ರಾವಿಡರೊಡನೆ ವಿಶೇಷ ಸಂಪರ್ಕವನ್ನು ಬೆಳೆಯಿಸಹತ್ತಿದಮೇಲೆ ಅಂದರೆ ಕ್ರಿ.ಪೂ. 400 ವರ್ಷಗಳ ಹಿಂದೆ ಆರ್ಯ ಸ್ತ್ರೀಯರು ಶಿಕ್ಷಣ ಹಾಗೂ ಸಾಮಾಜಿಕ ಬಾಧ್ಯತೆಗಳಿಗೆ ಎರವಾದರು. ಈ ವಿಷಯವಾಗಿ ಪಂಡಿತೆ ಕ್ಷಮಾಬಾಯಿರಾವ್ ಅವರು "ಕ್ರಿ. ಪೂ. 3ನೆಯ ಶತಮಾನದ ಕೊನೆಯಲ್ಲಿ ಸ್ತ್ರೀಯರಿಗೆ ವೇದಾಭ್ಯಾಸಮಾಡುವ ಹಕ್ಕು ಇಲ್ಲವೆಂದೂ, ಯಜ್ಞಯಾಗಾದಿಗಳನ್ನು ಮಾಡಕೂಡದೆಂದೂ ನಿರ್ಬಂಧಗೊಳಿಸಲಾಗಿತ್ತು.'[16] ಎಂದು ಪ್ರತಿಪಾದಿಸಿದ್ದಾರೆ. ಪ್ರಗತಿಪಥಿಕರಾದ ಆರ್ಯರ ಹಣೆಯಬರಹವೇ ಹೀಗಿದ್ದಿತೆಂದ

6. Kewal Motwani : Manudharmasastra. P. 208.
7. ಕೋಲಾರಜಿಲ್ಲಾ ಬಂಗಾರುಪೇಟೆ ತಾಲೂಕಿನ ಕಾರುಬೆಲೆ ಗ್ರಾಮದ ಶಾಸನ E.C. X, B P. 65. C. 900 A. D.
8. E C. XI Cd. 74. 968 A.D.
9. ಅದೇ ಗ್ರಂಥ VII, SK. 109 C. 1070 A.D.
10. E.I. XXVIII P. 33. 1082 A.D.
11. SII. IX, i 159, C. 1090 A.D.
12. ಅದೇ 158. C. 1090 A.D.
13. EC. V, MJ. 18. 1095 A.D.
14. ಗದಾಯುದ್ಧ 1-37 ಮತ್ತು EC. VII, Sh. 97, 1113 A.D.
15. EC. II, 132. 1123 A.D,
16. The Aryan Path VoL XVI No 5. P. 166.



ಮೇಲೆ ಕನ್ನಡ ಸ್ತ್ರೀಯರಿಗೆ ಯಾವತರಹದ ಸೌಲಭ್ಯಗಳು ಪ್ರಾಪ್ತವಾಗಬಲ್ಲವು ಎಂಬುದನ್ನು ಹೇಳುವುದೇ ಬೇಡ.

ಅನುಲೋಮ ವಿವಾಹವು (ಕೀಳುಜಾತಿಯ ಹೆಣ್ಣುಗಳೊಡನೆ ಮೇಲು ಜಾತಿಯವರ ವಿವಾಹ ಮಾಡಿಕೊಳ್ಳುವಿಕೆ) ಬಹಳ ರೂಢಿಯಲ್ಲಿ ಬಂದಿತು. ಕೆಳಜಾತಿಯ ಸ್ತ್ರೀಯರು ಶಿಕ್ಷಣ ಪಡೆಯತಕ್ಕದಲ್ಲ ಮತ್ತು ಧಾರ್ಮಿಕ ಸಮಾರಂಭಗಳನ್ನು ಮಾಡತಕ್ಕದ್ದಲ್ಲ ಎಂದು ನಿರ್ಬಂಧನೆಗೆ ಅಳವಡಿಸಲಾಗಿತ್ತು. ಅದರಲ್ಲೂ ಶೂದ್ರಜಾತಿಯ ಹೆಂಡತಿಯಿದ್ದರಂತೂ ತೀರಿಯೇ ಹೋಯಿತಂ. ಅವಳಿಗೆ ಯಾವತರಹದ ಸ್ವಾತಂತ್ರ್ಯವೂ ಇರುತ್ತಿರಲಿಲ್ಲ. ಆದರೂ ಒಟ್ಟಿನಲ್ಲಿ ಸ್ತ್ರೀಯರೆಂದರೆ, ಕೀಳುಜಾತಿಯವರೆಂದು ಆಗಿನ ಪುರುಷ ಪ್ರಾಶಸ್ತ್ಯ ಪ್ರಧಾನ ಸಮಾಜವು ವಿನಿಶ್ಚಿತ ಧೋರಣೆಯನ್ನು ತಳೆದಿತ್ತು. ಇದೇ ಧೋರಣೆಯನ್ನು ಅನುಸರಿಸಿ ಮನುವು ಕೂಡ ಸ್ತ್ರೀಯರ ಬಗೆಗೆ ತುಚ್ಛಭಾವವನ್ನು ವ್ಯಕ್ತಪಡಿಸಿದ್ದಾನೆ. ಐತಿಶಾಯನನು ಸ್ತ್ರೀಯರ ಉಪನಯನ ವಿಧಾನವನ್ನು ಅಲ್ಲಗಳೆದಿದ್ದಾನೆ. ಇದಕ್ಕೆ ಕಾರಣವೇನೆಂದರೆ—ಕ್ರಿ. ಪೂ. ಮೂರು ಶತಮಾನಗಳಿಂದಲೇ ಅನುಲೋಮ ವಿವಾಹಗಳ ಸಂಖ್ಯೆಯು ಬಹಳ ಹೆಚ್ಚಾದುದೇ ಆಗಿದೆ. ಆದುದರಿಂದಲೇ ಅವನೂ ತಿರಸ್ಕರಿಸಿದನೆಂದು ಊಹಿಸಬಹುದು ಕ್ರಿ. ಶ. 3ನೆಯ ಶತಮಾನದಲ್ಲಿ ಸ್ತ್ರೀಯರಿಗೆ ಉಪನಯನ ಸಂಸ್ಕಾರವು ಹೆಸರಿಗೆ ಮಾತ್ರ ಜೀವ ಹಿಡಿದುಕೊಂಡಿತ್ತೆಂದು ಹೇಳಬಹುದು.

ಸ್ತ್ರೀಯರಿಗಾಗಿ ಉಪನಯನ ಸಂಸ್ಕಾರವು ನಿಲ್ಲಿಸಲ್ಪಟ್ಟಮೇಲೆ (ಈ ಸಂಸ್ಕಾರವು ಸ್ತ್ರೀಯರಿಗೆ ಮಹತ್ವವಾದ ಸಂಸ್ಕಾರವೆನಿಸಿಕೊಂಡಿತ್ತು) ಬಾಲ್ಯ ವಿವಾಹಗಳು ಹೆಚ್ಚಾಗಿ ತಲೆದೋರಿದವು.[18] ಗಂಡನೊಡನೆ ಚಿತೆಯಲ್ಲಿ ಪ್ರಾಣಬಿಡುವ "ಸತಿಹೋಗುವ ಪದ್ಧತಿ" ತಲೆದೋರಿತು. ಈ ಸಹಗಮನ ಪದ್ಧತಿಯನ್ನು ವಿಷ್ಣು (ಕ್ರಿ. ಶ. 4ನೆಯ ಶತಮಾನ) ಮತ್ತು ಬೃಹಸ್ಪತಿ (ಕ್ರಿ. ಶ. 6ನೆಯ ಶತಮಾನ) ಗಳು ಎತ್ತಿ ಹಿಡಿದಿದ್ದಾರೆ. ಈ ಕಾಲದಲ್ಲಿ ಇದಕ್ಕೂ ಮೊದಲು ಇದ್ದಷ್ಟು ಸ್ತ್ರೀ ಶಿಕ್ಷಿತೆಯರ ಸಂಖ್ಯೆ ಇದ್ದಿರಲಿಲ್ಲ. ಮನುವು (ಕ್ರಿ ಶ. 3ನೆಯ ಶತಮಾನ?)—'ನಾಸ್ತಿ ಸ್ತ್ರೀಣಾಂಕ್ರಿಯಾ ಮಂತ್ರೈರಿತಿ ಧರ್ಮೇ ವ್ಯವಸ್ಥಿತಿ"[19] ಎಂದರೆ ಸ್ತ್ರೀಯರು ಯಾವುದೇ ಸಂಸ್ಕಾರಗಳನ್ನು ಮಾಡಕೂಡದೆಂದು ಹೇಳಿಬಿಟ್ಟಿದ್ದಾನೆ. ಬಾಲ್ಯ ವಿವಾಹಗಳು ರೂಢಿಗೊಳ್ಳುವುದಕ್ಕೆ ಮುಖ್ಯವಾದ ಕಾರಣವೇನೆಂದರೆ,—ಪ್ರಬುದ್ಧರಾದ ಹೆಣ್ಣುಮಕ್ಕಳು ಜೈನ ಮತ್ತು ಬೌದ್ಧರ ಸಂಘಗಳಲ್ಲಿ ಸೇರಿಕೊಳ್ಳಬಹುದೆಂಬ ಹೆದರಿಕೆಯೂ ಬಹುಮಟ್ಟಿಗೆ ಕಾರಣವಾಗಿತ್ತು. ಆದುದರಿಂದ ಈ ಬಾಲ್ಯ ವಿವಾಹಗಳು ಅಷ್ಟೊಂದು ದೊಡ್ಡ ಪ್ರಮಾಣದಿಂದ ಜರುಗುವ ಪ್ರಾಮುಖ್ಯವನ್ನು ಪಡೆದಿದ್ದುವು[20]. ಆದರೂ ಅಪವಾದವೋ ಎಂಬಂತೆ ವಿದ್ಯಾವತಿಯರಾದ ಕೆಲವು ಸ್ತ್ರೀಯರ ಹೆಸರನ್ನೂ ಹೇಳಬಹುದು.

ಗೌರವಸ್ಥರೆನ್ನಿಸಿದವರ ಮನೆತನಗಳಲ್ಲಿ ಮತ್ತು ರಾಜ ಮನೆತನಗಳಲ್ಲಿ ವಿದ್ಯಾವತಿಯರಾದ ಅನೇಕ ಸ್ತ್ರೀಯರು ಇದ್ದರೆಂಬ ಬಗೆಗೆ ಸಾಕಷ್ಟು ಉದಾಹರಣೆಗಳು ಕಂಡುಬರುತ್ತವೆ. ರಾಜ ಮನೆತನದ ಸ್ತ್ರೀಯರೂ, ಮಂತ್ರಿ ಹಾಗೂ ದಂಡನಾಯಕರ ಮನೆತನದವರೂ, ಗಣ್ಯರಾದ ಸ್ತ್ರೀ ಗಣಿಕೆಯರೂ, ಬಹು ಸುಸಂಸ್ಕೃತರಾಗಿದ್ದರೆಂಬ ಮಾತು ವಾತ್ಸ್ಯಾಯನನ ಕಾಮಸೂತ್ರದಿಂದ ತಿಳಿದುಬರುತ್ತದೆ. ಅಜಿತೆ (ಕ್ರಿ. ಶ. 445) ಲೋಕಮಹಾದೇವಿ (ಕ್ರಿ. ಶ. 740) ವಿಜಯಕ್ಕ (ಕ್ರಿ. ಶ. 660) ಉದಯಭಾರತಿ (ಕ್ರಿ ಶ. 800) ಅತ್ತಿಮಬ್ಬೆ (ಕ್ರಿ. ಶ. 993)–ಇವರೇ ಅಲ್ಲದೇ ಇನ್ನೂ ಅನೇಕ ಸ್ತ್ರೀಯರು ಮಹಾ ವಿದ್ಯಾವತಿಯರೆಂದು ಸಮಾಜದಲ್ಲಿ ಮೊಳಗಿ ಬೆಳಗಿದವರಿದ್ದರು.

18. ಬಾಲ್ಯ ವಿವಾಹಗಳು ಪುರಾಣಕಾಲದಿಂದಲೂ ಪ್ರಚಲಿತದಲ್ಲಿದ್ದುವೆಂಬುದನ್ನು ಜನಕನ ಪುತ್ರಿ ಸೀತೆಯ 8ನೆಯ ವರ್ಷದ ವಿವಾಹಾದಿಗಳಿಂದ ಅರಿಯಬಹುದಾಗಿದೆ.
19. ಮನುಧರ್ಮಶಾಸ್ತ್ರ 9—18.
20. Mediaval Hindu India Vol. II, P. 189.

ಸಾಮಾಜಿಕ ಹಾಗೂ ಧಾರ್ಮಿಕ ವಿಧಿ ವಿಧಾನಗಳಲ್ಲಿ ಇವರೆಲ್ಲ ಭಾಗವಹಿಸುತ್ತಿದ್ದರೆಂಬ ಬಗೆಗೆ ಊಹೆಮಾಡಲು ಬರುವಂತಿದೆ, ಕಾಕುತ್ಸ್ಥವರ್ಮನ ಮಗಳಾದ ಅಜಿತೆ ಭಟ್ಟಾರಕಿಯು ವಾಕಾಟ ಅರಸನಾದ ನರೇಂದ್ರಸೇನನನ್ನು ಮದುವೆಯಾಗಿದ್ದಳು. ಈ ಮದುವೆಯು ಕನ್ನಡಿಗರ ಸಂಸ್ಕೃತಿಯ ಮೇಲೆ ವಿಶೇಷ ಬೆಳಕನ್ನು ಬೀರುವಂತಹುದಾಗಿದೆ. ಲೋಕ ಮಹಾದೇವಿಯು ಶಿಲ್ಪಕಲೆಯಲ್ಲಿ ಬಹಳ ಪ್ರೀತಿಯುಳ್ಳವಳಾಗಿದ್ದಳು. ಇವಳು ತನ್ನ ಗಂಡನಾದ ಇಮ್ಮಡಿ ವಿಕ್ರಮಾದಿತ್ಯನು ಪಲ್ಲವರನ್ನು ಜಯಿಸಿದ ನೆನಪಿಗಾಗಿ ಪಟ್ಟದಕಲ್ಲಿನಲ್ಲಿ ಕಟ್ಟಿಸಲ್ಪಟ್ಟ ಕೈಲಾಸನಾಥ ದೇವಾಲಯದ ನಿರ್ಮಾಣವಾಗಲು ಕಾರಣಳಾದಳೆಂದು ಹೇಳಲಾಗುತ್ತಿದೆ. ಈ ಗುಡಿಯ ಕಟ್ಟುವಿಕೆ ಹಾಗೂ ಕಲಾನೈಪುಣ್ಯದ ಮೆರಗು ಎಲ್ಲೋರದಲ್ಲಿರುವ ಕೈಲಾಸನಾಥ ದೇವಾಲಯದ ಮಂಟಪದ ಮಾದರಿಯನ್ನು ಹೋಲುವಂತಹುದಾಗಿದೆ. ಇದು ಕರ್ನಾಟಕದ ವಾಸ್ತುಶಿಲ್ಪದಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿದೆ. ಶಿಕ್ಷಣದ ದೃಷ್ಟಿಯಿಂದಲೂ ಪಟ್ಟದಕಲ್ಲಿನ ಈ ಗುಡಿಯು ಬಹು ಮಹತ್ವದ್ದಾಗಿದೆ. ರಾಮಾಯಣದೊಳಗಿನ ಕಥಾಸಂದರ್ಭಗಳು ಬಹಳ ಉಪದೇಶಕರವಾಗುವಂತೆ ಈ ಗುಡಿಯಲ್ಲಿ ಕೆತ್ತಲ್ಪಟ್ಟಿವೆ.

ವಿಜಯಕ್ಕನು (ಕ್ರಿ.ಶ. 660) ಸಾಹಿತ್ಯಕ್ಷೇತ್ರದಲ್ಲಿ ಮೆರೆಯುತ್ತಿರುವ ಮೊದಲನೆಯ ಕನ್ನಡತಿಯಾಗಿ ಗೋಚರಿಸುತ್ತಾಳೆ. ಅವಳು ಸಂಸ್ಕೃತ ಭಾಷೆಯಲ್ಲಿ ಅಸಾಧಾರಣ ಪಂಡಿತೆಯಾಗಿದ್ದಳು. ಅವಳು ಬ್ರಹ್ಮ, ವ್ಯಾಸ, ವಾಲ್ಮೀಕಿ ಎಂಬ ಮೂವರೇ ಕವಿಗಳನ್ನು ಆದರದಿಂದ ಮನ್ನಿಸಿದ್ದಳು.

ಏಕೋ ಅಭೂತ್ ನಲಿನಾತ್ ತತಶ್ಚಪುಲಿನಾತ್
ವಲ್ಮೀಕತಶ್ಚಾಪರಃ।
ತೇಸರ್ವೇ ಕವಯೋ ಭವಂತಿ ಗುರುವಃ
ತೇಭ್ಯೋನಮಸ್ಕುರ್ಮಹೇ॥

ಅರ್ವಾಚೋಯದಿ ಗದ್ಯಪದ್ಯರಚನೈಃ
ಚೇತಶ್ಚಮತ್ಕುರ್ವತೇ।
ತೇಷಾಂಮೂರ್ಧ್ನಿ ದದಾಮಿ ವಾಮಚರಣಂ ಕರ್ಣಾಟ
ರಾಜಪ್ರಿಯಾ॥
— ವಿಜಯಾಂಕಾ.

ದಂಡಿಮಹಾಕವಿ ಶ್ರೀ ಸರಸ್ವತಿಯೊಬ್ಬಳೇ ಬಿಳಿಯ ಬಣ್ಣದವಳೆಂದು ವರ್ಣಿಸಿದ್ದನ್ನು ಕಂಡು ವಿಜಯಕ್ಕ ಸಿಟ್ಟಿಗೆದ್ದುದೂ ಉಂಟು.

ಸರಸ್ವತೀವ ಕರ್ಣಾಟೀ ವಿಜಯಾಂಕಾ ಜಯತ್ಯಸೌ।
ಯಾವೈದರ್ಭೀಗಿರಾಂ ವಾಚಃ ಕಾಲಿದಾಸಾದನಂತರಂ॥

ಇತ್ಯಾದಿಯಾಗಿ ತನ್ನ ಬಗೆಗೆ ಹೇಳಿಕೊಂಡಿರುವುದು ಕೇವಲ ಆತ್ಮಾಭಿಮಾನದ ಒಣಹೆಮ್ಮೆಯ ಮಾತುಗಳಲ್ಲ. ನಿಜವಾಗಿಯೂ ಅವಳಿಗೆ ಆ ಸಾಮರ್ಥ್ಯವಿತ್ತು.

ಉಭಯ ಭಾರತಿ (ಕ್ರಿ. ಶ. 800) ಯು ವೇದ, ಶಾಸ್ತ್ರ, ಪುರಾಣ, ನಾಟಕ, ಸಾಹಿತ್ಯ ಮೊದಲಾದುವುಗಳಲ್ಲಿ ಅಗಾಧ ಪಂಡಿತೆಯಾಗಿದ್ದಳು. ಇವಳು ತನ್ನ ಪತಿಯಾದ ಮಂಡನಮಿಶ್ರನು ಶಂಕರಾಚಾರ್ಯರೊಡನೆ ವಾದಮಾಡುವ ಪ್ರಸಂಗದಲ್ಲಿ ನ್ಯಾಯಾಧೀಶಳಾಗಿದ್ದಳು. ಆದರೆ ತನ್ನ ಗಂಡನು ಸೋಲುವುದು ಖಂಡಿತವೆಂದು ತಿಳಿದುಬಂದಾಗ ಇವಳೂ ಆ ವಾದವಿವಾದದಲ್ಲಿ ಭಾಗವಹಿಸಿದಳು. ಇದರ ಮೇಲಿಂದ ಅವಳ ಪಾಂಡಿತ್ಯ ಪ್ರಭಾವದ ಬಗೆಗೆ ವಿವರಿಸಬೇಕಾಗಿಲ್ಲ. ಅವರ ಮನೆಯು ಪಾಂಡಿತ್ಯಕ್ಕೆ, ತರ್ಕವಿತರ್ಕಗಳಿಗೆ, ವಾದ ವಿವಾದಗಳಿಗೆ ತವರುಮನೆಯೇ ಆಗಿತ್ತು. ಅವರ ಮನೆಯ ಗಿಳಿಗಳು ಕೂಡ "ಜಗತ್ ಧ್ರುವರಸ್ಯಾತ್ ಜಗದಧ್ರುವಂಸ್ಯಾತ್" ಅಂದರೆ ಜಗತ್ತು ಸತ್ಯವೋ, ಅಸತ್ಯವೋ ಎಂಬುದನ್ನು ಕುರಿತು ವಾದವಿವಾದವನ್ನು ಮಾಡುತ್ತಿದ್ದುವಂತೆ.

ಅತ್ತಿಮಬ್ಬೆಯು (ಕ್ರಿ. ಶ. 993) ವಿದ್ಯಾಪಕ್ಷಪಾತಿಯಾಗಿದ್ದಳು. ಅವಳು ಕವಿಚಕ್ರವರ್ತಿಯಾದ ರನ್ನನನ್ನು ಚಾಲುಕ್ಯರ ಆಸ್ಥಾನದಿಂದ ಬರಮಾಡಿಕೊಂಡು ಅಜಿತನಾಥ ಪುರಾಣವನ್ನು ಬರೆಯಿಸಿದಳು. ಅವಳ ದಾನಗುಣ, ಸಂಸ್ಕೃತಿ, ವಿದ್ಯೆ, ದೈವಭಕ್ತಿ, ಮಾತೃತ್ವ ಇವೆಲ್ಲ ವಿಷಯಗಳ ಬಗೆಗೆ ರನ್ನ ಅತ್ಯದ್ಭುತವಾಗಿ ವಿವರಿಸಿದ್ದಾನೆ[21] ರನ್ನನು ಬರೆದ ಅಜಿತನಾಥ ಪುರಾಣದ ಪುರಾಣದ 1000 ಪ್ರತಿಗಳನ್ನು ಬರೆಯಿಸಿ ಆ ಕಾಲದಲ್ಲಿ ಹಂಚಿಸಿದಳು. ಇವಳ ಬಗೆಗೆ ಜೈನ ಗ್ರಂಥಗಳಲ್ಲಿ ವಿಶೇಷ ಶ್ಲಾಘನೆಯಿದೆ. ಆಗಿನ ಕಾಲದಲ್ಲಿ ಎಷ್ಟೋ ಸ್ತ್ರೀಯರು ರಾಜ್ಯಪದಾಧಿಕಾರಿಗಳಾಗಿ ರಾಜ್ಯವನ್ನು ಆಳಿದ ಉದಾಹರಣೆಗಳೂ ಉಂಟು. ಬಾದಾಮಿ ಚಾಲುಕ್ಯ ರಾಜನಾದ ಚಂದ್ರಾದಿತ್ಯನ ಹೆಂಡತಿಯಾದ ವಿಜಯಭಟ್ಟಾರಿಕೆಯು ಕ್ರಿ.ಶ. 7ನೆಯ ಶತಮಾನದಲ್ಲಿ ಈಗಿನ ಸಾವಂತವಾಡಿಯ ಸುತ್ತಮುತ್ತಣ ಪ್ರದೇಶವನ್ನು ಆಳುತ್ತಿದ್ದಳು. ರಾಷ್ಟ್ರಕೂಟ ಅರಸನಾದ ಕನ್ನರದೇವನು ಸತ್ತರಸ ನಾಗಾರ್ಜುನನ ಹೆಂಡತಿಗೆ (ಕ್ರಿ. ಶ. 918) ನಾಡಗಾವುಂಡ ಪದವಿಯನ್ನು ದಯಪಾಲಿಸಿದ್ದನು[22] ಈ ಎಲ್ಲ ಸಂಗತಿಗಳಮೇಲಿಂದ ಕರ್ನಾಟಕದ ಸ್ತ್ರೀ ಶಿಕ್ಷಣದ ಪ್ರಭಾವವು ಹೇಗೆ ಮೆರೆಯುತ್ತಿದ್ದಿತೆಂಬುದರ ಬಗೆಗೆ ಸ್ಥೂಲವಾದ ಒಂದು ವಿಚಾರವು ಗೋಚರವಾಗುವುದಿಲ್ಲವೆ?

ಸ್ತ್ರೀಯರ ಸಲುವಾಗಿ ರೂಢಿಯಲ್ಲಿದ್ದ ನಿರ್ಬಂಧನೆಗಳು ತಾಂಡವವಾಡುತ್ತಿರುವ ಕಾಲದಲ್ಲಿಯು ಕೂಡ ದೊಡ್ಡಮನೆತನದ ಎಷ್ಟೋ ಸ್ತ್ರೀಯರು ರಾಜಕೀಯ ಹಾಗೂ ಸೈನಿಕ ಶಿಕ್ಷಣವನ್ನು ಅಂದರೆ ಕತ್ತಿವರಸೆ, ಕುದುರೆ ಏರುವುದು ಮೊದಲಾದುವುಗಳಲ್ಲಿ ತರಬೇತಿ ಹೊಂದುತ್ತಿದ್ದರು. ದೊಡ್ಡ ಮನೆತನದಲ್ಲಿನ ಸ್ತ್ರೀಯರಿಗೆ ಶೈಕ್ಷಣಿಕ ಹಾಗೂ ಸಾಮಾಜಿಕ ಸಂಸ್ಥೆಗಳಿಗೆ ದಾನವನ್ನು ನೀಡಲು ಸಾಕಷ್ಟು ಸ್ವಾತಂತ್ರ್ಯವಿರುತ್ತಿತ್ತು. ಶಾತಕರ್ಣಿಯ ಮಗಳು ಕದಂಬರಿಗಿಂತಲೂ ಮೊದಲು ಬಾಳಿದವಳು. ಅವಳು ದಾನವಿತ್ತುದು. ಕೆರೆಕಟ್ಟಿಸಿದುದು, ವಿಹಾರಗಳನ್ನು ನಿರ್ಮಾಣಗೊಳಿಸಿದುದು ಗೊತ್ತಾಗುವುದು. ಈಗಿರುವ ಬನವಾಸಿಯ ಮಧುಕೇಶ್ವರ ದೇವಾಲಯವು ಈ ಮೊದಲಿದ್ದ ದೇವಾಲಯದ ಆವಾರದಲ್ಲಿಯೇ ಕಟ್ಟಿದ್ದಿರಬೇಕೆಂದು ಹೇಳಬಹುದು[23].

ಮನುವಿನ ಕಟ್ಟಪ್ಪಣೆಯ ಮೇರೆಗೆ ಬ್ರಾಹ್ಮಣ ಸ್ತ್ರೀಯರಲ್ಲಿ ಅನೇಕರು ಕೀಳು ತರಗತಿಗಳಿಗೆ ಇಳಿಯಹತ್ತಿದರು ಅವರ ಮನಸ್ಸಿನಲ್ಲಿ ಉದ್ಭವವಾಗುತ್ತಿರುವ ಅನೇಕ ಸ್ವಾತಂತ್ರ್ಯದ ಮನೋಭಾವಗಳಿಗೆ ಧರ್ಮಶಾಸ್ತ್ರವು ವಿರೋಧವಾಗಿತ್ತು. ಆದರೆ ಬ್ರಾಹ್ಮಣೇತರ ಸ್ತ್ರೀಯರು ಕ್ರಿಸ್ತಪೂರ್ವಕ್ಕಿಂತಲೂ ಮೊದಲು ಅನುಭವಿಸುತ್ತಿದ್ದ ಸ್ವಾತಂತ್ರ್ಯವನ್ನೂ, ಗೌರವವನ್ನೂ ಪಡೆಯತೊಡಗಿದರು. ಮಧ್ಯಮ ತರಗತಿಗೆ ಸೇರಿದ ಎಷ್ಟೋ ಹೆಣ್ಣುಮಕ್ಕಳಿಗೆ ಸಂಗೀತ, ಚಿತ್ರಕಲೆ, ಹೆಣಿಗೆ, ನೃತ್ಯ, ಗೃಹಶಿಕ್ಷಣ ಮೊದಲಾದುವುಗಳ ಬಗೆಗೆ ಶಿಕ್ಷಣ ದೊರಕುತ್ತಿತ್ತು. ಆದರೆ ಸ್ತ್ರೀಯರಿಗೆ ಶಿಕ್ಷಣವು ಪುರುಷರಿಗೆ ಸಮಾನವಾಗಿ ದೊರೆಯುವುದು ನಿಂತುಬಿಟ್ಟಿತು. ಕೆಲವೊಂದು ಅಪವಾದಗಳು ಇದ್ದರೂ ಇರಬಹುದು.

---

21. ಬಿಳಿಯರಳೆಯಂತೆ ಗಂಗಾ।
ಜಳದಂತೆಸೆವ ಅಜಿತಸೇನ ಮುನಿಯಗುಣಾ।
ವಳಿಯಂತೆ ನೆಗಳ್ದ ಕೊಪಣಾ।
ಚಳದಂತೆ ಪವಿತ್ರಮತ್ತಿಮಬೆಯ ಚರಿತಂ ॥೧॥
ಅಳರದುಕೀರ್ತಿ ಮುಟ್ಟದು ವಿಷಾಹಿ ಮಹಾಸತಿ
ಯಿದ್ದಮಂಡಲಂ।
ಬೆಳೆವುದು ಬೇಡಿದಂತೆ ಮಳೆಕೊಳ್ವುದೆನಿಪ್ಪ ಜಪಕ್ಕೆ
ನೋಂತು ಭೂ।
ತಿಲಕಪತಿವ್ರತಾ ಗುಣಪವಿತ್ರೆಯನಾಸತಿಯಂ
ಮಹಾಸತೀ।
ತಿಲಕೆಯನತ್ತಿಮಬ್ಬರಸಿಯಂ ಪೆಸರ್ಗೊಳ್ವುದು
ಪುಣ್ಯಕಾರಕಂ ॥೨॥

22. Social and Political Life in Vijayanagara Empire VOL II, P. 158.

23. Kadamba Kula P. 5.

# ಬ ಳ್ಳಿ ಗಾ ವಿ

—ಎಸ್. ಎಸ್. ಮಾಳವಾಡ,
ನಿವೃತ್ತ ಕನ್ನಡ ಪ್ರಾಧ್ಯಾಪಕರು.

ಬನವಾಸೆನಾಡು ಪ್ರಾಚೀನ ಕರ್ನಾಟಕದ ಉದ್ಯಾನವಾಗಿತ್ತು. ಬನವಾಸೆ ನಾಡಿನ ರಾಜಧಾನಿಯಾದ ಬಳ್ಳಿಗಾವಿಯು ಕನ್ನಡ ನಾಡದೇವಿಯ ಕುಂಕುಮ ತಿಲಕದಂತಿತ್ತು. ಬಳ್ಳಿಗಾವಿಯು ಈಗ ಮೈಸೂರು ಸಂಸ್ಥಾನದ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನಲ್ಲಿ ಒಂದು ಹಳ್ಳಿಯಾಗಿದೆ. ಅದು ಶಾಸನಗಳಲ್ಲಿ ಬಲಿಪುರ, ಬಳ್ಳಿಪುರ, ಬಳ್ಳಿಗ್ರಾಮ ಮುಂತಾದ ಹೆಸರುಗಳಿಂದ ಕರೆಯಲ್ಪಟ್ಟಿದೆ. ಬಲಿ ರಾಕ್ಷಸನ ಸಂಬಂಧದಿಂದ ಬಲಿಪುರವೆಂಬ ಹೆಸರು ಬಂದಿದೆಯೆಂದು ಹೇಳಲಾಗುತ್ತಿದೆ. ಆದರೆ ಉದ್ಯಾನಗಳ ತವರೂರಾದ ಬನವಾಸೆಯ ರಾಜಧಾನಿಯಾಗಿ, ಬಳ್ಳಿಗಳಿಂದ ತುಂಬಿದ್ದರಿಂದ ಅದನ್ನು ಬಳ್ಳಿಗಳ ಗ್ರಾಮವೆಂದೂ ಕರೆಯಬಹುದಾಗಿದೆ. ಇದು ಪ್ರಾಚೀನ ಕನ್ನಡನಾಡಿನ ಕೈಪಿಡಿಯಂತಿದ್ದು ಕನ್ನಡರ ಸಂಸ್ಕೃತಿಯ ವೈಶಿಷ್ಟ್ಯದ ಗುರುತುಗಳಾದ ಗುಡಿ, ಕೆರೆ, ಉದ್ಯಾನಗಳಿಂದ ಈ ರಾಜಧಾನಿಯು ಸಮೃದ್ಧಿಯಾಗಿತ್ತು. ಈಗಲೂ ಕೂಡ ನಾವು ಇಲ್ಲಿ ಆ ಅವಶೇಷಗಳನ್ನು ಕಾಣುತ್ತೇವೆ. ಬನವಾಸೆನಾಡು ಶಾಸನಗಳಲ್ಲಿ ಬಹುವಿಧವಾಗಿ ವರ್ಣಿಸಲ್ಪಟ್ಟಿದೆ. ಅವುಗಳಲ್ಲಿ ಒಂದೆರಡು ಅವತರಣಿಕೆಗಳನ್ನು ಉದ್ಧರಿಸದೆ ಮುಂದೆ ಸಾಗಲಾರೆ,

ಇದು ಸುಖದಾಗರಂ ಸಿರಿಯ ಪುಟ್ಟಿದ
ಸಾಗರಮಾರಯ್ಯಲ್ ಸಮ।
ಭ್ಯುದಯದ ಗೊತ್ತು ಸತ್ಯದ ತವರ್ಮನೆ
ಚಿತ್ತಜನಿರ್ಕೆದಾಣಮು ॥
ನ್ಮದ ಯುವತೀ ಜನಂಗಳೇಳಿವಟ್ಟು ಬುಧಾಳಿಯ
ಜನ್ಮಭೂಮಿಯೆಂ ॥
ಬುದನೆನೆ ಶೋಭೆಯಂ ತಳೆದುದಿಂತನಿಶಂ ಬನವಾಸಿ
ಮಂಡಲಂ ॥

(ದಾವಣಗೆರೆ ಶಾಸನ ೩೫)

ಫಲಭರದಿಂ ಮನಂಗೊಳಿಪ ಪೂಗವನಂ ವನದೊಳ್
ಸರೋಜಲಂ।
ಜಲದ ಪೊನಲ್ಗಳಿಂ ಬೆಳೆದು ಕತ್ತಲಿಸಿರ್ಪೆಲೆವಳ್ಳಿ
ಬಳ್ಳಿಗೊಂ ॥
ಡುಲಿವ ಪಿಕಂ ಪಿಕಧ್ವನಿಗಳಿಂ ನಲಿದಾಡುವನಂಗನಂಗನಾ।
ಕುಲಮದೆ ಲಕ್ಷ್ಮಿ ಲಕ್ಷ್ಮಿಗೆ ಸಮೃದ್ಧಿಕರಂ ಬನವಾಸೆ
ದೇಶದೊಳ್ ॥

(ಸೊರಬದ ಶಾಸನ ೨೭೭)

ಇಂತಹ ನಾಡಿನ ರಾಜಧಾನಿಯು ರಸಿಕತೆಯ, ಸಂಪತ್ತಿನ, ವೈದುಷ್ಯದ, ಸದ್ಗುಣಗಳ ತವರೂರಾಗಿತ್ತೆಂದು ಬೇರೆ ಹೇಳಬೇಕಾಗಿಲ್ಲ.

ಬಳ್ಳಿಗಾವಿಯು ಅತಿ ಪ್ರಾಚೀನ ರಾಜಧಾನಿಯಾಗಿದೆ. ಇಲ್ಲಿ ಪಾಂಡವರಿಂದ ಪಂಚಲಿಂಗಗಳು ಸ್ಥಾಪಿಸಲ್ಪಟ್ಟವೆಂದು ಶಿಕಾರಿಪುರದ ೧೨೩ನೆಯ ಶಾಸನದಲ್ಲಿ ಉಕ್ತವಾಗಿದೆ. ಹನ್ನೆರಡನೆಯ ಶತಮಾನದಲ್ಲಿಯಂತೂ ಈ ಪಟ್ಟಣವು ವಿಶೇಷವಾದ ಘನತೆಯನ್ನು ಪಡೆಯಿತು. ಆದರೆ ಅದಕ್ಕೆ ಮೊದಲು ಬಹುಕಾಲದಿಂದ ಸುಪ್ರಸಿದ್ಧ ರಾಜಧಾನಿಯಾಗಿರಬೇಕು. ಏಕೆಂದರೆ ಅದು ಹನ್ನೆರಡನೆಯ ಶತಮಾನದಲ್ಲಿ ಕೂಡ ಅನಾದಿ ರಾಜಧಾನಿಯೆಂದು ವರ್ಣಿಸಲ್ಪಟ್ಟಿದೆ. ಅಲ್ಲದೆ ಅದು ಪಟ್ಟಣಗಳ ತವರುಮನೆಯೆಂದೂ ಕರೆಯಲ್ಪಟ್ಟಿದೆ. ಇದು ರಾಜಧಾನಿಯಾಗಿರುವಂತೆ ಪ್ರಸಿದ್ಧ ಕ್ಷೇತ್ರವೂ ಅಹುದು. ಇದು ಪುರಿ, ಬ್ರಹ್ಮಪುರಿ, ಮಠಗಳಿಂದ ತುಂಬಿಕೊಂಡು ಒಂದು ಪ್ರಸಿದ್ಧ ಧಾರ್ಮಿಕ ಕೇಂದ್ರವಾಗಿತ್ತೆಂದು ಶಿಲಾಶಾಸನಗಳಲ್ಲಿ ಉಕ್ತವಾಗಿದೆ. ಅತಿ ಪ್ರಾಚೀನವಾದ ರಾಜಧಾನಿ, ಧಾರ್ಮಿಕ ಕೇಂದ್ರ, ಕೆರೆ, ಉದ್ಯಾನಗಳ ನಿಸರ್ಗ ರಮಣೀಯತೆ ಇವುಗಳ ಮೂಲಕ ಬಳ್ಳಿಗಾವಿಯು ಕನ್ನಡಿಗರ ಅಭಿಮಾನದ ಸೊತ್ತಾಗಿದೆಯೆಂದು ಹೇಳಬಹುದು.



ಹನ್ನೆರಡನೆಯ ಶತಮಾನವು ಕರ್ನಾಟಕದ ಚರಿತ್ರೆಯಲ್ಲಿ ಒಂದು ವಿಪ್ಲವದ ಕಾಲ. ಧಾರ್ಮಿಕ, ರಾಜಕೀಯ ಚಟುವಟಿಕೆಗಳ ಕಾಲ. ಅಂತಹ ಕಾಲಕ್ಕೆ ಬಳ್ಳಿಗಾವಿಯು ಒಂದು ಪ್ರಸಿದ್ಧ ಕೇಂದ್ರವಾಗಿತ್ತು. ಆಗ ನಡೆದ ವೀರಶೈವ ಧಾರ್ಮಿಕ ಕ್ರಾಂತಿಯಲ್ಲಿ ಮೂರು ಕೇಂದ್ರಗಳು ಜನತೆಯನ್ನು ಆಕರ್ಷಿಸಿದವು. ಕರ್ಮಯೋಗಿಯಾದ ಸಿದ್ಧರಾಮನ ಸೊನ್ನಲಿಗೆ, ಭಕ್ತಿಯೋಗಿ ಬಸವಣ್ಣನ ಕಲ್ಯಾಣ, ಜ್ಞಾನಯೋಗಿ ಪ್ರಭುದೇವರ ಬಳ್ಳಿಗಾವಿ ಇವೇ ಆ ಮೂರು ಕೇಂದ್ರಗಳು. ವೀರಶೈವ ವಿಭೂತಿಗಳಲ್ಲಿ ಮಹಾ ತೇಜಸ್ವಿಯಾದ ಪ್ರಭುದೇವನು ಬಳ್ಳಿಗಾವಿಯವನೆಂದು ಹೇಳಲಾಗುತ್ತದೆ. ಈ ಮಾತಿಗೆ ಪುಷ್ಟಿ ದೊರೆಯುವಂತೆ ಈಗ ಬಳ್ಳಿಗಾವಿಯಲ್ಲಿ ಪ್ರಭುದೇವರ ಗುಡಿಯೊಂದು ತೋರಿಸಲ್ಪಡುತ್ತದೆ. ಇಲ್ಲಿಂದ ಸ್ವಲ್ಪ ಅಂತರದಲ್ಲಿ ಅನಿಮಿಷಯ್ಯನ ಕೊಪ್ಪಳು ಇದೆ. (ಈ ಅನಿಮಿಷಯ್ಯನು ಪ್ರಭುದೇವನ ಗುರುವೆಂದು ನಂಬಲಾಗುತ್ತದೆ.) ಹಾಗೂ ಸಮೀಪದಲ್ಲಿಯೇ ಗೊಗ್ಗಯ್ಯನ ಚಾಕಿ, ಏಕಾಂತದ ರಾಮಯ್ಯನ ಗುಡ್ಡ ಇವುಗಳು ಇವೆ. ಇವೆಲ್ಲವುಗಳಿಂದ ಈ ಭಾಗವು ವೀರಶೈವ ಧಾರ್ಮಿಕ ಕ್ರಾಂತಿಯ ಕಾರ್ಯಕ್ಷೇತ್ರವಾಗಿತ್ತೆಂದು ಸ್ಪಷ್ಟವಾಗಿ ತಿಳಿದು ಬರುತ್ತದೆ. ಈ ನಾಡಿನಲ್ಲಿ ಆಗ ವೀರಶೈವರ ಪ್ರಭಾವವು ಹೆಚ್ಚಾಗಿತ್ತೆಂದು ತಿಳಿಯಲಿಕ್ಕೆ ಅಡ್ಡಿ ಇಲ್ಲ. ಹದಿನಾಲ್ಕನೆಯ ಶತಮಾನದಲ್ಲಿ ಒಬ್ಬ ವೀರಶೈವನು ಲಿಂಗವಂತ ಧರ್ಮಪ್ರಸಾರಕ್ಕಾಗಿ ಮಕ್ಕಾದವರೆಗೆ ಹೋಗಿದ್ದನೆಂದೂ ಅವನ ಹೆಸರಿನಿಂದಲೇ ಇಲ್ಲಿ ಮಲೆಯ ಮಲ್ಲೇಶ್ವರಲಿಂಗ ಸ್ಥಾಪನೆಯಾಗಿದೆಯೆಂದೂ ಒಂದು ಆಖ್ಯಾಯಿಕೆ ಇದೆ. ಈ ಮಾತನ್ನು ಮ॥ ರಾ॥ ಶ್ರೀ ಸಿ. ಹಯವದನರಾಯರು ತಮ್ಮ ಮೈಸೂರ ಗ್ಯಾಜಿಟೀಯರದಲ್ಲಿ ಹೇಳಿದ್ದಾರೆ. ಮಹಾತೇಜಸ್ವಿ ವಿಭೂತಿಯಾದ ಪ್ರಭುದೇವನ ಸಂಬಂಧದಿಂದ ಈ ಪಟ್ಟಣವು ಕೀರ್ತಿಶಾಲಿಯಾಗಿದೆ. ಅಲ್ಲದೆ ವೀರ ವಿರಕ್ತೆಯೂ, ಮಹಿಳಾಪ್ರಪಂಚದ ಆದರ್ಶಳೂ ಆದ ಅಕ್ಕಮಹಾದೇವಿಯ ಸಂಬಂಧವೂ ಕೂಡ ಈ ಊರಿಗೆ ಇದೆ. ಈಗ ಬಳ್ಳಿಗಾವಿಯ ದೊಡ್ಡದಾರಿಯ ಮೇಲೆ ಕಮಲ ಗಂಗವ್ವನ ಗುಡಿಯೊಂದು ತೋರಿಸಲ್ಪಡುತ್ತದೆ. ಅಕ್ಕಮಹಾದೇವಿಯ ಊರೆಂದು ನಂಬಲಾದ ಉಡುತಡಿ ಗ್ರಾಮವಾದರೂ ಇಲ್ಲಿಗೆ ಸಮೀಪದಲ್ಲಿ ಇದೆ. ಹೀಗೆ ವೀರಶೈವ ಶರಣ-ಶರಣೆಯರ ಸ್ಥಳಗಳು ಈ ಬಳ್ಳಿಗಾವಿಯ ನೆರೆಯಲ್ಲಿಯೇ ಇರುವುದರಿಂದ ಈ ಊರಿನ ಮಹತ್ವವು ಇನ್ನೂ ಹೆಚ್ಚುತ್ತದೆ. ಬಳ್ಳಿಗಾವಿ ಹಾಗೂ ಅದರಿಂದ ಸ್ವಲ್ಪ ಅಂತರದ ಮೇಲೆ ಇರುವ ಸ್ಥಳಗಳು ಅಲ್ಲಮಪ್ರಭು, ಅನಿಮಿಷಯ್ಯ, ಗೊಗ್ಗಯ್ಯ, ಏಕಾಂತ ರಾಮಯ್ಯ ಹಾಗೂ ಅಕ್ಕಮಹಾದೇವಿ ಈ ಉದಾತ್ತ ಕಾರ್ಯರಂಗಗಳಾಗಿವೆ.

ಈ ಬಳ್ಳಿಗಾವಿಯು ಚಾರಿತ್ರ ದೃಷ್ಟಿಯಿಂದಲೂ ಮಹತ್ವದ್ದಾಗಿದೆ. ಈ ಊರು ಶಿಲಾಶಾಸನ, ಮಾಸ್ತಿಕಲ್ಲು, ವೀರಗಲ್ಲು, ನಿಸದಿಗೆ ಕಲ್ಲು ಇವುಗಳ ಭಾಂಡಾರವಾಗಿದ್ದು ಚರಿತ್ರ ಸಂಶೋಧಕರಿಗೆ ವಿಪುಲ ಕ್ಷೇತ್ರವನ್ನು ಒದಗಿಸಿಕೊಡುತ್ತದೆ. ಶಿಕಾರಿಪುರದ ೯೨, ೯೬, ೯೮, ೧೦೨, ೧೦೬, ೧೧೭ ಮತ್ತು ೧೨೩ನೆಯ ಶಿಲಾಶಾಸನಗಳಲ್ಲಿಯೂ, ಸೊರಬದ ೧೬೯,೨೭೭ನೆಯ ಶಾಸನ ಮುಂತಾದವುಗಳಲ್ಲಿಯೂ ಈ ಪಟ್ಟಣದ ಘನತೆಯು ಸುಂದರವಾಗಿ ವರ್ಣಿಸಲ್ಪಟ್ಟಿದೆ. ಶಾಸನಗಳ ವರ್ಣನೆಗಳಿಂದ ಇದು ಬಹು ಮುಂದುವರಿದ ಪಟ್ಟಣವಾಗಿತ್ತೆಂದು ಕಂಡುಬರುತ್ತದೆ. ಶಿಕಾರಿಪುರದ ೧೨೩ನೆಯ ಶಾಸನದಲ್ಲಿಯ ವರ್ಣನಾ ಭಾಗವು ಗಮನಾರ್ಹವಾಗಿರುವುದರಿಂದ ಅದನ್ನು ಕೆಳಗೆ ಸಂಗ್ರಹಿಸಿದೆ— "ಬಲಿಪುರವು ಬನವಾಸೆ ಪ್ರಾಂತದ ರಾಜಧಾನಿಯಾಗಿತ್ತು. ಪೂರ್ವದ ದಂಡನಾಯಕರು ಅಲ್ಲಿ ಸತ್ರ, ವಿಹಾರೋದ್ಯಾನ, ಗುಡಿ, ಕೆರೆ, ಕಾಲುವೆಗಳನ್ನು ನಿರ್ಮಿಸಿದ್ದರು. ಅದು ಜಗತ್ತಿನಲ್ಲಿ ಪ್ರಸಿದ್ಧವಾದ ಪಟ್ಟಣವಾಗಿತ್ತು. ಅಲ್ಲದೆ ಅದು ಪ್ರಾಚೀನಕಾಲದಿಂದ ಪ್ರಗತಿಪರವಾಗಿತ್ತು. ಪಾಂಡವರು ಪಂಚ ಲಿಂಗಗಳನ್ನು ಸ್ಥಾಪಿಸಿದರು. ಈ ಪಟ್ಟಣವು ಪ್ರತಿಷ್ಠನಾಗರಿಕರಿಂದಲೂ ಸೆಟ್ಟಿ-ಸಾಹುಕಾರರಿಂದಲೂ ತುಂಬಿತ್ತು. ಇಲ್ಲಿಯ ಹಿರಿಯಮಠ, ಪಂಚಲಿಂಗಮಠ, ತ್ರಿಪುರಾಂತಕಮಠ, ಕೋಡಿಯ ಮಠಗಳಲ್ಲಿ ನಿಷ್ಠಾವಂತರಾದ ಆಚಾರ್ಯರು ಇದ್ದರು. ಅವರು ರಾಜರಿಂದ ಗೌರವಿಸಲ್ಪಡುತ್ತಿದ್ದರು." ಸೊರಬದ ೨೭೭ನೆಯ ಶಾಸನದಿಂದ

ಇಲ್ಲಿಯ ಪಂಚಮಠಗಳಿಂದ ಸ್ವಧರ್ಮ ರಕ್ಷಣೆಯು ಸರಿಯಾಗಿ ನಡೆಯುತ್ತಿತ್ತೆಂದೂ, ಇಲ್ಲಿ ಮೂರು ಔಷಧಾಲಯಗಳಿದ್ದವೆಂದೂ ತಿಳಿಯುತ್ತದೆ. ಬಳ್ಳಿಗಾವಿಯಲ್ಲಿ ಆಗ ಇದ್ದ ಕೋಡಿಯ ಮಠದ ಘನತೆಯಂತೂ ಯಾರನ್ನಾದರೂ ಬೆರಗುಗೊಳಿಸದೆ ಬಿಡದು. ಕರ್ನಾಟಕದಲ್ಲಿ ಅದೊಂದು ವಿಶ್ವವಿದ್ಯಾಲಯವಾಗಿತ್ತು. ಅದು ಮಠವೆಂದು ಕರೆಯಲ್ಪಟ್ಟಿದ್ದರೂ ಕೂಡ ಮಾನವನ ಬಹುಮುಖ ಬೆಳವಣಿಗೆಗೆ ಅವಕಾಶವನ್ನೀಯುವ ಸಂಸ್ಥೆಯಾಗಿತ್ತು. ಘನಪಂಡಿತರೂ, ಉಜ್ವಲ ಧಾರ್ಮಿಕರೂ, ರಾಜಪೂಜಿತರೂ ಆದ ಮಠದ ಆಚಾರ್ಯರು ಅಲ್ಲಿದ್ದರೆಂದು ಅನೇಕ ಶಾಸನಗಳು ಹೇಳುತ್ತವೆ

ವೀರಶೈವ ಧರ್ಮದ ಇತಿಹಾಸದಲ್ಲಿ ಇನ್ನೂ ಒಂದು ಒಗಟವೇ ಆಗಿ ಉಳಿದಿರುವ ಕಾಳಾಮುಖರ ಒಂದು ಶಾಖೆಯವರು ಅಲ್ಲಿಯ ಮಠದಾಚಾರ್ಯರಾಗಿದ್ದರು. ಶಿಕಾರಿಪುರದ ಅನೇಕ ಶಾಸನಗಳಲ್ಲಿ ಈ ಮಠದ ಘನತೆಯು ಉಕ್ತವಾಗಿದೆ. ಅದು ಸಕಲ ವಿದ್ಯೆಗಳ ತವರುಮನೆಯಾಗಿತ್ತೆಂದು ತಿಳಿದುಬರುತ್ತದೆ. ಅದು ನಿರ್ಗತಿಕರ ಊಟದ ಮನೆಯಾಗಿ, ರೋಗಿಗಳ ಆರೈಕೆಯ ಮನೆಯಾಗಿ, ಭಿಕ್ಷುಕರಿಗೆ ಸಹಾಯವನ್ನು ನೀಡುವ ನಿವಾಸವಾಗಿ, ವಿವಿಧ ಕಲೆಗಾರರ ಬೀಡಾಗಿ, ಧಾರ್ಮಿಕ ಕ್ರಿಯೆಗಳ ಕೇಂದ್ರವಾಗಿ ಶೋಭಿಸುತ್ತಿತ್ತೆಂದು ತಿಳಿಯುತ್ತದೆ. ಇದರಿಂದ ಹಾಗೂ ಶಾಸನಗಳಲ್ಲಿ ಬರುವ



ಕೋಡೀಮಠದ ಪಕ್ಕದಲ್ಲಿರುವ ಕೇದಾರೇಶ್ವರ ದೇವಾಲಯ. ಈ ಮಹಾ ದೇವಾಲಯದ ಪ್ರತಿ ಮಂಟಪದಲ್ಲೂ ವಿವಿಧ ಶಾಸ್ತ್ರ ಪಾಂಡಿತ್ಯದ ವಿದ್ವಾಂಸರು ಶಿಷ್ಯರಿಗೆ ಶಿಕ್ಷಣ ನೀಡುತ್ತಿದ್ದರು. ಈ ದೇವಾಲಯದ ಹಿಂಭಾಗವೇ ಕೋಡೀಮಠವಿದ್ದ ಸ್ಥಳವೆಂದು ಸ್ಥಳೀಯ ಜನಗಳಿಂದ ಗುರುತಿಸಲ್ಪಡುತ್ತಿದೆ.



ಇನ್ನುಳಿದ ವರ್ಣನೆಗಳಿಂದ ಈ ಮಠವು ಅದೆಷ್ಟು ಉಜ್ವಲವಾಗಿತ್ತೆಂಬುದನ್ನು ಊಹಿಸಬಹುದು. ಈ ಉಜ್ವಲ ಸಂಸ್ಥೆಯನ್ನೊಳಗೊಂಡ ಬಳ್ಳಿಗಾವಿಯು ಕೂಡ ಉಜ್ವಲವೇ ಸರಿ.

ಕಲಚೂರ್ಯ ಬಿಜ್ಜಳನ ಕಾಲದ ಶಾಸನಗಳಲ್ಲಿ ಈ ಊರು ಅನೇಕ ಸಲ ಉಕ್ತವಾಗಿದೆ. ದಂಡಯಾತ್ರೆಯ ಕಾಲಕ್ಕೆ ರಾಜರು ಅಲ್ಲಿ ಬೀಡು ಬಿಡುತ್ತಿದ್ದರೆಂದು ಹೇಳಿದೆ. ಅದರಂತೆ ಇಲ್ಲಿ ಬಿಜ್ಜಳ ಅರಸನು ಬೀಡು ಬಿಟ್ಟಾಗ ತನ್ನ ಅಧಿಕಾರಿಯ ಪ್ರಾರ್ಥನೆಯ ಮೇರೆಗೆ ಇಲ್ಲಿ ಧರ್ಮಕಾರ್ಯ ನಡೆಯಿಸಿದನೆಂದೂ ಕೋಡಿಯ ಮಠಕ್ಕಾಗಿ ಕೆಲವು ಊರುಗಳನ್ನು ದಾನವಾಗಿ ಕೊಟ್ಟನೆಂದೂ ಒಂದು ಶಾಸನದಲ್ಲಿ ಉಕ್ತವಾಗಿದೆ. ಶಿಕಾರಿಪುರದ ೧೨೩ನೆಯ ಶಾಸನದಲ್ಲಿ ಕೇಶವಪುರವು ಹೀಗೆ ವರ್ಣಿಸಲ್ಪಟ್ಟಿದೆ:—

ಇದು ಕೃತಕಲ್ಪ ಜನ್ಮನಿಲಯಂ ದಿಟವಿಂತಿದು
ವಿಶ್ವವೇದದ।
ಭ್ಯುದಯನಿವಾಸವಿಂತಿದು ಪವಿತ್ರ ಚರಿತ್ರಗುಣಾಕರಂ
ಸಮಂ।
ತಿದು ಘನ ಪುಣ್ಯಸಂಪದನಿಕೇತನಮೆಂಬಿನಮೊಪ್ಪಿತೋ।
ರ್ಪುದು ಪಲೆ ವೀರಕೇಶವಪುರಂ ಧರಣೀನವರತ್ನಮಾ
ಪುರಂ॥

ಈ ಕೇಶವಪುರವು ಬಳ್ಳಿಗಾವಿಯ ಒಂದು ಭಾಗವೇ ಆಗಿರಬೇಕು.

ಬಳ್ಳಿಗಾವಿಯು ಶಾಸನಗಳಲ್ಲಿ ಅನಾದಿ ರಾಜಧಾನಿ, ಪಟ್ಟಣಗಳ ತವರುಮನೆ ಎಂದು ಉಕ್ತವಾಗಿದ್ದರೂ ಕೂಡ ಅದನ್ನು ನಾವು ಗುಡಿ–ಮಠಗಳ ಪಟ್ಟಣವೆಂದು ಯಥಾರ್ಥವಾಗಿ ಕರೆಯಬಹುದಾಗಿದೆ. ಈಗ ಈ ಹಳ್ಳಿಯಲ್ಲಿಯ ಜನರು ಪ್ರಾಚೀನ ಗುಡಿಗಳ ಕಲ್ಲುಗಳನ್ನೂ ಒಡೆದ ವಿಗ್ರಹಗಳನ್ನೂ ತಮ್ಮ ಮನೆಗಳಿಗಾಗಿ ಉಪಯೋಗಿಸಿಕೊಂಡಿದ್ದಾರೆ. ಈಗಲೂ ಕೂಡ ಬಳ್ಳಿಗಾವಿಯಲ್ಲಿ—

1. ಕೇದಾರೇಶ್ವರ ಗುಡಿ
2. ಪಂಚಲಿಂಗ ಗುಡಿ
3. ತ್ರಿಪುರಾಂತಕ ಗುಡಿ
4. ಸೋಮೇಶ್ವರ ಗುಡಿ

ಎಂಬ ಮುಖ್ಯ ನಾಲ್ಕು ಗುಡಿಗಳೂ ಅವುಗಳಿಗೆ ಹೊಂದಿಕೊಂಡಿರುವ ಇನ್ನೂ ಎಷ್ಟೋ ಸಣ್ಣ ಗುಡಿಗಳೂ ಅಲ್ಲಲ್ಲಿ ಬಿದ್ದ ವಿಗ್ರಹಗಳೂ ಇವೆ. ಈ ಪಟ್ಟಣವು ವೀರಶೈವ ಧರ್ಮಜಾಗ್ರತಿಯ ಕೇಂದ್ರವಾಗಿತ್ತೆಂದು ಹಿಂದೆ ಹೇಳಿದೆಯಷ್ಟೆ. ಆದರೆ ಇದು ಜೈನ, ಬೌದ್ಧ ಧರ್ಮಗಳಿಗೂ ಕಾರ್ಯರಂಗವಾಗಿರಬೇಕು. ಇಲ್ಲಿ ಒಂದು ದೊಡ್ಡದಾದ ಜೈನ ಮೂರ್ತಿಯೂ, ಅಲ್ಲಲ್ಲಿ ಸಣ್ಣ ಜೈನ ವಿಗ್ರಹಗಳೂ ಕಂಡುಬರುತ್ತವೆ. ಹಾಗೂ ಇಲ್ಲಿ ಒಂದು ಜೈನ ಬಸದಿ ಇತ್ತೆಂದು ತಿಳಿದು ಬರುತ್ತದೆ. ಇದರಿಂದ ಜೈನ ಧರ್ಮದವರಿಗೂ ಇದು ಆವಾಸವಾಗಿತ್ತೆಂದು ಹೇಳಬಹುದು ಮತ್ತು ಬಳ್ಳಿಗಾವಿಯು ಬೌದ್ಧ ಧರ್ಮ ಪ್ರಸಾರದ ಕೇಂದ್ರವು ಆಗಿತ್ತೆಂದು ಊಹಿಸಲಿಕ್ಕೆ ಆಸ್ಪದವಿದೆ. ನಾಗಿಯಕ್ಕನೆಂಬ ಬೌದ್ಧ ಭಿಕ್ಷುಕಳು ಇಲ್ಲಿ ತಾರಾದೇವಿಯ ಪ್ರತಿಷ್ಠಾಪನೆ ಮಾಡಿದಳೆಂದು ಶಾಸನಗಳಲ್ಲಿ ಉಕ್ತವಾಗಿದೆ. ಈಗ ಈ ಊರಿನ ಜಡ್ಡಿ ಕೆರೆಯ ಹತ್ತಿರ ತಾರಾಭಗವತಿಯ ಮೂರ್ತಿಯು ತೋರಿಸಲ್ಪಡುತ್ತದೆ. ಇಲ್ಲಿ ಒಂದು ಬೌದ್ಧಾಲಯವೂ ಇತ್ತೆಂದು ತಿಳಿಯುತ್ತದೆ.

ಬಳ್ಳಿಗಾವಿಯು ಕನ್ನಡಿಗರ ಸಂಸ್ಕೃತಿಯ ವೈಶಿಷ್ಟ್ಯಗಳನ್ನು ಅನೇಕ ದೃಷ್ಟಿಯಿಂದ ಸೂಚಿಸುವಂತಿದೆ. ಇಲ್ಲಿಯ ಶೈವ, ವೈಷ್ಣವ, ಜೈನ, ಬೌದ್ಧ ದೇವಸ್ಥಾನಗಳ ಮೂಲಕ ಕನ್ನಡಿಗರ ಧಾರ್ಮಿಕ ಸಹಿಷ್ಣುತೆಯ ಪರಿಚಯವಾಗುತ್ತದೆ. ಈ ಊರಿನಲ್ಲಿ ಈಗಲೂ ನಯನಮನೋಹರವಾಗಿ, ವಿಸ್ತಾರವಾಗಿ, ತಾವರೆಗಳಿಂದ ತುಂಬಿ ಕಂಗೊಳಿಸುವ ತಾವರೆಗೆರೆಯು ಕನ್ನಡಿಗರ ರಸಿಕತೆಯ ಕೈಗನ್ನಡಿಯಂತಿದೆ. ಭೈರುಂಡೇಶ್ವರ ಸ್ತಂಭದ ಬಳಿಯಲ್ಲಿಯ ಶೂಲಬ್ರಹ್ಮದ ಕಲ್ಲು ತತ್ತ್ವಕ್ಕಾಗಿ, ಧ್ಯೇಯಕ್ಕಾಗಿ ಜೀವವನ್ನು ತೃಣೀಕರಿಸುವ ಕನ್ನಡಿಗರ ವೈಶಿಷ್ಟ್ಯದ ಗುರುತಾಗಿದೆ. ಕೋಡಿಯ ಮಠದಿಂದ ಧ್ವನಿತವಾಗುವ ಕನ್ನಡರ ವಿಶಾಲ

ಹೃದಯ, ಅಪಾರ ಕರ್ತೃತ್ವ ಶಕ್ತಿ ಇವುಗಳ ನೆನಪೂ ಕೂಡ ರೋಮಾಂಚಕಾರಿಯಾಗಿದೆ. ಅಲ್ಲಿ ಇಂದು ಹಾಳು ಗೋಡೆಗಳಿಂದ ಕೂಡಿದ ಕೊಂಪೆಯನ್ನು ಕಂಡವರು ಕನ್ನಡನಾಡಿನ ಈಗಿನ ಹೀನ ಸ್ಥಿತಿಯು ಸ್ಮರಣದಿಂದ ಕಣ್ಣೀರು ಸುರಿಸದೆ ಇರಲಾರರು. ಭೈರವೇಶ್ವರ ಗರುಡ ಸ್ತಂಭದ ಮೊದಲಿನ ಮೂರ್ತಿ ಅಳಿದು ಹೋಗಿರಲು ಆಧುನಿಕರಾದ ಸಿದ್ಧಲಿಂಗ ಶಿಲ್ಪಿಗಳಿಂದ ರಚಿತವಾದ ಕಲಾಪೂರ್ಣ ಹೊಸ ಮೂರ್ತಿಯು ಕನ್ನಡಿಗರ ಪುನರುಜ್ಜೀವನದ ಪ್ರಭಾತಕಾಲವನ್ನು ಸೂಚಿಸುವಂತೆ ಇದೆ. ಇಲ್ಲಿಯ ಗುಡಿಗಳಲ್ಲಿಯ ಕೆತ್ತನೆಯ ಕೈವಾಡವು ಕನ್ನಡಿಗರ ಶಿಲ್ಪಕಲೆಯ ವೈಭವವನ್ನು ಸೂಚಿಸುತ್ತ ನಿಂತಿದೆ. ಬಳ್ಳಿಗಾವಿಯು ಇಂದು ಅಳಿದುಳಿದ ಊರಾದರೂ ಕೂಡ ಪ್ರಾಚೀನ ಕನ್ನಡ ನಾಡಿನ ಸಂಕ್ಷಿಪ್ತ ರೂಪದಂತಿದ್ದು ಕನ್ನಡಿಗರ ಸಂಸ್ಕೃತಿಯ ಕೈಗನ್ನಡಿಯಾಗಿ ಇಂದಿಗೂ ಉಳಿದು ನಿಂತಿದೆಯೆಂದು ಕಂಡುಬರುವಂತಿದೆ.



## ಸಿದ್ಧಗಂಗಾ ಗಿರಿ

ಸಿದ್ಧಗಂಗಾಗಿರಿಯ ಮೇಲೇರಿ ನೋಡು!
ಸಿದ್ಧಗಂಗಾ ಕ್ಷೇತ್ರ ಮಹಿಮೆಯನು ಹಾಡು !
ನಡೆಮುಂದೆ ಯಾತ್ರಿಕನೆ ಸೋಪಾನವೇರಿ
ತಡವೇಕೆ ಹತ್ತಿನ್ನು ಖಗದಂತೆ ಹಾರಿ ;
ಗಣರಾಜ ಶೋಭಿಪನು ಗಿರಿಯ ಮೂಲದಲಿ
ಗಣನಾಥ ಸಿದ್ಧೇಶ್ವನಿಹನು ಮಧ್ಯದಲಿ !
ಸುತ್ತೆಲ್ಲ ನೋಡುವೊಡೆ ಬೆಟ್ಟಗಳಸಾಲು
ಚಿತ್ತದಲಿ ಉಕ್ಕುವುದು ಸಂತಸದ ಹಾಲು !
ಅಚ್ಚಹಸುರಿನ ಬಯಲು ಹಾಸು ತಳದಲ್ಲಿ
ಸ್ವಚ್ಛ ನೀರದಜಾಲ ಗಗನತಲದಲ್ಲಿ !
ಕೀಳುತನವನು ಬಿಟ್ಟು ಮೇಲೇರೆ ಮನಸು
ಬಾಳಿನಲ್ಲಿ ಹೊಳೆಯುವುದು ಸಗ್ಗಿಗರ ಸೊಗಸು !
ಅಲ್ಲುಂಟು ಮನಕೆ ಸಂತಸವೀವ ತಂಪು
ಅಲ್ಲುಂಟು ತಂಗಾಳಿ ತರುತಿರುವ ಕಂಪು !

ಸಿದ್ಧಲಿಂಗನ ಬಿಲುಮೆಯ ತಹುದು ತೀರ್ಥ
ಸಿದ್ಧಿಸಲು ಸಕಲಾರ್ಥ ಶ್ರೀಪಾದ ತೀರ್ಥ !
ಮಿಂದು ಬಾ ಯಾತ್ರಿಕನೆ, ಪುಣ್ಯ ಜಲದಲ್ಲಿ
ನಿಂದು ಬಾ ಸಿದ್ಧಲಿಂಗನ ಎದುರಿನಲ್ಲಿ !
ಆತ್ಮೋನ್ನತಿಯ ಸಿದ್ಧಗಿರಿಯಲ್ಲಿ ನಿಲ್ಲು
ಆತ್ಮ ಚಿಂತನೆಯಲ್ಲಿ ನೋಡು ಎಲ್ಲೆಲ್ಲು !
ಆನಂದ ಲಿಂಗವೇ ಸಿದ್ಧಗಿರಿ ನೋಡು
ಆನಂದ ಭಾವದಲಿ ದೇವನನು ಹಾಡು !
ಅಲ್ಲಿಹುದು ಉದ್ಯಾನ ಶಿವಯೋಗ ಶಾಂತಿ
ಅಲ್ಲಿಹುದು ಪ್ರಮಥಗಣ ಶಿವಧರ್ಮ ಕಾಂತಿ !

ಕವಿ : ಶ್ರೀ|| ಓ. ಎನ್. ಲಿಂಗಣ್ಣಯ್ಯ

[ಶ್ರೀ ಕ್ಷೇತ್ರದ ಪೂರ್ವ ವಿದ್ಯಾರ್ಥಿ]





# ಎರಡು ಜಗಜ್ಜ್ಯೋತಿಗಳು

## ಬುದ್ಧ ಮತ್ತು ಬಸವ

ಮೂಲ :

ಶ್ರೀ ಶ್ರೀ ಕುಮಾರಸ್ವಾಮೀಜಿ,
ನವಕಲ್ಯಾಣಮಠ, ಧಾರವಾಡ.

ಕನ್ನಡಕ್ಕೆ :

ಶ್ರೀ ಟಿ. ಆರ್. ಮಹದೇವಯ್ಯ
ಬೆಂಗಳೂರು.





ನಿರಾಶಾವಾದವು ಭೂಮಿಯ ಮೇಲಣ ಎಲ್ಲ ಧರ್ಮಗಳಲ್ಲಿಯೂ ಒಂದಲ್ಲ ಒಂದು ರೀತಿಯಲ್ಲಿ ಬಂದಿದೆ. ಆದರೆ ಬೌದ್ಧಮತವು ಅದಕ್ಕೆ ಒಂದು ಮಹತ್ವದ ಸ್ಥಾನವನ್ನು ಕೊಟ್ಟಿದೆ. ಬೌದ್ಧಮತದ ಆವೇಶಪರವಾದ ಆಧಾರವೆಂದರೆ ಎಲ್ಲರೂ ದುಃಖಿಗಳು ಎಂಬ ದೃಢ ನಿಶ್ಚಯದ ನಿರಾಶಾವಾದ. ಬಾಳುವುದೆಂದರೆ ಕಷ್ಟಪಡುವುದು; ಬಾಳು ಬವಣೆಯಲ್ಲದೆ ಬೇರೇನು ಇಲ್ಲ ಎಂಬ ಪ್ರತಿಪಾದನೆಗೆ ಈ ದೃಢ ನಿಶ್ಚಯವು ಬಂದು ನಿಲ್ಲುತ್ತದೆ. ಜೀವನವು ಬರೀ ಗೊತ್ತುಗುರಿ ಇಲ್ಲದ ವ್ಯಕ್ತಿಯ ಕಥೆಯಂತೆ ಇದೆ.

"ನಾವು ಅಲೆಮಾರಿ ಗಾಳಿಯ ಸ್ವರಗಳು; ಅದು ವಿಶ್ರಾಂತಿಗೆ ಹಲುಬುತಿದೆ, ಆದರೆ ವಿಶ್ರಾಂತಿಯು ಎಂದಿಗೂ ದೊರಕದು. ಗಾಳಿಯು ಎಂತೋ ಅಂತೆಯೇ ಮಾನವ ಜೀವನ — ಬರೀ ನರಳುವಿಕೆ, ನಿಟ್ಟುಸಿರು, ಬಿಕ್ಕಳಿಕೆ, ಕೋಲಾಹಲ, ಹೋರಾಟ.'

ಕೊಹಿಲೇತ್‌ನ ಬರವಣಿಗೆಯಲ್ಲಿಯೂ ನಿರಾಶವಾದದ ಉದ್ಗಾರಗಳು ವಿಪುಲವಾಗಿವೆ:—

'ನಿಸ್ಸಾರದಲಿ ನಿಸ್ಸಾರ, ಎಲ್ಲವೂ ತುಚ್ಛ, ಮಾನವನಿಗೆ ಕಷ್ಟದ ದುಡಿಮೆಯ ಫಲಯಾವುದು? ಎಲ್ಲ ವಸ್ತುಗಳು ಬೇಸರವನ್ನುಂಟುಮಾಡುವವೇ. ಮಾನವ ಅವುಗಳ ಬಗೆಗೆ ಮೂಕ. ಕಣ್ಣು ನೋಡುವುದರಿಂದ ತೃಪ್ತಿ ಪಡದು. ಕಿವಿ ಕೇಳಿ ತೃಪ್ತಿ ಹೊಂದದು,

ಕೋಹಿಲೇತ್‌ನಲ್ಲಿ "ನಿಸ್ಸಾರದಲಿ ನಿಸ್ಸಾರ, ಎಲ್ಲವೂ ನಿಸ್ಸಾರ" ಎಂಬ ಪುಮ್ಮಾನದ ಪಲ್ಲವಿ ಮೇಲಿಂದ ಮೇಲೆ ಕೇಳಿಬರುತ್ತದೆ. ಅದು "ಮರುಳರೆ, ನಿಮ್ಮ ಬಹುಮಾನ ಇಲ್ಲಿಯೂ ಇಲ್ಲ, ಅಲ್ಲಿಯೂ ಇಲ್ಲ. ಜೀವನವು ನಶ್ವರ, ಸಾವು ನಿಶ್ಚಯ" ಎಂಬ ಉಮರನ ಮಾತಿನಲ್ಲಿ ಸತ್ತ್ವಪೂರ್ಣವಾಗಿ ಪ್ರತಿಧ್ವನಿಸಿದೆ. ಈ ಎರಡು ವಿಚಾರಗಳನ್ನು ಮಾತ್ರ ಅವರು ಸತ್ಯವೆಂದರು. ನಮಗೆ ಸಿಕ್ಕ ಅವಕಾಶಗಳನ್ನು ಸಾಧ್ಯವಿದ್ದಷ್ಟು ನಾವು ಉಪಯೋಗಿಸಿಕೊಳ್ಳಬೇಕೆಂದು ಅವರ ಅಭಿಪ್ರಾಯ. ಕೊಹಿಲೇತ್ ಕೂಡ ಉಮರನಂತೆ ತಿನ್ನುವುದು, ಕುಡಿಯುವುದು ಮತ್ತು ಆನಂದವಾಗಿರುವುದು. ಇವನ್ನು ಬಿಟ್ಟರೆ ಮನುಷ್ಯನಿಗೆ ಬೇರೇನೂ ಇಲ್ಲವೆಂದು ಸಮಾಕರಿಸಿದ್ದಾನೆ. ಉಮರ್ ಖಯಾಮ್ ಕೂಡ ಬೇಸರ ತರುವ ಲೋಕದ ಗಡಿಬಿಡಿ, ಕೋಲಾಹಲದಲ್ಲಿಯೇ ಬಾಳಲು ಬಯಸಿದ್ದಾನೆ. ಅವನಿಗೆ ಲೋಕದ ವೈಭವಗಳ ಬಗೆಗಿನ ಬಯಕೆಯೂ ಇಲ್ಲ. ಅಥವಾ ಬರಲಿರುವ ಸ್ವರ್ಗದ ಬಗೆಗಿನ ನಿಟ್ಟುಸಿರೂ ಇಲ್ಲ. ಆದರೆ ಆತ ಹಿಂದಿನ ದುಃಖಗಳನ್ನು, ಮುಂದಿನ ಭಯವನ್ನು ಈ ದಿನ ನಿವಾರಿಸುವ ಒಂದು ಗುಟುಕಿನಲ್ಲಿ ತೃಪ್ತಿಪಡುತ್ತಾನೆ. ಕೊಹಿಲೇತ್ ಮತ್ತು ಉಮರ್ ಬುದ್ಧನಂತಲ್ಲ. ಅವರು ಸ್ಥಿರವಾದ ನೆಲಗಟ್ಟಿನ ಮೇಲೆ ನಿಂತು ಮಾನವದೃಷ್ಟಿ ಹರಿಯುವವರೆಗೆ ನೋಡಿದರು. ಅವರಲ್ಲಿ ಯಾವ ಸಂದಿಗ್ಧತೆಯೂ ಇಲ್ಲ. ಕೊಹಿಲೇತ್‌ನು ಧರ್ಮಿಗಾಗಲೀ, ಅಧರ್ಮಿಗಾಗಲೀ ಒಂದು ಘಟನೆ ಇರುತ್ತದೆ ಎಂದು ವ್ಯಂಗ್ಯವಾಗಿ ಹೇಳಿದ್ದಾನೆ. ಉಮರನು 'ಮಣ್ಣಿನಿಂದ ಮೂಡಿ ಮಣ್ಣಿಗೆ ಇಳಿ. ಮನುಷ್ಯನ ದೇಹವೂ ಮಣ್ಣು. ಅದು ಪುನಃ ಮಣ್ಣಿನಲ್ಲಿ ಬೆರತು, ಕುಂಬಾರನ ಗಡಿಗೆ-ಮಡಿಕೆಗಳಿಗೆ ಉಪಯೋಗವಾಗುತ್ತದೆ' ಎಂದು ತನಗೇ ವಿಶಿಷ್ಟವಾದ ರೀತಿಯಲ್ಲಿ ಮನವರಿಕೆ ಮಾಡಿದ್ದಾನೆ. ಆದರೆ ಬುದ್ಧ, ಕೊಹಿಲೇತ್ ಮತ್ತು ಉಮರ್ ಅವರು ಪೃಥ್ವಿಯಲ್ಲಿ ಹೊಸದೇನೂ ಇಲ್ಲ. ವಿಶ್ವವು ಮೊದಲೇ ನಿಯಮಿಸಿದ ಗ್ರಹದ ಸುತ್ತ ಚಲಿಸುತ್ತಿದೆ ಎಂದು ಸಮಾಕರಿಸುವಲ್ಲಿ ಏಕಾಭಿಪ್ರಾಯವನ್ನು ಹೊಂದಿದ್ದಾರೆ. ಕುರುಡು ಕರ್ಮ, ಅದೃಷ್ಟ ಚಕ್ರ, ನಿತ್ಯ 'ಸಾಕಿ', ಎಂದು ಮುಂತಾಗಿ ಅನೇಕ ವಿಧದಲ್ಲಿ ಸಂಕೇತರೂಪವಾಗಿ ಕುರುಡಾದ ಯಾಂತ್ರಿಕ ಶಕ್ತಿಯಿಂದ ಜೀವನ ಮೂಡಿ ಬಂದಿದೆ ಎಂದು ಅವರ ಅಭಿಪ್ರಾಯ.

ವಿಶ್ವದ ಕಾರ್ಯಗತಿಯು ಗೋಳವು 'ಹೌದು', 'ಇಲ್ಲ' ಎಂಬ ಪ್ರಶ್ನೆಗಳನ್ನು ಎತ್ತಲಾರದು. ಆದರೆ ಇಂದ್ರಿಯಗ್ರಹಣಶಕ್ತಿಯುಳ್ಳ ಜೀವಿಗಳಲ್ಲಿ ತಿಳಿದುಕೊಳ್ಳಬೇಕೆಂಬ ಅಪೇಕ್ಷೆ ಜೀವನದ ಒಂದು ಅಂಗವಾಗಿದೆ. ಇದು ದೇವರು ಮಾನವನಿಗೆ ಅದರಲ್ಲೇ ಆಚರಣೆ ಮಾಡಲು ಕೊಟ್ಟ ಉಗ್ರವಾದ ಕ್ಲೇಶ ಎನ್ನುತ್ತಾನೆ ಕೊಹಿಲೇತ್. ಉಮರನು ವೈದ್ಯರನ್ನು, ಸನ್ಯಾಸಿಗಳನ್ನು ಭೇಟಿ ಮಾಡಿದಾಗಲೂ 'ನಾನು ನೀರಿನಂತೆ ಬಂದೆ, ಗಾಳಿಯಂತೆ ಹೋಗುತ್ತೇನೆ' ಎನ್ನುವುದಕ್ಕಿಂತ ಹೆಚ್ಚಿನದನ್ನು ತಿಳಿಯಲಾಗಲಿಲ್ಲ. ಬುದ್ಧನು ಸ್ಥಿರವಾದ ನೆಲಗಟ್ಟನ್ನು ನಿರಾಕರಿಸಿ, ಶುದ್ಧಾಂತಃಕರಣದಿಂದ ಕೇವಲ ಪಾರಮಾರ್ಥಿಕ ಸ್ಥಿತಿಯನ್ನು ಪಡೆದರೆ ಕೊಹಿಲೇತ್ ಮತ್ತು ಉಮರರು ಪ್ರಾಪಂಚಿಕ ಪ್ರಜ್ಞೆಯಿಂದ ಅತೀತವಾಗಿರಲು ಅಸಮರ್ಥರಾದ್ದರಿಂದ ಅವರು ಯಾವ ವಿಷಯ ಸ್ಥಿತಿಗೆ ಬಂದರೆಂದರೆ ಜೀವನವನ್ನು ಅಸಡ್ಡೆಯಿಂದ ನೋಡಿದರು ಮತ್ತು ಮದ್ಯಕೆ ಶರಣಾದರು.

ಅನೇಕ ಜನ ಕವಿಗಳು, ತತ್ತ್ವಜ್ಞಾನಿಗಳು ತಮ್ಮ ಕಾವ್ಯ ಇಲ್ಲವೇ ತತ್ತ್ವಶಾಸ್ತ್ರದಲ್ಲಿ ನಿರಾಶಾವಾದಕ್ಕೆ ಸ್ವತಂತ್ರವಾದ ಅಭಿವ್ಯಕ್ತಿ ನೀಡಿದ್ದಾರೆ. ಷೊಪೆನ್ ಹಾವರ್‌ನು ನಿರಾಶಾವಾದಿಗಳ ರಾಜಕುಮಾರನೆಂದು ಕರೆಯಲ್ಪಟ್ಟಿದ್ದಾನೆ. ಅವನು ಈ ಪ್ರಪಂಚವು ಅತ್ಯಂತ ನಿಕೃಷ್ಟವೆಂಬುದನ್ನು ಸಿದ್ಧಪಡಿಸಲು ತರ್ಕ ಪ್ರಮಾಣವನ್ನು ಹುಡುಕಲು ಯತ್ನಿಸಿದನು. ಬೈರನ್, ಜೇಮ್ಸ್, ಥಾಮ್ಸನ್ ಮತ್ತು ಮೆಥ್ಯೂ ಆರ್ನಾಲ್ಡ್ ಮೊದಲಾದ ಕವಿಗಳು ಮಾನವ ಜೀವನದ ನಶ್ವರತೆಯನ್ನು ಕುರಿತು ಪ್ರಲಾಪಿಸಿದ್ದಾರೆ ಮತ್ತು ಪ್ರಪಂಚ ಜೀವಿಸುವುದಕ್ಕೆ ಅರ್ಹವಲ್ಲ ಎಂದು ತೀಕ್ಷ್ಣವಾಗಿ ದೂರಿದ್ದಾರೆ:—

"ಎಣಿಸಿ ನೋಡು ನಿನ್ನ ಜೀವನದ ಸಂತಸದ ಗಳಿಗೆಗಳ, ಎಣಿಸಿ ನೋಡು ಬೇಗುದಿಯಿಲ್ಲದ ನಿನ್ನ ದಿನಗಳ. ನೀನು ಏನೇ ಆಗಿರು. ನೀನು ಇರುವುದಕ್ಕಿಂತ ಇರದಿರುವುದೇ ಮೇಲು"

ಎಂದು ಬೈರನ್ ಹೇಳಿದರೆ,

"ನೆಮ್ಮದಿಯನರಸದಿರು ನೆಮ್ಮದಿಯೇ ಇಲ್ಲದೆಡೆ. ಅವೆಲ್ಲ ನುಡಿಯದಿರು. ಬರಿಮಾತು ಹೊಲಸುವಸ್ತುಗಳ ಶುದ್ಧಿಗೊಳಿಪುದೆ? ನಮ್ಮ ಜೀವನವೊಂದು ಮೋಸ, ನಮ್ಮ ಸಾವು ಕರಾಳ ಕೊಳ್ಳ. ನಿರಾಶನಾಗಿ ತೆಪ್ಪಗೆ ಬಾಯಿ ಮುಚ್ಚಿಕೊಂಡಿರು"

ಎಂದು ಥಾಮ್ಸನ್ ಹೇಳುತ್ತಾನೆ. ಆರ್ನಾಲ್ಡ್ ಹೀಗೆನ್ನುತ್ತಾನೆ:—

"ಎರಡು ವಿಶ್ವಗಳ ನಡುವೆ ಅಲೆದಾಟ-ಅಳಿದುದು ಒಂದು, ಹುಟ್ಟಲಾರದೆ ಇರುವ ಇನ್ನೊಂದು. ನನ್ನ ಬುದ್ಧಿ ಎಲ್ಲೂ ವಿಶ್ರಾಂತಿ ಪಡೆವಂತಿಲ್ಲ. ಇಂತು ನಾನು ಏಕಾಕಿಯಾಗಿ ಧರೆಯ ಮೇಲೆ ಕಾಯುತಿರುವೆ".

ನಿರಾಶಾವಾದಿ ಸಾಹಿತ್ಯವು ಮಾಡಿದ ಕುತೂಹಲಭರಿತ ಮೊರೆಯು ತನ್ನದೇ ಆದ ಮನಶ್ಶಾಸ್ತ್ರಿಕ ಸಮಸ್ಯೆಯನ್ನು ಹೊಂದಿದೆ. ನಾವು ಈ ಮನಶ್ಶಾಂತಿ ರಹಿತವಾದ ವಿಷಯಗಳನ್ನು ಓದಲು ಬಯಸುತ್ತೇವೆ. ಏಕೆಂದರೆ ಅವು ನಮ್ಮಲ್ಲಿರುವ ಸುಲಭವಾಗಿ ಪ್ರಭಾವಕ್ಕೊಳ್ಳಗಾಗುವ ಹೃದಯದ ತಂತಿಯನ್ನು ಮಿಡಿಯುತ್ತವೆ. ಪ್ರಪಂಚದಲ್ಲಿ ವಸ್ತುವನ್ನು ಆಕರ್ಷಕವಾಗವಂತೆ ಮಾಡಲು ಸಾಕಷ್ಟು ತೀವ್ರ ವ್ಯಥೆಗಳು ಇದ್ದು, ಅದನ್ನು ಸ್ಫುಟಗೊಳಿಸಲು ಅಗತ್ಯವಾದಷ್ಟು ಇಲ್ಲದೆ ಇರುವುದೇ ಬಹುಶಃ ಇದಕ್ಕೆ ಕಾರಣವಿರಬಹುದು. ಪ್ರತಿ ಜೀವನವು ತನ್ನ ಕತ್ತಲೆಯ ನೆರಳುಗಳನ್ನು ಪಡೆದಿರುತ್ತದೆ. ಸಾಮಾನ್ಯವಾಗಿ ನಾವು ಅವುಗಳ ಬಗ್ಗೆ ಮೌನದಿಂದಿರಬೇಕು. ಈ ಬಗ್ಗೆ ಹೇಳುವ ಯಾವನೇ ಒಬ್ಬ ಕವಿ, ತತ್ತ್ವಜ್ಞಾನಿ ಅಥವಾ ಕಾದಂಬರಿಕಾರನನ್ನು ನಾವು ಕಂಡಾಗ, ನಮಗೆ ಒಬ್ಬ ಸಹಾನುಭೂತಿಯುಳ್ಳ ಸ್ನೇಹಿತ ಸಿಕ್ಕನೆಂದು ಭಾವಿಸುತ್ತೇವೆ. ನಮಗೆ ನಗು ಬರಲಿ, ಬಾರದಿರಲಿ, ನಾವು ಬಹಳಷ್ಟು ಸಮಯ ನಗುತ್ತೇವೆ. ಸಾಂದರ್ಭಿಕವಾಗಿ ನಾವು ಥಾಮಸ್ ಹಾರ್ಡಿಯ ಕಡೆ ಸರಿಯುತ್ತೇವೆ. ಆತನು ಒಂದು ಬಗೆಯ ವಿಶ್ರಾಂತಿ ಮತ್ತು ಶುದ್ಧೀಕರಣಕ್ಕೆ ಪ್ರಪಂಚದಲ್ಲಿ ಎಲ್ಲವೂ ಒಳ್ಳೆಯದು. ಸತ್ಯವಾದದ್ದು ಮತ್ತು ಋಜುವಾದದ್ದು ಎಂದು ನಟಿಸುವುದೂ ಇಲ್ಲ. ಇಂದಿನ ಕಾದಂಬರಿಗಳಲ್ಲಿರುವ ವಾಸ್ತವವಾದವು ನಿಜವಾದ ವಸ್ತುಸತ್ತಾವಾದವೆ? ಅಥವಾ ಹಿಂದೆ ಪ್ರಮುಖವಾಗಿ ಉಲ್ಲೇಖಿಸಲ್ಪಡದ ಜೀವನದ ಕೆಡುಕುಗಳು ಈಗ ನೈಜವಾಗಿ, ಸ್ಫುಟವಾಗಿ ವಿವರಿಸಲ್ಪಟ್ಟವೆಯೇ? ಅದೇ ಸಮಯದಲ್ಲಿ ಒಳ್ಳೆಯ ವಿಚಾರಗಳು ಆಸಕ್ತಿ ಹುಟ್ಟಿಸಲಾರದಷ್ಟು ಸಾಮಾನ್ಯಾನುಭವವಾದ್ದರಿಂದ ಬಿಟ್ಟಿದ್ದಾರೆ ಎಂದು ಭಾವಿಸಬೇಕೆ?

ಜೀವನವು ಮೂಲತಃ ಕೆಟ್ಟದ್ದು, ಈ ಪ್ರಪಂಚದಲ್ಲಿ ನಲಿವಿಗಿಂತ ಹೆಚ್ಚು ನೋವೇ, ಒಳ್ಳಿತಿಗಿಂತ ಕೆಡುಕೆ ಜಾಸ್ತಿ ಇದೆ ಎಂಬ ಸಿದ್ಧಾಂತವೇ ನಿರಾಶಾವಾದ. ಮಾನವನ ತಲೆತಿನ್ನುವ ಅತಿದೊಡ್ಡ ಸಮಸ್ಯೆಗಳಲ್ಲಿ ಕೆಡುಕಿನ ಅಸ್ತಿತ್ವವು ನಿಸ್ಸಂದೇಹವಾಗಿಯೂ ಒಂದು. ಕಷ್ಟವೇನು ಎಂಬುದನ್ನು ಹೀಗೆ ವ್ಯಕ್ತಪಡಿಸಲಾಗಿದೆ:— ದೇವರು ಜಗತ್ತನ್ನು ಸೃಷ್ಟಿಸಿದರೆ ಅಥವಾ ಅದನ್ನು ಪೋಷಿಸುತ್ತಿದ್ದರೆ, ನಿರ್ವಹಿಸುತ್ತಿದ್ದರೆ ಅಥವಾ ಉಸ್ತುವಾರಿ ನೋಡುತ್ತಿದ್ದರೆ, ಅಥವಾ ದೇವರು ಅತ್ಯಂತ ಕರುಣಾಮುಖಿಯಾಗಿದ್ದರೆ, ಎಲ್ಲೆಲ್ಲಿಯೂ ಪ್ರತ್ಯಕ್ಷವಾಗಿ ಕಾಣುವ ನೋವು, ಕೇಡು ಅಥವಾ ಪಾಪ, ದುಃಖ ಅಥವಾ ಕಷ್ಟ, ಭಗ್ನವಾದ ಯೋಜನೆಗಳ ಹಾಗೂ ನಿರಾಶೆಗೊಂಡ ನಂಬಿಕೆಗಳನ್ನು ನಾವು ಹೇಗೆ ಸಮರ್ಥಿಸುವುದು? ಅಂಥವನ್ನು ನಿವಾರಿಸದ ದೇವರು ದೇವರಲ್ಲ, ಅದನ್ನು ಮಾಡಲು ಸಮರ್ಥನಿದ್ದು ಮಾಡುತ್ತಾ ಇಲ್ಲವಾದರೆ ಅವನು ಒಳ್ಳೆಯವನೂ ಅಲ್ಲ. ಈ ಇದೀವಾದವು "ಸ್ವರ್ಗದಲ್ಲಿರುವ ದೇವರು ವಿಶ್ವಸೃಷ್ಟಿಯ ಬಗ್ಗೆ ಚಿಂತಿಸುತ್ತಾ, ಯಾವ ಬಗೆಯ ಪ್ರಪಂಚವನ್ನು ಸೃಷ್ಟಿಸಲೆಂದು ಪಾಪ ಮತ್ತು ಕೇಡು, ದುಃಖ ಮತ್ತು ಕಷ್ಟಗಳನ್ನು ಮುಂಗಂಡಿದ್ದರೂ ಪೀಡಿಸಬೇಕೆಂಬ ಇಚ್ಛೆಯಿಂದ ಸೃಷ್ಟಿಯ ಆಜ್ಞೆಯನ್ನು ನೀಡು

ಕ್ವಾನ್" ಎಂಬ ಮನುಷ್ಯತ್ವಾರೋಪಣದೃಷ್ಟಿಯ ಮೇಲೆ ನಿಂತಿದೆ. ಆದರೆ ಜಗತ್ತು ಆ ರೀತಿಯಲ್ಲಿ ಅಸ್ತಿತ್ವಕ್ಕೆ ಬಂದಿಲ್ಲ. ಅದು ಮೊದಲೇ ತೀರ್ಮಾನಗೊಂಡ ಒಂದು ಯೋಜನೆ ಎಂದು ಯಾವಾಗ ನಾವು ತಿಳಿಯುತ್ತೇವೆಯೋ, ಯಾವಾಗ ನಾವು ಅದನ್ನು ಒಂದು ಬೆಳವಣಿಗೆ, ಒಂದು ವಿಕಾಸ, ಮೌಲ್ಯಗಳ ಗ್ರಹಿಕೆ ಎಂದು ಯೋಚಿಸಲು ಆರಂಭಿಸುತ್ತೇವೆಯೋ ಆಗಲೇ ನಮ್ಮ ತೊಂದರೆಗಳೆಲ್ಲವೂ ಕಾಣೆಯಾಗಲಾರಂಭಿಸುತ್ತವೆ. ದೇವರು ಅಧೀಶ್ವರ, ಬೇಕು-ಬೇಡಗಳನ್ನುಳ್ಳ ಸಗುಣಮೂರ್ತಿಯೆಂದು ತಿಳಿಯುವುದನ್ನು ಬಿಟ್ಟು ಅದು ಋಜುತೆಯನ್ನು ಉಂಟುಮಾಡುವ, ಬಹುಶಃ ಒಳ್ಳಿತಿಗೆ ಉಂಟಾಗುವ ಪ್ರತಿ ತೊಡಕುಗಳನ್ನು ಪರಿಹರಿಸಲು ನಮ್ಮೊಡನೆ ಕೆಲಸಮಾಡುವ ಶಕ್ತಿ ಎಂದು ತಿಳಿಯಲಾರಂಭಿಸಿದಾಗ ಎಲ್ಲವೂ ಬೇರೆ ಧ್ವನಿಯನ್ನು ಹೊಮ್ಮಿಸುತ್ತವೆ. ಆದ್ದರಿಂದಲೇ ಬುದ್ಧನು ದೇವರು ಎಂಬ ವ್ಯಕ್ತಿಯನ್ನು ಆಧಾರವಾಗಿಟ್ಟುಕೊಳ್ಳದೆ ನೈತಿಕ ನಿಯಮಕ್ಕೆ, ಜ್ಞೇಯಕ್ಕೆ ಮಾತ್ರ ಸಂಬಂಧಿಸಿದ ಕ್ರಮಬದ್ಧತೆಯನ್ನು ನೀಡಿದನು. ಆದರೆ ಆತನು ಇಂದ್ರಿಯಗೋಚರವಾದ ವಿಶ್ವವು ದುಃಖಪೂರಿತವಾದದ್ದು ಎಂಬ ಪೂರ್ವಗ್ರಹದಿಂದಲೇ ಈ ಸಿದ್ಧಾಂತಕ್ಕೆ ಬಂದನು.

ಬದುಕಬೇಕೆಂಬ ಸಂಕಲ್ಪವೇ ಎಲ್ಲ ಆಶೆಗಳ ಮೂಲ ಎಂದು ಬುದ್ಧನು ಷೊಪನ್ ಹಾವರ್‌ನಂತೆಯೇ ನಂಬುತ್ತಾನೆ. 'ಬದುಕಬೇಕೆಂಬ ಇಚ್ಛೆಯು ಸದಾ ನಮ್ಮನ್ನು ತೃಪ್ತಿ ಅರಸುತ್ತಾ ಕುರುಡಾಗಿ ಸಾಗಲು ಪ್ರಚೋದಿಸುತ್ತದೆ. ಆದರೆ ಆ ತೃಪ್ತಿಯು ಎಂದಿಗೂ ದೊರಕದು. ಒಂದು ಆಸೆ ತಣಿದರೂ ಮತ್ತೊಂದು ಹೊಸ ಆಸೆ ಅದನ್ನು ಹಿಂಬಾಲಿಸಿ ಬರುತ್ತದೆ. ಜೀವನವು ಒಂದು ನಿತ್ಯ ಹೋರಾಟ; ದೊರಕದರ ಬಗೆಗಿನ ಒಂದು ಆಸೆ. ಆದ್ದರಿಂದ ಜೀವನವು ಸಂಕಷ್ಟ ಬೇಗುದಿಗಳಿಂದ ತುಂಬಿದ ಹಂಬಲಿಕೆ.' ಈ ತರ್ಕಸರಣಿಯಲ್ಲಿರುವ ದೋಷಗಳನ್ನು ಪತ್ತೆ ಹಚ್ಚುವುದು ಕಷ್ಟವೇನಲ್ಲ. ಜೀವನದಲ್ಲಿ ಹೋರಾಟವಿದೆ. ಆದರೆ ಜೀವನವೆಂದರೆ ಅಷ್ಟೇ ಅಲ್ಲ. ಹೆಣಗಾಟವೆಲ್ಲ ದುಃಖಮಯವೆಂಬುದು ಸರಿಯಲ್ಲ. ಸಾಮಾನ್ಯವಾಗಿ ಅದು ಸಂಪೂರ್ಣ ವಿರುದ್ಧವಾಗಿಯೇ ಇರಬಹುದು. ಹೋರಾಟದಲ್ಲಿ ಗೆಲುವಾದರೆ ಹರ್ಷ. ಗೆಲುವಾಗದಿದ್ದಾಗ ಕೂಡ ಅದೂ ಸಂತೋಷವೇ. ಪ್ರಪಂಚದಲ್ಲಿ ಜೀವನದ ನಿರಾಶಾವಾದದ ದೃಷ್ಟಿಯ ವಿವರಣೆಯನ್ನು ಬಿಟ್ಟ ತತ್ತ್ವಶಾಸ್ತ್ರ, ಮತ ಅಥವಾ ಆಧ್ಯಾತ್ಮಿಕ ಶಾಸ್ತ್ರಗಳು ಇಲ್ಲ. ಆದರೆ ಬೌದ್ಧಮತವು ವಿಶ್ವವನ್ನೆಲ್ಲಾ ನಿರಾಶಾವಾದಿಯಾದ ಸೃಷ್ಟಿಗೇ ಮಿತಿಗೊಳಿಸಿದೆ. ನಿರಾಶಾವಾದದ ಪದ್ಧತಿಯಲ್ಲೂ ಕೂಡ ಬದುಕಬೇಕೆಂಬ ಇಚ್ಛೆ ಸ್ವಾರ್ಥತ್ಯಾಗಕ್ಕೆ ಪ್ರಚೋದಿಸುವಷ್ಟರ ಮಟ್ಟಿಗಾದರೂ ಜೀವನವು ಪಾರಮಾರ್ಥಿಕ ಲಾಭ ತರುವಂತಾಗುತ್ತದೆ. ಇಚ್ಛೆಯನ್ನೇ ಅಂತಿಮ ತತ್ತ್ವವೆಂದು ಪ್ರತಿಪಾದಿಸುವ ಷೊಫೆನ್ ಹಾವೆರ್ ಸಾಕಷ್ಟು ಕುತೂಹಲ ಹುಟ್ಟಿಸುವಂತೆ ಇಚ್ಛಾರಾಹಿತ್ಯವನ್ನೇ ಪರಮಾನಂದವೆಂದು ಸ್ವಾಗತಿಸಿದ್ದಾನೆ. ಇದು ಪ್ರಶ್ನೆಯನ್ನು ಉಜ್ವಲಗೊಳಿಸುತ್ತದೆ. ಷೊಪೆನ್ ಹಾವರ್ ಹೇಳುವಂತೆ ವ್ಯಕ್ತಿಯನ್ನು, ಹಾರ್ಟ್‌ಮರ್ನ್ ಹೇಳುವಂತೆ ಜನಾಂಗವನ್ನು ವೈರಾಗ್ಯಕ್ಕೆ ಪ್ರೇರಿಸುತ್ತದೆ. ಅದರಂತೆಯೇ ಶ್ರಮಿಸಬೇಕಾದ ನಿರ್ವಾಣವು ಸರ್ವನಾಶಕ್ಕಾಗಿ ಅಲ್ಲ, ಕೇವಲ ಪಾರಮಾರ್ಥಿಕ ವ್ಯವಸ್ಥೆಗಾಗಿ. ಇದು ಕೇವಲ ನಿಷ್ಕ್ರಿಯೆಯಿಂದ ಸಾಧ್ಯವಿಲ್ಲ. ನಾವು ನಿರತರಾಗಿರುವ ಜಗದ ರಣರಂಗದಲ್ಲಿ ಅವಿಶ್ರಾಂತ ಚಟುವಟಿಕೆಯಿಂದ ಮಾತ್ರ ಸಾಧ್ಯ.

ಶಾಂತಿಗೆ ಆಸೆಯನ್ನು ತ್ಯಜಿಸುವುದು ಅಗತ್ಯ ಎಂದು ಬುದ್ಧ ಹೇಳಿರುವುದು ಸಮರ್ಪಕ. ಆದರೆ ಆಸೆಯನ್ನು ಬಿಡುವುದೆಂದರೆ ಜೀವನದ ಚೆಲುವೆಯನ್ನೇ ಮುಚ್ಚಿದಂತೆ. ತ್ಯಾಗಬುದ್ಧಿಯೂ ಕೂಡ ಸಂಕಲ್ಪದ ಒಂದು ರೂಪ. ಬಸವನ ಈ ಮಾತಿನಲ್ಲಿ ದೃಢತೆಯ ಛಾಯೆ ಕಾಣುತ್ತದೆ. ಆದ್ದರಿಂದ ಅವನು ಆಶಾರಹಿತ ಆನಂದದ ನಿರೀಕ್ಷೆಯು ಜೀವನದ ಗುರಿಯೆಂಬುದನ್ನು ಎಂದೂ ಅನುಮೋದಿಸಲಿಲ್ಲ. ಚಲನೆ, ಜೀವನ ಮತ್ತು ಆನಂದ – ಇವು ಮೂರು ಅವನ ಆಕರ್ಷಕ ವಸ್ತುವಾಗಿದ್ದವು. ಅವನು ಕ್ರಿಯೆಯ ಪರನು ಸತ್ವವನ್ನು ಬೋಧಿಸಿದನು. ಅದು ಜಡವಾದ ನೋವುಕೊಡುವ ಕ್ರಿಯೆಯಲ್ಲ. ಆಧ್ಯಾತ್ಮಿಕ ಪ್ರೇರಣೆಯಿಂದ ಸ್ಫೂರ್ತಿಹೊಂದಿದ ಕಾರ್ಯ (ಕಾಯಕ).

ಬಸವನಿಗೆ ವಿಶ್ವದ ಕಾರ್ಯಗತಿಯು ಒಂದು ಬೆಳವಣಿಗೆ, ಒಂದು ವಿಕಾಸ, ಮೌಲ್ಯಗಳ ಸಾಧನೆ. ಮನುಷ್ಯ ವಿವೇಚನಾಪೂರ್ಣ ಆಲೋಚನಾ ಶಕ್ತಿಯನ್ನು ಪಡೆದಾಗ "ಕೆಡುಕನ್ನು ದೇವರಾಗಲಿ, ಮನುಷ್ಯನಾಗಲಿ ಸೃಷ್ಟಿಸಲಿಲ್ಲ. ಆದರೆ ಒಳ್ಳೆಯದನ್ನು ಮಾಡಲು ಉತ್ತಮ ಮಾರ್ಗಗಳನ್ನು ನೀಡಿದ್ದಾನೆ. ಇದರಿಂದ ಹಳೆಯದಾದ ಮಾರ್ಗಗಳು ಕೆಟ್ಟವೆಂದು ತೋರಬಹುದು. ಸಾಮಾಜಿಕ ಸಂಸ್ಥೆ ಮತ್ತು ಪರಸ್ಪರ ಸಹಕಾರ ಉದಾಹರಣೆಗೆ ಉತ್ತಮ ಮಾರ್ಗವನ್ನು ಹೊಸ ಮೌಲ್ಯವನ್ನು ಪ್ರತಿನಿಧಿಸುತ್ತದೆ. ಈ ಕಾರಣದಿಂದ ಸ್ವಾರ್ಥಸಾಧನೆ, ಸಂಕುಚಿತವಾದ ವ್ಯಕ್ತಿವಾದಗಳು ಕೆಡುಕುಗಳಾಗುತ್ತವೆ. ವಿಕಾಸ ಹೊಂದುತ್ತಿರುವ ನಮ್ಮ ಸಾಮಾಜಿಕ ಮತ್ತು ಆರ್ಥಿಕ ಆಸಕ್ತಿಗಳಿಂದ ಅಂತರಾಷ್ಟ್ರೀಯತೆಯು ಹೊಸ ಮೌಲ್ಯವನ್ನು ತೋರಿಸುತ್ತದೆ. ಇದರಿಂದ ಸ್ವಾರ್ಥ ಹಾಗೂ ಕ್ಷುದ್ರ ರಾಷ್ಟ್ರೀಯತೆ ಕೆಡುಕು ಎನ್ನಿಸುತ್ತದೆ. ಸಹಾನುಭೂತಿ ಮತ್ತು ಪ್ರೀತಿಗಳು, ಋಜುತೆ ಮತ್ತು ಸದಸದ್ವಿವೇಚನೆಗಳಂತೆಯೇ ಉನ್ನತ ಮಟ್ಟದ ಮೌಲ್ಯಗಳು. ನಾವು ಮುಂದುವರಿದಂತೆಲ್ಲ ಹೊಸ ಆದರ್ಶ ಧ್ಯೇಯಗಳು ಪ್ರಕಾಶಗೊಂಡಂತೆಲ್ಲ, ನಾವು ಸೂಕ್ಷ್ಮಗ್ರಾಹಿಗಳೂ, ವಿಮರ್ಶನ ಪ್ರವೃತ್ತಿಯುವರೂ ಮತ್ತು ಜಾಗ್ರತರೂ ಆಗುತ್ತೇವೆ. ಹಾಗೇದ ಮಾತ್ರಕ್ಕೆ ಒಳ್ಳಿತು ಮತ್ತು ಕೆಟ್ಟದು ಸಾಪೇಕ್ಷ ಪದಗಳಲ್ಲ. ಅಂದರೆ ಕೆಲವು ಆದರ್ಶ ಧ್ಯೇಯಗಳನ್ನು ಸಾಧಿಸಬೇಕು. ಅವನ್ನು ಸಾಧಿಸಲು ಇರುವ ಅಡಚಣೆಗಳನ್ನು ಎದುರಿಸಬೇಕಾಗುತ್ತದೆ. ಆ ಎಡರುಗಳು ಸಾಭಾವಿಕವಾಗಿದ್ದು, ಒಳ್ಳೆಯದಕ್ಕೆ ಸ್ವಾಭಾವಿಕವಾದ ಪ್ರತಿಭಟನೆಯನ್ನು ಒಡ್ಡುತ್ತವೆ. ಸಾಧಕ ಅವುಗಳನ್ನು ಗೆಲ್ಲಬೇಕು. ಬಸವ ಹೇಳಿದ್ದು ಇದೇ. ಇದನ್ನೇ ಒಂದು ಅರ್ಥದಲ್ಲಿ ಮನುಷ್ಯಪ್ರಯತ್ನವಾದ (Meliorism) ಎನ್ನಬಹುದು.

ಕೆಡುಕಿನ ಬಗೆಗಿನ ಇಂದಿನ ಪ್ರವೃತ್ತಿ ಮನುಷ್ಯಪ್ರಯತ್ನವಾದದಲ್ಲಿ ಒಂದು. ಇಂದಿನ ಅನೇಕ ಬರಹಗಾರರು ಜಗತ್ತಿನಲ್ಲಿ ಕೆಡುಕು ಏಕೆ ಇರಬೇಕು ಎಂದು ಪ್ರಶ್ನಿಸುತ್ತಿಲ್ಲ, ಅದು ಏಕೆ ಇರಬಾರದು ಎಂದು ಕೊಳ್ಳುತ್ತಾರೆ. ಆಧುನಿಕ ದೃಷ್ಟಿಕೋನ ಹಳೆಯದಕ್ಕಿಂತಲೂ ಭಿನ್ನವಾಗಿದೆ. ಪುರಾತನರು ಪ್ರಕೃತಿಯ ಬಗೆಗಿನ ವಿಚಾರಶೀಲ ವರ್ತನೆಯಿಂದ ಕೆಡುಕನ್ನು ಸುಮ್ಮನೆ ನೋಡಿದರು, ನೋಡಿ ಕೌತುಕಪಟ್ಟರು ಮತ್ತು ಅದನ್ನು ವಿವರಿಸಲು ಪ್ರಯತ್ನಿಸಿದರು. ಆಧುನಿಕರು, ತಮ್ಮ ಪ್ರಯೋಜನೈಕ ದೃಷ್ಟಿಯಿಂದ ತಮ್ಮ ಸುತ್ತಲೂ ಕೆಡುಕುಗಳು ಹೇರಳವಾಗಿವೆ. ಅವುಗಳ ವಿವರಣೆ ನೀಡುವುದು ನಮ್ಮ ಕೆಲಸವಲ್ಲ, ಅವನ್ನು ಗೆಲ್ಲಬೇಕಾದದ್ದು ನಮ್ಮ ಕೆಲಸವೆಂದು ಅಂಗೀಕರಿಸುತ್ತಾರೆ. ಆದ್ದರಿಂದ ಆಧುನಿಕ ಆಲೋಚನಾ ಶಕ್ತಿಯು ಕೆಡುಕನ್ನು ದೇವರು ಕೊಟ್ಟ ವಾಸ್ತವಾಂಶವೆಂದು ಭಾವಿಸದೆ, ಮಾರ್ಪಡಿಸಬಹುದಾದ್ದೆಂದು ತಿಳಿಯುತ್ತದೆ. ಅದು ಪ್ರಪಂಚವನ್ನು ನಿರಾಶಾವಾದ ಅಥವಾ ಆಶಾವಾದ ದೃಷ್ಟಿಯಿಂದ ನೋಡದೆ ಜಗತ್ತನ್ನು ಉತ್ತಮಗೊಳಿಸಲು ತೊಡಗುತ್ತದೆ. ಆಧುನಿಕ ಬುದ್ಧಿಗೆ ನಿಜವಾಗಿ ಮಹತ್ವಪೂರ್ಣವಾದದ್ದೆಂದರೆ ಪ್ರಪಂಚದ ಒಳ್ಳಿತು ಅಥವಾ ಕೆಡುಕಲ್ಲ. ಆದರೆ ಅದರ ಪ್ರಗತಿ. ಇದಕ್ಕಿಂತ ಮಹತ್ವದ್ದೆಂದರೆ ನಾವು ಗ್ರಹಿಸುವ ಉನ್ನತವಾದ ಒಳಿತಿನ ಬೆಳಕಿನಲ್ಲಿ ಇಂದಿನ ಒಳಿತು ದೋಷಯುಕ್ತವಾಗಿ ಕಾಣುವಂತೆ ಮಾಡುವ ಮಾನವನ ಬುದ್ಧಿಯ ಆದರ್ಶರೂಪಗ್ರಹಣ. ಈಗ ಸಾಧಿಸಿರುವ ಸ್ಥಿತಿಗಿಂತ ಮುಂದಿನ ಸಾಧನೆ ಮಹತ್ತದ್ದೆಂಬುದು, ಈಗಿನ ಒಳಿತಿಗಿಂತ ಮುಂದಿನ ಒಳಿತು ದೊಡ್ಡದೆಂಬ ಭಾವನೆ. ಹೀಗೆ ಮನುಷ್ಯ ಪ್ರಯತ್ನವಾದವು ಆಧುನಿಕ ಯುಗದಲ್ಲಿ ಪ್ರಮುಖ ಸ್ಥಾನವನ್ನು ಪಡೆದಿದೆ. ಜಗತ್ತು ತೀರ ಕೆಟ್ಟದ್ದೂ ಅಲ್ಲ. ಪೂರ್ಣ

ಒಳ್ಳೆಯದೂ ಅಲ್ಲ. ಆದರೆ ಅದು ಉತ್ತಮಗೊಳ್ಳುತ್ತಾ ಇದೆ. ನಮ್ಮೆಲ್ಲರ ಮುಂದೆ ಇರುವ ಜವಾಬ್ದಾರಿಯೆಂದರೆ ಅದನ್ನು ಮತ್ತೂ ಉತ್ತಮಗೊಳಿಸಲು ನಮ್ಮ ಅಳಿಲುಸೇವೆ ಸಲ್ಲಿಸುವುದು. ಪ್ಲೇಟೋವಿನ 'ಸಂವಾದಗಳಲ್ಲಿ' ಸೊಕ್ರಟೀಸ್ ಹೀಗಂದಿದ್ದಾನೆ:— "ಕೆಡುಕು ಭೂಮಿಯಿಂದ ಕಣ್ಮರೆಯಾಗದು. ಅದು ಹೇಗೆ ಸಾಧ್ಯ? ಕೆಡುಕು ಅಪರಿಪೂರ್ಣತೆಗೆ ಬೇರೊಂದು ಹೆಸರು. ಅದರ ದೋಷದಿಂದಲೇ ಅಲ್ಲವೆ ಪರಿಪೂರ್ಣತೆಯು ಮೌಲ್ಯವನ್ನು ಪಡೆದಿರುವುದು?"

ಮಾನವನದು ಹೋರಾಟದ ಚೇತನ ಎಂದು ಮನುಷ್ಯ ಪ್ರಯತ್ನವಾದವು ವಾದಿಸುತ್ತದೆ. ವಿಶ್ರಾಂತಿಯಿಂದ ಅಥವಾ ನೋವಿನಿಂದ ಬಿಡುಗಡೆ ಹೊಂದುವುದರಿಂದ ಆನಂದವು ಬರುವುದಿಲ್ಲ. ಶಕ್ತಿಗಳು ಕಾರ್ಯರೂಪಕ್ಕಿಳಿದಾಗ, ಅದರಲ್ಲೂ ವಿವೇಚನೆಯ, ಆಲೋಚನೆಯ, ಕಲಾತ್ಮಕ ಸೃಷ್ಟಿಯ ಮತ್ತು ಮಾನವೀಯ ಪ್ರಯತ್ನಗಳ ರಚನಾತ್ಮಕ ಚಟುವಟಿಕೆಗಳಿಂದ ಅದನ್ನು ಪಡೆಯಲು ಸಾಧ್ಯ. ಮನುಷ್ಯ ಪ್ರಯತ್ನವಾದಕ್ಕೆ ಕೇಡಿಲ್ಲದ ಪ್ರಪಂಚವು ಅರ್ಥವಿಲ್ಲದ್ದು. ಇವಾವು ಇಲ್ಲದ, ಪುರುಷಪ್ರಯತ್ನವಾದವೂ ಇಲ್ಲದ ಆ ಸಂತೋಷ ಮತ್ತು ಪರಿಪೂರ್ಣಪ್ರಪಂಚವೆಂದರೆ ಕೆಲವು ಅಂಶಗಳಿಂದ ನಾವು ವಂಚಿತರಾಗುತ್ತೇವೆ. ನಾವು ಬ್ರೌನಿಂಗನ ಹೋರಾಟ ಮತ್ತು ರಾಜ್ಯಗಳನ್ನು ಕುರಿತ ಹರಿತವಾದ ವಾಕ್ಸರಣಿಯನ್ನು, ಡಾಂಟೆಯ ನರಕ, ಶುದ್ಧಿಲೋಕ ಮತ್ತು ಪಾಪದಿಂದ ಮತ್ತು ಅನಂತ ನರಕದಿಂದ ಪಾರುಮಾಡುವ ಪ್ರೀತಿಯನ್ನು, ಗಯಟೆಯ ಸಂಪದ್ಭರಿತ ಮಾನವ ಅನುಭವದ ಮೂಲಕವಾದ ಮೋಕ್ಷದ ಸುವಾರ್ತೆಯನ್ನು, ಲಿಂಕನ್ನನ ಗಂಟು ಹಾಕಿದ ಹುಬ್ಬು, ಆದರೆ ಸಹಾನುಭೂತಿಯಿಂದ ತುಂಬಿದ ಮುಖ, ರಾಫೆಲ್‌ನ ಅದ್ಭುತವಾದ ಮಡೋನ್ನ ಕೃತಿ, ಷೇಕ್ಸ್‌ಪಿಯರನ ಮ್ಯಾಕ್‌ಬೆತ್ ಮತ್ತು ಲಿಯರನ ಕಥೆಗಳು, ಅಚೆಲಸನ ಚಪಲವಾದ ಅದೃಷ್ಟವನ್ನು ಕುರಿತ ನಾಟಕಗಳು ಮತ್ತು ಜೀಸಸ್‌ನ ಪ್ರೀತಿ ಹಾಗೂ ವಿಮೋಚನೆಗಳ ಸುವಾರ್ತೆಗಳು-ಇವೆಲ್ಲವನ್ನು ನಾವು ಕಲ್ಪಿಸಿಕೊಳ್ಳಬೇಕಾಗುತ್ತದೆ.

ವಿಲಿಯಮ್ ಜೇಮ್ಸ್‌ನು ಈ ಮನುಷ್ಯಪ್ರಯತ್ನವಾದದ ದೃಢವಾದಿ. ಏಕೆಂದರೆ ಅವನು ಮನುಷ್ಯನು ಸ್ವಭಾವತಃ ಹೋರಾಟಗಾರ ಮತ್ತು ವಿಜಿಗೀಷು. ಅದರಲ್ಲಿಯೂ ಪ್ರವಾಹದ ವಿರುದ್ಧ ಹೋಗುವಾಗಲೇ ಶ್ರೇಷ್ಠನೆನಿಸುತ್ತಾನೆ ಎಂದು ಅವನು ನಂಬಿದ್ದಾನೆ. ವಾಸ್ತವವಾಗಿ ನೋವು ಮತ್ತು ಕಷ್ಟದೆಸೆಗಳು ನಿರ್ದಿಷ್ಟವಾಗಿ ಜೀವನದ ಬಗೆಗಿನ ಪ್ರೀತಿಯನ್ನು ತಗ್ಗಿಸುವುದಿಲ್ಲ. ಬದಲಾಗಿ ಸಾಮಾನ್ಯವಾಗಿ ಅದಕ್ಕೆ ಹೆಚ್ಚಿನ ಹುರುಪನ್ನು ನೀಡುವಂತೆ ಕಾಣುತ್ತದೆ. ವಿಷಣ್ಣತೆಯ ಮುಖ್ಯ ಆಕರವೆಂದರೆ ಪರ್ಯಾಪ್ತಿ. ಆವಶ್ಯಕತೆ ಮತ್ತು ಹೋರಾಟಗಳು ನಮ್ಮನ್ನು ಉದ್ರೇಕಿಸುತ್ತವೆ ಮತ್ತು ಸ್ಫೂರ್ತಿ ನೀಡುತ್ತವೆ. ನಮ್ಮ ಮಹಾಸಾಧನೆಯು ಕಾಲವೇ ಶೂನ್ಯವನ್ನು ತಂದೊಡ್ಡುತ್ತದೆ. ಬೈಬಲ್ಲಿನಲ್ಲಿ ಬರುವ ನಿರಾಶಾವಾದಿಯಾದ ಉದ್ಗಾರಗಳು ಸೆರೆಸಿಕ್ಕ ಜ್ಯೂಗಳಿಂದ ಬರಲಿಲ್ಲ, ಆದರೆ ಸಾಲೋಮನ್ನನ ವೈಭವದಲ್ಲಿ ಲೋಲಾಡುವ ಜನರಿಂದ ಬಂದವು.

ಪುರುಷ ಪ್ರಯತ್ನವಾದದ ಬೆಳವಣಿಗೆ ಹೋರಾಟದ ಮೂಲಕ ಉನ್ನತಮಟ್ಟದ ಮೌಲ್ಯವನ್ನು ಗೊತ್ತುಮಾಡುವುದರಿಂದ ಚೆನ್ನಾಗಿ ಕಾಣುತ್ತದೆ. ಕೇಡು ಇಲ್ಲದಿದ್ದರೆ ಪ್ರೇರಣೆಯೂ ಇಲ್ಲ. ಕೇಡಿನ ಗೆಲವೂ ಇಲ್ಲ ಮತ್ತು ನೈತಿಕ ಬಲವೂ ಇಲ್ಲವಾಗುತ್ತದ. ಆದ್ದರಿಂದ ಅದು ಸಂತೋಷಕ್ಕಿಂತಲೂ ಶೀಲಕ್ಕೆ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಟ್ಟದೆ. ಪಾಪರಹಿತವಾದ ಒಂದು ಜನಾಂಗದ್ದು ಪರಿಪೂರ್ಣ ಚೇತನವಲ್ಲ. ಅವರು ಮುಗ್ಧ ಜನಾಂಗ. ಮಾನವನಲ್ಲಿ ನೀತಿ ಬಲವನ್ನು, ಮಕ್ಕಳಲ್ಲಿ ಮುಗ್ಧತೆಯನ್ನು, ದುಷ್ಪ್ರೇರಣೆಯ ವಿರುದ್ಧ ಸ್ಥಿರವಾಗಿ ನಿಲ್ಲುವ ಸಾಮರ್ಥ್ಯವನ್ನು, ಕೇಡನ್ನು ಪರಿಹರಿಸುವ ಮತ್ತು ಗೆಲ್ಲುವ ಶಕ್ತಿಯನ್ನು ನಾವು ಹೊಗಳುತ್ತೇವೆ. ಸಂತೋಷವೇ ಜೀವನದ ಗುರಿ ಎಂದು ಹೇಳುವ, ಸೌಖ್ಯವೇ ಮುಖ್ಯ ಪುರುಷಾರ್ಥವೆಂಬ ವಾದವುಳ್ಳ ನೀತಿಶಾಸ್ತ್ರವನ್ನು ಅಂಗೀಕರಿಸಿದ್ದರಿಂದ ಕೇಡಿನ ಸಮಸ್ಯೆಯು ಬದಲಾಯಿತು. ಸಮರಸದ ನೀತಿಶಾಸ್ತ್ರದ ಪರಿಚಯದಿಂದ ಜೀವನದ



ಉದ್ದೇಶವು ಬರೀ ಸುಖಾಭಿಲಾಷೆಯಲ್ಲ, ಕಾರ್ಯಸಿದ್ಧಿ ಎಂದು ಭಾವಿಸುವಂತಾಯಿತು. ಪುರುಷಪ್ರಯತ್ನವಾದವು ಕ್ರಿಯಾತ್ಮಕ ಪ್ರಪಂಚವನ್ನು, ಅದರಲ್ಲಿ ನಿರಂತರ ಪ್ರಗತಿಯನ್ನು ಕಾಣುತ್ತದೆ. ಬೇರೆ ಮಾತಿನಲ್ಲಿ ಹೇಳುವುದಾದರೆ, ಯಾವುದೂ ಸ್ಥಿರವಾದ ನೆಲೆಯಿಲ್ಲದೆ, ನಿರಂತರ ಬದಲಾವಣೆಯನ್ನು ಹೊಂದುತ್ತಾ ಹೋಗುವುದು. ಬಸವನೂ ಒಬ್ಬ ಪುರುಷಪ್ರಯತ್ನವಾದಿ. ಆದರೆ ಅವನ ಮನುಷ್ಯಪ್ರಯತ್ನವಾದವು ಅನುಭಾವದಲ್ಲಿ ಬೇರು ಬಿಟ್ಟದೆ. ನೈತಿಕ ಅನುಭವವು ಅತ್ಯಂತ ಮೇಲ್ಮಟ್ಟದ್ದಲ್ಲ. ಧರ್ಮನಿಷ್ಠ ಅಥವಾ ಆಧ್ಯಾತ್ಮಿಕ ಅನುಭವವು ಅದನ್ನು ಮೀರುತ್ತದೆ. ಬಂಧ ವಿಮೋಚನೆ ಅಥವಾ ಮೋಕ್ಷವು ಬರೀ ಕರ್ಮ ಅಥವಾ ನೈತಿಕ ಕ್ರಿಯೆಯ ಮೂಲಕ ದೊರೆಯದು. ಆದರೆ ಅದು ಕೇವಲ ಕರ್ಮದಿಂದ ಸಾಧ್ಯವಿಲ್ಲ. ದುರಭಿಮಾನವನ್ನು ಮರೆಸುವ ಪ್ರೀತಿಯೆನಿಸಿದ ಭಕ್ತಿಯಿಂದ ಮಾತ್ರ ಸಾಧ್ಯ. ಏಕೆಂದರೆ ಕರ್ಮದಲ್ಲಿ ತೊಡಗಿದ ವ್ಯಕ್ತಿ ಮಾನವ ಕುಲದ ಆದರ್ಶಗಳ ಬೆನ್ನು ಹತ್ತಿ ಒಂಟಿಯಾಗಿ ಉಳಿಯುತ್ತಾನೆ. ಭಕ್ತಿ ಮತ್ತು ಜ್ಞಾನದಲ್ಲಿಯಾದರೋ ಅವನು ಕಾಲ ಮತ್ತು ದೇಶಾತೀತವಾದ ಮನುಷ್ಯ ಹಾರೈಸುವ ಎಲ್ಲ ಮೌಲ್ಯಗಳ ಸಿದ್ಧಿಯಾದ ಪರಮಸತ್ಯಕ್ಕೆ ಸೇರುತ್ತಾನೆ. ನೀತಿಶಾಸ್ತ್ರವು ನಾವು ವಿಶ್ವದಲ್ಲಿ ಸಮರಸವನ್ನು ಅನುಭವಿಸುವ, ದೇವರಲ್ಲಿ ಸಮಸ್ತವನ್ನು ಕಾಣುವ ಆಧ್ಯಾತ್ಮಿಕ ಕ್ಷೇತ್ರದತ್ತ ಗಮನ ಸೆಳೆಯುತ್ತದೆ. ಹೀಗೆ ಎಲ್ಲ ಮುಮುಕ್ಷುಗಳ ಜ್ಞಾನೋದಯವು ಒಂದು ಸತ್ಯವನ್ನು ನಿರೂಪಿಸಿದೆ. ಅದೆಂದರೆ ನಾವು ಆರಂಭದಲ್ಲಿ ಪ್ರಕೃತಿಯನ್ನು ಆಧ್ಯಾತ್ಮಿಕ ಅರ್ಥದಲ್ಲಿ ಅವ್ಯವಸ್ಥೆಯಿಂದ ಕೂಡಿದ್ದು, ನೈತಿಕ ಅರ್ಥದಲ್ಲಿ ನಿರಾಶಾವಾದಿಯಾದದ್ದು ಎಂದು ಅಭಿಪ್ರಾಯ ಪಟ್ಟರೂ ಕೊನೆಯಲ್ಲಿ ಇಡೀ ಪ್ರಕೃತಿಯೆಲ್ಲಾ ಬುದ್ಧಿಗ್ರಾಹ್ಯವಾಗಿರುತ್ತದೆ ಅಥವಾ ವಿವೇಕಪೂರ್ಣವಾಗಿ ಕ್ರಮಗೊಳಿಸಲ್ಪಟ್ಟಿದೆ. ಮತ್ತು ಮಾನವ ಜೀವನವು ಆಶಾವಾದಿಯಾಗಿದೆ. ಆದ್ದರಿಂದ ಮುಮುಕ್ಷುವು ಮೆಕಂಜಿಯ ಮಾತನ್ನು ಒಪ್ಪುತ್ತಾನೆ. "ಎಲ್ಲಿಯವರೆಗೆ ನಾವು ಈ ಜಗತ್ತಿಂದು ಶಾಂತವೆಂದೂ ಮತ್ತು ವಿವಿಕ್ತವಾದ ಘಟನೆಗಳ ಸಮೂಹವೆಂದು ಭಾವಿಸುವೆವೋ ಅಲ್ಲಿಯವರೆಗೆ ಪರಿಪೂರ್ಣ, ಸುಸಂಗತ ಹಾಗೂ ಬುದ್ಧಿಗ್ರಾಹ್ಯವಾದ ಜಗತ್ತು ಸಾಧ್ಯವಿಲ್ಲ." ಬೌದ್ಧಮತವೂ ಕೂಡ ನಿರಂತರವಾದ ಬದಲಾವಣೆಯ ಹಿಂದೆ ಮಹಾ ಚೇತನವಿದೆ ಎಂಬುದನ್ನು ಮರೆತಿಲ್ಲ. ಬುದ್ಧನ ಜೀವನ ಕಥೆಯು ಅವನು ತನ್ನ ಸುತ್ತಮುತ್ತ ಬಡತನ, ರೋಗ ಮತ್ತು ಸಾವುಗಳನ್ನು ಕಂಡನೆಂದು ತಿಳಿಸುತ್ತದೆ. ಇವನ್ನೆಲ್ಲಾ ಕಂಡ ಅವನ ಹೃದಯ ನೊಂದು, ದುಃಖ ಹಾಗೂ ನೋವುಗಳಿಗೆ ಕಾರಣವನ್ನು ತಿಳಿಯುವ ಮಹಾ ಅನ್ವೇಷಣೆಗೆ ಆತ ಹೊರ ಹೊರಟನು. ಬುದ್ಧನ ಪ್ರಕಾರ ಕಷ್ಟದಿಂದ ಪಾರಾಗುವ ಮಾರ್ಗವೆಂದರೆ ಆಸೆಯನ್ನು ದೂರವಿಡುವುದು. ಆದರೆ ಯಾರೇ ಆಗಲಿ ಆಸೆ ಇರುವ ತನಕ ಜೀವಿಸುತ್ತಾನೆ. ಆದ್ದರಿಂದ ಜೀವಿಸುವುದನ್ನೇ ನಿಲ್ಲಿಸುವುದಾದರೆ ಆಸೆಗೆ ನಿಲುಕಡೆಯಾಗುತ್ತದೆ. ಹಾಗೆಂದರೆ ಅಸ್ತಿತ್ವವನ್ನೇ ನಿರ್ನಾಮ ಮಾಡುವುದು. ಆದರೆ ಹಾಗೆಂದು ಹೇಳಿದರೆ ತನ್ನ ಅಥವಾ ಇಂದ್ರಿಯಗೋಚರ ವಿಷಯಗಳ ತೃಷೆಯಿಂದ ಜೀವನದ ಮೇಲೆ ಪ್ರಭಾವ ಬೀರಿದ ಸೋಪಾಧಿಕ ಅಸ್ತಿತ್ವಕ್ಕೆ ನಿಲುಕಡೆ ಎಂದು ಮಾತ್ರ ಅರ್ಥವಾಗುತ್ತದೆ. ಜೀವಿಸುವುದನ್ನು ನಿಲ್ಲಿಸುವುದೆಂದರೆ ಆತ್ಮಹತ್ಯೆ ಮಾಡಿಕೊಳ್ಳುವುದು. ಇದು ಹಾಸ್ಯಾಸ್ಪದವಾದದ್ದು. ಒಂದು ಆಸೆ ಇರುವ ಸ್ಥಿತಿ ಮತ್ತೊಂದು ಆಸೆಯಿಲ್ಲದ ಸ್ಥಿತಿ, ಒಂದು ಅಹಂಸ್ಥಿತಿ ಮತ್ತೊಂದು ಅಹಂರಹಿತ ಸ್ಥಿತಿ ಎಂಬ ಎರಡೂ ಉಂಟೆಂದು ಬುದ್ಧನ ಜ್ಞಾನೋದಯವು ಸಾಧಿಸುತ್ತದೆ. ಎಲ್ಲಿಯ ತನಕ ಮನುಷ್ಯ ಅಹಂಗಾಗಿ ಮತ್ತು ಅದರ ಆಸೆಗಳಿಗಾಗಿ ಬಾಳುತ್ತಾನೋ, ಅಲ್ಲಿಯ ತನಕ ಅವನು ಉದ್ರಿಕ್ತನೂ, ಅವಿಶ್ರಾಂತನೂ ಮತ್ತು ದುಃಖಾರ್ತನೂ ಆಗಿರುತ್ತಾನೆ. ಬೋಧಿ ಅಥವಾ ಆಧ್ಯಾತ್ಮ ರಹಸ್ಯವಿದ್ಯೆ ಈ ಅಹಂ ಅನ್ನೂ, ಅದರ ಆಸೆಗಳನ್ನೂ ಇಲ್ಲವಾಗಿಸುವುದರಲ್ಲಿ ಶಾಂತಿಯು ಅನುಗೂಡಿ ಬರುತ್ತದೆ. ಅಹಂ ಮತ್ತು ಅದರ ಆಸೆಗಳನ್ನು ನಿರ್ನಾಮಗೊಳಿಸುವುದರಿಂದ ಅಹಂ ರಹಿತವಾದ ಶಾಂತ ಸ್ಥಿತಿಯು ಉಂಟಾಗುತ್ತದೆ. ಬುದ್ಧನು ತನಗೆ

ಜ್ಞಾನೋದಯುವಾದನಂತರ ಈ ಆಂತರಿಕ ಮತ್ತು ಉನ್ನತ ಮಟ್ಟದ ಜಾಗೃತ ಅವಸ್ಥೆಯಲ್ಲಿ ಬಾಳಿದನು. ಅವನು ಇದನ್ನು ನಿರ್ವಾಣವೆಂದು ಕರೆಯಲು ಇಷ್ಟಪಟ್ಟಿದ್ದಾನೆ.

ಶ್ರೇಷ್ಠವಾದ ಜೀವನವೆಂದರೆ ಭಕ್ತಜೀವನ. ದೈವಿಕ ಜೀವನದಲ್ಲಿ ಎಲ್ಲ ಜೀವನವೂ ತನ್ನಷ್ಟಕ್ಕೆ ತಾನು ಪರಿಪೂರ್ಣವಾಗುತ್ತದೆ. ಯಾವನು ಜೀವನದ ದೊಡ್ಡ ಮಾರ್ಗಕ್ಕೆ ಹತ್ತಿರವಾಗಿ ಜೀವಿಸುತ್ತಾನೋ ಅವನು ನಿಜವಾದ, ಆಳವಾದ, ಜೀವನ ನಡೆಸುತ್ತಾನೆ. ದೇವರೇ ಜೀವನದ ಸ್ಫೂರ್ತಿ, ಪರಮ ಸತ್ಯ. ಆದ್ದರಿಂದ ಶಾಶ್ವತವಾದ ಜೀವನವೆಂದರೆ ದೈವಿಕ ಜೀವನ (Life in God) ಮಾತ್ರ ಎಂದು ಬಸವನು ಹೇಳಿದ್ದಾನೆ. ಬಸವನು ಒಬ್ಬ ಅನುಭಾವಿ, ಆದರೆ ಅವನ ಅನುಭಾವವು ರಚನಾತ್ಮಕವಾದದ್ದು ಅಥವಾ ಮಾನವ ಪ್ರಯತ್ನವಾದಿಯಾದದ್ದು. ಅನುಭಾವದಲ್ಲಿ ಗೂಢವಾದುದೇನೂ ಇಲ್ಲ. ತನ್ನ ಒಳಬೆಳಕಿನಿಂದ ದೈವೀ ಶಕ್ತಿಯನ್ನು ಅರಿತವನೇ ಅನುಭಾವಿ. ಇಂಥವನಿಗೆ ಅನಂತ ಮತ್ತು ಶಾಶ್ವತಗಳು ಬರಿಯ ನಂಬಿಕೆಗಳಲ್ಲ, ಅನುಭವವಾಗುತ್ತವೆ. ಅನುಭಾವ ತತ್ತ್ವವನ್ನು ಹೀಗೆ ಸಂಗ್ರಹಿಸಬಹುದು : ಮಾನವನಲ್ಲಿರುವ ಉದಾತ್ತತೆಯು ವಿಶ್ವದಲ್ಲಿರುವ ಒಳಿತಿನೊಡನೆ ಶೀಘ್ರ ಸಂಯೋಗವನ್ನು ಪಡೆಯಬಹುದು. ಆಗ ಮಾನವ ಆತ್ಮವು ಅತ್ಯುಚ್ಚವಸ್ತುವಿನೊಡನೆ ಇಂದ್ರಿಯಾತೀತ, ತರ್ಕಾತೀತವಾದ ಐಕ್ಯಸುಖವನ್ನು ಅನುಭವಿಸುತ್ತದೆ. ದೈವೀಶಕ್ತಿ ಸದಾ ನಮ್ಮಲ್ಲೇ ಇರುತ್ತದೆ. ಆದರೆ ನಾವು ಅದನ್ನು ಕಂಡುಕೊಂಡಿಲ್ಲ. ಜಾಗ್ರದವಸ್ಥೆಯ ನಮ್ಮ ಮಾನಸಿಕ ಸ್ಥಿತಿಗಳು ಸೂಕ್ಷ್ಮವಿಲ್ಲದಿರುವುದೇ ಇದಕ್ಕೆ ಕಾರಣ. ನಮ್ಮ ಮಾನಸಿಕ ಸ್ಥಿತಿಗಳು ಬೇರೆ ಬೇರೆ ತರದ ಓಲಾಟದಲ್ಲಿಯೂ ನಮ್ಮಲ್ಲಿಯೇ ಗೆಲುವನ್ನು ಪಡೆಯುತ್ತವೆ. ನಿಧಾನವಾದ, ಸ್ಥಿರವಾದ ತುಯ್ದಾಟದಲ್ಲಿ ನಮ್ಮಿಂದ ತಪ್ಪಿದ್ದನ್ನು ನಮ್ಮ ನಡೆ ಚುರುಕಾದಾಗ ಸ್ವಾಧೀನಪಡಿಸಿಕೊಳ್ಳುತ್ತೇವೆ. ನಮ್ಮ ಗ್ರಹಣ ಶಕ್ತಿಯು, ನಮ್ಮ ಮನೋವಿಕಾರದಂತೆ ತನ್ನಷ್ಟಕ್ಕೆ ತಾನೇ ಗರಿಷ್ಠ ಅಥವಾ ಕನಿಷ್ಠ ಶ್ರದ್ಧಾಸಕ್ತಿಗಳನ್ನು ನಡೆಸಿಕೊಂಡು ಬರುತ್ತದೆ. ಇಂಥ ಉನ್ನತವಾದ ಗ್ರಹಿಕೆಯನ್ನು ಹೊಂದಿದಾಗ ಅಪರಿಪೂರ್ಣ ಪ್ರಪಂಚದ ಅವಸ್ಥೆಯು ಅತಿಕ್ರಮಿಸಲ್ಪಡುತ್ತದೆ. ಮತ್ತು ಆತ್ಮವು ಒಂದು ಬಗೆಯ ವಿಶ್ವಾನುಭವವನ್ನು ಪ್ರವೇಶಮಾಡುತ್ತದೆ. ವ್ಯಕ್ತಿತ್ವದಾಚೆಗೆ ಅಮರತ್ವದಸ್ಥಿತಿ, ಲೌಕಿಕದ ಯಾವುದೇ ಆನಂದಕ್ಕೂ ಹೋಲಿಸಲಾಗದ ಸಂಮೃದ್ಧವಾದ ಪರಮ ಸುಖವಿದೆ, ಬರಿಯ ನೋವಿಲ್ಲದ ಶೂನ್ಯವಿದೆಯೆಂದಲ್ಲ ಎಂದು ತೆರೆದು ತೋರಿಸುತ್ತದೆ. ಆದ್ದರಿಂದ ಅನುಭಾವಿಗಳ ಅನುಭಾವವು ಆಶಾವಾದವೇ ಜೀವನವನ್ನು ನೋಡುವ ದೃಷ್ಟಿ, ನಿರಾಶಾವಾದವಲ್ಲ ಎಂದು ನಿರ್ದೇಶಿಸುತ್ತದೆ.

ಎಚ್ಚರ ತಪ್ಪಿದ ಮತ್ತು ಆಳವಿಲ್ಲದ ಆಶಾವಾದವು ನಿರಾಶಾವಾದದಷ್ಟೆ ಕೆಟ್ಟದು. ಈ ಆಧಾರದ ಮೇಲೆಯೇ ಬ್ರೌನಿಂಗನ ಆಶಾವಾದವು ಟೀಕಿಸಲ್ಪಟ್ಟಿತು. ಆದರೆ ಲಿಬ್ನಿಜ್, ಲಬ್ಬಕ್ ಮತ್ತು ವೆಲ್ಸ್ ಮೊದಲಾದ ಆಶಾವಾದಿಗಳಿದ್ದಾರೆ. ಲಿಬ್ನಿಜ್‌ನು ಈ ಜಗತ್ತು ಅತ್ಯುತ್ತಮವೆಂದು ತರ್ಕವಾದಗಳಿಂದ ಸಾಧಿಸಿದ್ದಾನೆ. ಲಬ್ಬಕ್‌ನು ತನ್ನ ಕೃತಿಯಲ್ಲಿ ಜೀವನದ ನಿರಾಶಾವಾದದ ಕಡೆ ವ್ಯತಿರಿಕ್ತವಾದ ಅಪಗಮನ ಪದ್ಧತಿಯಿಂದ ಮುಂದುವರಿದಿದ್ದಾನೆ. ವೆಲ್ಸನು ತನ್ನ ಕೃತಿಯಲ್ಲಿ ನಮ್ಮ ಕಾಲದ ಪಾಪ ಮತ್ತು ಕೇಡುಗಳನ್ನು ಟೀಕಿಸಿದ್ದರೂ ಕೊನೆಯಲ್ಲಿ ಆಶಾವಾದದ ಧ್ವನಿಯನ್ನು ಮೂಡಿಸಿದ್ದಾನೆ. ಜೀವನದ ಎಲ್ಲ ಗೊಂದಲ ಮತ್ತು ಭಂಗಗಳು, ಅದೃಷ್ಟದ ತಡೆ ಮತ್ತು ವಿಗತಿಗಳು ಮತ್ತು ಎದಿರೇಟುಗಳಿದ್ದರೂ ಕೂಡ ಮಾನವ ಜನ್ಮ, ಮುಂದೆ ಕಾಲ ಕಳೆದಂತೆ ಮೊದಲಿದ್ದುದಕ್ಕಿಂತ ಹೆಚ್ಚು ಹೆಚ್ಚು ವಿಶಾಲವೂ, ಸಭ್ಯವೂ, ಉತ್ತಮವೂ, ಆಳವೂ ಆಗುತ್ತದೆಂದು ರುಜುವಾತು ಪಡಿಸುತ್ತದೆ. ಒಟ್ಟಾರೆ ಎಲ್ಲವೂ ಉತ್ತಮವಾಗುತ್ತವೆ. ಅಲ್ಲಿ ಜೀವನದ ಐಹಿಕ ಉತ್ತಮೀಕರಣವಿರುತ್ತದೆ. ಮತ್ತು ಇದು ಮಾನವನ ಪ್ರಯತ್ನದಿಂದ ಮೂಡಿದ ಸದಿಚ್ಛೆಯಿಂದ ನೆರವೇರಲ್ಪಡುತ್ತದೆ. ಇದು ಪ್ರಯತ್ನಪೂರ್ವಕವಾಗಿ ಆದದ್ದು. ಮನುಷ್ಯನು ಅವುಗಳನ್ನು ಉತ್ತಮ ಪಡಿಸಲು ನಿರ್ಧರಿಸಿದ್ದರಿಂದ ಮತ್ತು ಮೇಲ್ಮೆ



ಯನ್ನು ತರಲು ಯತ್ನಿಸಿದ್ದರಿಂದ ಎಲ್ಲವೂ ಉತ್ತಮವಾಗುತ್ತವೆ. ಈ ಪ್ರಗತಿ ಮುಂದುವರಿಯುತ್ತದೆ. ಕಾರಣವೇನೆಂದರೆ ತನ್ನಲ್ಲಿ ಮನುಷ್ಯ ಸಿಡುಕಿನ ಸ್ವಭಾವ, ಅವಿವೇಕ ಮತ್ತು ನಿಸ್ಸಾರತೆಗಳಿದ್ದರೂ, ಆಲಸ್ಯ ಮತ್ತು ನೀಚ ಆಸೆಗಳಿದ್ದರೂ, ಸದಿಚ್ಛೆಗೆ ಪ್ರತಿಕ್ರಿಯೆ ತೋರುತ್ತಾನೆ ಮತ್ತು ಸದಿಚ್ಛೆಯನ್ನು ಮೆರೆಸುತ್ತಾನೆ.

ವೆಲ್ಸನು ಪುರುಷಪ್ರಯತ್ನವಾದದ ಕಡೆ ಬಾಗಿದರೂ ವಿಶ್ವವ್ಯಾಪಾರಗಳಲ್ಲಿ ಸದಿಚ್ಛೆಯು ಕಾರ್ಯರೂಪದಲ್ಲಿರುವುದನ್ನು ಕಾಣುವ ಸೂಕ್ಷ್ಮಪರಿಜ್ಞಾನವನ್ನು ಪಡೆದಿದ್ದನು. ಈ ಸದಿಚ್ಛೆಯೇ ಯೋಗಿಯ ವಿಶ್ವಸಂಕಲ್ಪವಾಗುತ್ತದೆ. ಜೀವನವು ಈ ವಿಶ್ವಸಂಕಲ್ಪದ ಅಭಿವ್ಯಕ್ತಿ. ಆದರೆ ಬುದ್ಧನು ಈ ಅಭಿಪ್ರಾಯವನ್ನು ಅನುಮೋದಿಸುವುದಿಲ್ಲ. ಬಸವನು ಅದು ಜೀವನದ ಆನಂದವನ್ನು ವ್ಯಕ್ತಪಡಿಸುತ್ತದೆ ಎಂದಿದ್ದಾನೆ. ಈ ವಿಶ್ವಸಂಕಲ್ಪ ಮಾನವ ಬುದ್ಧಿಶಕ್ತಿಯ ಸಾಮ್ಯದಿಂದ ರೂಪಿಸಿದ ಸಗುಣ ರೂಪಿಯಾದ ದೇವರ ಒಂದು ಅಭಿವ್ಯಕ್ತಿಯಲ್ಲ. ಅದನ್ನು ಹೀಗೆ ಹೇಳಿದರೆ ಅದನ್ನು ತಾರ್ಕಿಕ ಭಾಷೆಯಲ್ಲಿ ನಿರೂಪಿಸಿದಂತೆ. ಸೃಷ್ಟಿಯ ಮೂಲದಲ್ಲಿರುವ ವಿಶ್ವಶಕ್ತಿಯು ಸಾಮ್ಯ ಹಾಗೂ ವೈಷಮ್ಯಗಳಿಗೆ ಅತೀತವಾಗಿರುತ್ತದೆ. ಅದನ್ನು ತರ್ಕಬದ್ಧವಾದ ಶಬ್ದಗಳಲ್ಲಿ ವಿವರಿಸಲಾಗುವುದಿಲ್ಲ. ಜೀವನವು ವಿಶ್ವಶಕ್ತಿಯ ಅಭಿವ್ಯಕ್ತಿಯಾದ್ದರಿಂದ ನಿರ್ಮಾಣವನ್ನೇ ತನ್ನ ಮಾನದಂಡವನ್ನಾಗಿ ಹೊಂದಿರುತ್ತದೆ. ಜೀವನದ ಅಭಿವ್ಯಕ್ತಿಯು ನೈತಿಕಶಾಸ್ತ್ರ ಅಥವಾ ಕಲೆಯಲ್ಲಿದ್ದಂತೆ ಹೆಚ್ಚು ಶ್ರೇಷ್ಠವೂ, ಆಕರ್ಷಕವೂ ಆಗಬಹುದು. ಆದರೆ ಉತ್ತಮ ಅಭಿವ್ಯಕ್ತಿಯ ನಿರ್ಗಮನದಿಂದ ನಿರ್ಮಾಣ ನಿಲ್ಲುತ್ತದೆ ಎಂದು ತಿಳಿಯುವುದು ವಿಶ್ವದ ಇಚ್ಛಾಶಕ್ತಿಯ ತಿರುಳನ್ನೇ ಕಳೆದುಕೊಂಡಂತೆ. ವಿಶ್ವದ ಇಚ್ಛಾಶಕ್ತಿಯ ತಿರುಳೇನು ? ಅದೇ ಹಿಗ್ಗು ಅಥವಾ ಆನಂದ. ತನ್ನ ನಿರ್ಮಾಣದ ಪ್ರಯತ್ನದಲ್ಲಿ ಒಂದು ನಿರ್ಧಿಷ್ಟವಾದ ಸಿದ್ಧಿಯನ್ನು ದೊರಕಿಸಿಕೊಳ್ಳುವುದರಲ್ಲಿ ಜೀವನವು ತನ್ನ ಆನಂದವನ್ನು ಹೊಂದಿದೆ. ಈ ಆನಂದವು ವಿಜಯದ, ಗೆಲವಿನ ಆನಂದ; ಆದರೆ ಸಮಗ್ರ ಜೀವನವನ್ನು ಮೆಚ್ಚುವ ಆನಂದವಲ್ಲವಾದ್ದರಿಂದ ಇದು ಅತ್ಯಂತ ಮೇಲ್ಮಟ್ಟದ ಆನಂದವಲ್ಲ. ಆದಾಗ್ಯೂ ಕ್ರಿಯಾತ್ಮಕ ಆನಂದ ಹಾಗೂ ಪರಮಾನಂದಗಳ ನಡುವೆ ವಿರೋಧವೇನೂ ಇಲ್ಲ. ಆನಂದವು ಪರಿಪೂರ್ಣವಾದ ಆನಂದ ಮತ್ತು ಸೃಷ್ಟಿಕಾರಕ ಆನಂದಗಳೆಂಬ ಎರಡು ರೂಪಗಳನ್ನು ಹೊಂದಿದೆ. ಜೀವನದ ಪರಿಪೂರ್ಣತೆಯಲ್ಲಿ ಬದಲಾವಣೆಗಳು ಪರಮಸತ್ಯದ ರೂಪಗಳಾಗಿ ಕಾಣಿಸುತ್ತವೆ. ಸೃಷ್ಟ್ಯಾತ್ಮಕತೆಯು ಅದರ ಚಲನಾತ್ಮಕವಾದ ಪೂರ್ಣತೆಯನ್ನು ಒದಗಿಸಿದರೆ, ಪರಿಪೂರ್ಣತೆಯು ಅದರ ಸಮಗ್ರತೆಯನ್ನು ಕಾಯ್ದುಕೊಳ್ಳುತ್ತದೆ. ಆದ್ದರಿಂದ ರಚನಾತ್ಮಕತೆಯು ಪರಿಪೂರ್ಣತೆಯೊಂದಿಗೆ ಅಸಂಗತವಾಗಿಲ್ಲ.

ಕ್ಷೋಭೆಗೊಂಡ ಜೀವನದಿಂದ ಪರಿಹಾರವನ್ನು ಒದಗಿಸುವುದರಿಂದ ನಿರ್ವಾಣದ ಶಾಂತಿಯು ಆಕರ್ಷಣೆಯನ್ನು ಪಡೆದಿದೆ. ಆದರೆ ನಿಜವಾದ ಪರಿಹಾರ ಅಲ್ಲಿ ದೊರೆಯುವುದಿಲ್ಲ. ಏಕೆಂದರೆ ಜೀವನವು ಮತ್ತೆ ತನ್ನ ಪಕ್ಷವನ್ನು ಒತ್ತಿ ಹೇಳುತ್ತದೆ. ಮತ್ತು ಅದರ ಪ್ರವಾಹಗಳ ಸುಳಿಗೆ ನಮ್ಮನ್ನು ಸೆಳೆದುಬರುತ್ತದೆ. ನಾವು ಜೀವನದ ರಹಸ್ಯವನ್ನು ಕಂಡುಕೊಳ್ಳಲು ಸಾಧ್ಯವಾಗುವುದು ಅದನ್ನು ತ್ಯಜಿಸುವುದರಿಂದಲ್ಲ, ತುಂಬು ಬಾಳನ್ನು ಬಾಳುವುದರಿಂದ ಮಾತ್ರ ಜೀವನವು ತನ್ನ ನಿಜವಾದ ಸ್ವಭಾವವನ್ನು ಪ್ರಕಟಪಡಿಸಲು ಸಾಧ್ಯ. ಆದ್ದರಿಂದ ಜೀವನಕ್ಕೆ ಸಾವೇ ಕೊನೆಯದಲ್ಲ; ಸಂಕಷ್ಟವೊಂದೇ ಜೀವನದ ವಾಸ್ತವಾಂಶವಲ್ಲ. ಸಾವು ತಾತ್ಕಾಲಿಕ ಜಡತೆ, ಪೇಚಾಟವು ತಾತ್ಕಾಲಿಕ ಅಭಾವ. ಜೀವನವನ್ನು ಪೂರ್ಣವಾಗಿ ಅರ್ಥಮಾಡಿಕೊಳ್ಳಲು, ಅದರ ಘನತೆ ಮತ್ತು ಸೌಂದರ್ಯವನ್ನು ಪ್ರದರ್ಶಿಸಲು ಅವು ಅತ್ಯಗತ್ಯ. ವಾಸ್ತವವಾಗಿ ಜೀವನದ ಸತ್ತ್ವವನ್ನು ನಿಜವಾಗಿ ಹಿಡಿದಾಗ ಪ್ರತಿಕೂಲಗಳೆಲ್ಲ ಕರಗಿ ಹೋಗುತ್ತವೆ; ಜೀವನದ ಕರಾಳತೆಯೂ ಕೂಡ ಅಸಂಗ್ರಹವಾಗುತ್ತದೆ.

ಜೀವನವು ತನ್ನ ನಿರಂತರ ಮಿಡಿತದಲ್ಲಿಯೂ ಘನವಾದ ನಿಶ್ಶಬ್ದತೆಯನ್ನೂ, ಅದರ ದುಃಖದಲ್ಲಿಯೂ ಸಂತೋಷವನ್ನೂ ಹೊಂದಿದೆ. ಬಸವನು ಜೀವನದ ಮಿಡಿತವನ್ನು ಶಾಂತಿಯೊಡನೆ ಸಮನ್ವಯ ಮಾಡಿದ್ದಾನೆ. ಜೀವನವು ಸದಾ ಸಂಪೂರ್ಣವಾಗಿರುತ್ತದೆ,

ಅದರಲ್ಲಿ ಕೊರತೆಯೆಂಬುದೇ ಇಲ್ಲ. ಜೀವನವನ್ನು ನಾವು ಎಷ್ಟು ಚೆನ್ನಾಗಿ ಅರ್ಥಮಾಡಿಕೊಳ್ಳುತ್ತೇವೆಯೋ ಅಷ್ಟು ಪುಟ್ಟಗೆ ನಾವು. ಕೊರತೆ ಮತ್ತು ಕಷ್ಟಗಳು ಭ್ರಾಂತಿಯೆಂದು ತಿಳಿಯುತ್ತೇವೆ. ಅಂಶವನ್ನು ಪೂರ್ಣವೆಂದು, ಅಂದರೆ ಜೀವನದ ಬಿಡಿ ಭಾಗಗಳನ್ನು ಇಡಿ ಎಂದು ಭ್ರಮಿಸುವುದರಿಂದಲೇ ದುಃಖ ಕ್ಲೇಶಗಳು ಹುಟ್ಟುತ್ತವೆ. ಇದನ್ನು ಗುಣಪಡಿಸಲು ಮದ್ದು ಜೀವನವನ್ನು ತ್ಯಜಿಸುವುದಲ್ಲ, ಅದನ್ನು ಹೆಚ್ಚು ಆತ್ಮೀಕರಿಸಿಕೊಳ್ಳುವುದು. ಪರಿಪೂರ್ಣತೆ ಎಂಬುದು ನಾವು ದೊರಕಿಸಿಕೊಳ್ಳಬೇಕಾದದ್ದು. ಅದನ್ನು ದೊರಕಿಸಿಕೊಳ್ಳಲು ನಾವು ಹೆಚ್ಚು ಹಾತೊರೆದಂತೆ ಬೆಳಕು ಮತ್ತು ಹರ್ಷಗಳ ಉನ್ನತವಾದ ಹರಹಿನಲ್ಲಿ ನಮ್ಮ ಜೀವವು ಪ್ರಭಾವಕ್ಕೊಳಗಾಗುತ್ತದೆ. ಈ ಆನಂದ ಹಂತ ಹಂತವಾಗಿ ದೊರಕಿಸಿಕೊಳ್ಳುವಂಥದ್ದಲ್ಲ. ಅದು ಜೀವನದಲ್ಲಿ ಒಂದಾಗಿರುತ್ತದೆ. ಜೀವನವು ಹೆಚ್ಚು ಹೆಚ್ಚಾಗಿ ಉತ್ಕೃಷ್ಟತೆಯನ್ನು ಪಡೆದಂತೆಲ್ಲಾ ಹೆಚ್ಚು ಯಥೇಚ್ಛವಾದ ಆನಂದ ಹೊಮ್ಮುತ್ತದೆ. ಜೀವನವೆಂದರೆ ಆನಂದವೆಂಬ ದೃಷ್ಟಿಯು ಇಡೀ ಮನೋಭಾವದ ಮೇಲೆ ಹೆಚ್ಚು ಪರಿಣಾಮವನ್ನು ಬೀರುತ್ತದೆ. ಜೀವನವು ಆನಂದ ಮೂಲದಿಂದದ್ದು. ಅದರಿಂದಲೇ ಅದು ಪುಷ್ಟವಾಗುತ್ತದೆ. ಅಲ್ಲದೆ ಅದರ ಬದಲಾವಣೆಗಳೂ ಕೂಡ ಆನಂದದ ರೂಪಗಳೇ ಆಗಿರುತ್ತವೆ ಎಂದು ಅನುಭಾವವು ಭಾವಿಸುತ್ತದೆ. ಜೀವನದೊಡನೆ ಆನಂದವನ್ನೆಲ್ಲಾ ಸಮೀಕರಿಸುವುದರಿಂದ ಅದು ಜೀವನದ ನೋವನ್ನು ನಿವಾರಿಸುತ್ತದೆ. ಆದ್ದರಿಂದ ನೀವು ಜೀವನದ ಕತ್ತಲೆಯಭಾಗವನ್ನು (ದುಃಖ) ಬೆಳಕಿನಭಾಗದಷ್ಟೇ ( ಸುಖ ) ಸಮಚಿತ್ತದಿಂದ ಸ್ವಾಗತಿಸಬೇಕು. ಏಕೆಂದರೆ ವಾಸ್ತವವಾಗಿ ಜೀವನದ ಅರ್ಥವನ್ನು ಸರಿಯಾಗಿ ಗ್ರಹಿಸದ ಏಕ ಪಕ್ಷೀಯವಾದ ಮೌಲ್ಯಮಾಪನ ಜೀವನಕ್ಕೆ ಅಪಾರ್ಥ ಬಗೆದಂತೆ. ಜೀವನವೆಲ್ಲ ಬೆಳಕು. ಜೀವನದ ಎಲ್ಲ ಗತಿಯೂ ಆನಂದ ರೂಪ. ಇದೇ ಅನುಭಾವದ ಸಿದ್ಧಾಂತ.

(ಸಶೇಷ)



ಜನರು ಹಿತವಾಗಿಯೂ ಮೃದುವಾಗಿಯೂ ಮಾತನಾಡಿದರೆ ಮರ್ಯಾದೆಯನ್ನು ಹೊಂದುತ್ತಾರೆ; ಇಲ್ಲದೆ ನಿಷ್ಠುರವಾದ ಮಾತನ್ನಾಡಿದರೆ ಅಪಮಾನಪಡುತ್ತಾರೆ.

ಹೇಗೆಂದರೆ, ಗಿಳಿ ಎಲ್ಲರಿಗೂ ಸಂತೋಷವುಂಟಾಗುವಂತೆ ಮಾತನಾಡುವುದರಿಂದ ಹಾಲನ್ನೂ ಹಣ್ಣನ್ನೂ ಕೊಟ್ಟು ಅದನ್ನು ಲಾಲಿಸುತ್ತಾರೆ; ಕತ್ತೆ ಕಠೋರವಾಗಿ ಕೂಗುವುದರಿಂದ ಅದನ್ನು ಕೋಲಿನಿಂದ ಹೊಡೆದು ಓಡಿಸುತ್ತಾರೆ.





# ಪ್ರೊ. ದೇ. ಜವರೇಗೌಡ ಅವರು

## ಅಧ್ಯಕ್ಷ ಭಾಷಣ







೪೭ನೆಯ ಕನ್ನಡಸಾಹಿತ್ಯ ಸಮ್ಮೇಲನದ ಅಧ್ಯಕ್ಷರಾದ ಪ್ರೊ ದೇ. ಜ. ಗೌ. ಅವರು ತಾ. ೨೬-೧೨-೭೦ರಂದು ಬೆಂಗಳೂರಿನಲ್ಲಿ ಮಾಡಿದ ಭಾಷಣದ ಸಾರಾಂಶ. ದೀರ್ಘವೂ ಮನನೀಯವೂ ಆದ ೩೬ಪುಟಗಳ ಭಾಷಣದಲ್ಲಿ ಪ್ರಕೃತ ಗದ್ಯ ಸಾಹಿತ್ಯ ನವ ಸಾಹಿತ್ಯದ ಬಗೆಗೆ ಹೇಳಿದ ಕೆಲವು ವಿಚಾರಗಳನ್ನು ಮಾತ್ರ ಪ್ರಕಟಿಸಿದ್ದೇವೆ.

—ಸಂ.

ಸ್ವಾಗತ ಸಮಿತಿಯ ಅಧ್ಯಕ್ಷರೂ ಸನ್ಮಾನ್ಯ ವಿದ್ಯಾಸಚಿವರೂ ಆದ ಶ್ರೀ ಶಂಕರೆಗೌಡರೆ, ಪೂಜ್ಯ ಸ್ವಾಮಿಜಿಯವರೆ, ಮಾನ್ಯ ಮಿತ್ರರೂ ಪರಿಷತ್ತಿನ ಅಧ್ಯಕ್ಷರೂ ಆದ ಶ್ರೀ ನಾರಾಯಣ ಅವರೆ, ಕನ್ನಡತನವೇ ಮೈವೆತ್ತಂತಿರುವ ಅಣ್ಣತಮ್ಮಂದಿರೆ ಅಕ್ಕತಂಗಿಯರೆ:

ಕನ್ನಡ ಸಾಹಿತ್ಯ ಪರಿಷತ್ತಿನ ಸುವರ್ಣ ಮಹೋತ್ಸವದ ಸುಸಂದರ್ಭದಲ್ಲಿ ಕರ್ನಾಟಕದ ರಾಜಧಾನಿಯಲ್ಲಿ ಬಹು ವರ್ಣ ವೈಭವದಿಂದ ನಡೆಯುತ್ತಿರುವ ನಲವತ್ತೇಳನೆಯ ಕನ್ನಡ ಸಾಹಿತ್ಯ ಸಮ್ಮೇಲನದ ಅಧ್ಯಕ್ಷಪೀಠಕ್ಕೆ ನನ್ನನ್ನಾರಿಸಿ, ನಿರಸೂಯತೆಯನ್ನು ನಿರ್ವ್ಯಾಜಸ್ನೇಹವನ್ನೂ ಅಪಾರ ವಿಶ್ವಾಸವನ್ನೂ ಮಹೌದಾರ್ಯವನ್ನೂ ವ್ಯಕ್ತಪಡಿಸಿರುವ ಗುಣೈಕಪಕ್ಷಪಾತಿಗಳಾದ ಸನ್ಮಿತ್ರರಿಗೆ, ಅವರ ಹೃದಯಪದ್ಮದಲ್ಲಿ ಸದಾ ನೆಲೆಸಿರುತ್ತ ಸಕಲ ಸತ್ಕಾರ್ಯಗಳಿಗೂ ಪ್ರೇರಕಶಕ್ತಿಯಾಗಿರುವ ಕನ್ನಡಾಂಬೆ ರಾಜರಾಜೇಶ್ವರಿಗೆ ಪ್ರಪ್ರಥಮವಾಗಿ ಅತ್ಯಂತ ವಿನಯದಿಂದ ನಮಸ್ಕರಿಸುತ್ತೇನೆ. ಈ ತನಕ ಈ ಪೀಠವನ್ನಲಂಕರಿಸಿ, ತಮ್ಮ ವಿದ್ವತ್ಪ್ರತಿಭೆಗಳಿಂದ, ಮಹಾಸಾಧನೆಯಿಂದ, ಭಾಷಾ ಸಂಬಂಧವಾದ ಸೇವಾಪರಾಯಣತೆಯಿಂದ, ಎತ್ತರದ ವ್ಯಕ್ತಿತ್ವದಿಂದ ಇದಕ್ಕೆ ಮಹಾತೇಜಸ್ಸನ್ನೂ ಮಹಾ ಗೌರವವನ್ನೂ ಒದಗಿಸಿಕೊಟ್ಟಿರುವ ಮಹಾ ಮಾನ್ಯರಿಗೂ ಪೂಜ್ಯ ಗುರುಹಿರಿಯರಿಗೂ ಭಕ್ತಿಪೂರ್ವಕವಾದ ಪ್ರಣಾಮಗಳು ಸಲ್ಲುತ್ತವೆ. ಇಹಲೋಕದಿಂದಗಲಿ ಜ್ಯೋತಿಶ್ಚರೀರಿಗಳಾಗಿ ಕನ್ನಡನಾಡಿನಲ್ಲೆಲ್ಲ ಸಂಚರಿಸುತ್ತ, ಕನ್ನಡಕ್ಕೆ ಕನ್ನಡಜನತೆಗೆ ರಕ್ಷೆಯಾಗಿರುವ ಆ ಹಿರಿಯ ಚೇತನಗಳ ಮತ್ತು ಇಂದಿಗೂ ಸುದೈವದಿಂದ ನಮ್ಮೊಡನಿರುವ ಮಹಾನುಭಾವರ ಆಶೀರ್ವಾದದಿಂದ, ಕನ್ನಡನುಡಿಯೆ ಗತಿಮತಿಯೆಂದು ತಿಳಿದು ಅದರ ಉಪಾಸನೆಯೆ ಮುಕ್ತಿ ಮಾರ್ಗವೆಂದು ನಂಬಿ ಕನ್ನಡ ನಾಡಿನ ಮೂಲೆ ಮೂಲೆಗಳಿಂದ ಬಂದು ನೆರೆದಿರುವ ಅಣ್ಣತಮ್ಮಂದಿರ ಮತ್ತು ಅಕ್ಕತಂಗಿಯರ ವಾತ್ಸಲ್ಯದಿಂದ ಈ ಸ್ಥಾನದ ಜವಾಬ್ದಾರಿಯನ್ನು ನಿರ್ವಹಿಸಬಲ್ಲೆನೆಂದು ನಂಬಿಕೊಂಡಿದ್ದೇನೆ. ಕನ್ನಡ ನಾಡಿನ ನಾನಾ ತೀರ್ಥಕ್ಷೇತ್ರಗಳಿಂದ ಯಾತ್ರಿಕರಾಗಿ ಬಿಜಯಗೈದು ಪುನೀತಗೊಳಿಸಿರುವ ಈ ನೆಲದ ಮಹಿಮೆಯಿಂದ, ಇಲ್ಲಿ ಸೇರಿರುವ ನುಡಿಗುಡಿಯ ಸೇವಕರು ನಿರ್ಮಿಸಿರುವ ಶ್ರದ್ಧೋತ್ಸಾಹ ಸಮ್ಮಿಳಿತವಾದ ಕನ್ನಡ ಪ್ರೇಮದ ಪರಿವೇಷದಲ್ಲಿ ಈ ಸಮ್ಮೇಲನದ ಯಾತ್ರೆ ನಿರಾತಂಕವಾಗಿ ತುದಿ ಸೇರುವುದೆಂದು ನೆಚ್ಚಿಕೊಂಡಿದ್ದೇನೆ.

ಒಂದು ನಾಡಿನ ಪ್ರತಿಭೆಯ, ಅದರ ಸಾಹಸ ಸಿದ್ಧಿಗಳ, ಅದರ ಹಿರಿಮೆ ಗರಿಮೆಗಳ ಅಭಿವ್ಯಕ್ತಿಗೆ ಅದರ ಸಾಹಿತ್ಯ ಹಾಗೂ ಕಲೆಗಳು ಸಶಕ್ತ ಮಾಧ್ಯಮವಾಗುತ್ತವೆ. ಅದರ ಉತ್ಕರ್ಷಾಪಕರ್ಷಗಳು ಏರು ಬೀಳುಗಳು ಜಯಾಪಜಯಗಳು ನೋವು ನಲಿವುಗಳು ಅದರ ಸಾಹಿತ್ಯ ಕೃತಿಗಳಲ್ಲಿ ಸುಸ್ಪಷ್ಟವಾಗಿ ಮೂಡುತ್ತವೆ. ಒಂದು ಜನಾಂಗದ ಅಂತರಂಗ ಸಾಧನೆಯ, ಸಂಸ್ಕೃತಿಯಾತ್ರೆಯ ಚರಿತ್ರೆಯೇ ಸಾಹಿತ್ಯ ಚರಿತ್ರೆ. ಇತಿಹಾಸ ಬಾಹ್ಯಘಟನೆಗಳ ಮಾಲೆಯಾದರೆ ಸಾಹಿತ್ಯ ಬಾಹ್ಯಾಂತರ ಘಟನೆಗಳ ಸಂಘಟನೆಯಿಂದ ಸಂಭವಿಸಿದ ಸುಂದರ ರಸಪಾಕ. ಯೂರಿಪಿಡೀಸ್ ಈಸ್ಕಿಲಸ್ ಹೋಮರ್ ವರ್ಜಿಲ್ ಶೇಕ್ಸ್‌ಪಿಯರ್ ಮಿಲ್ಟನ್ ವರ್ಡ್ಸ್‌ವರ್ತ್ ಬರ್ನಾಡ್‌ಷಾ ಇಬ್ಸೆನ್ ಮೋಲಿಯರ್ ಬಲ್ಜಾಕ್ ಗಯಟೆ ಥಾಮಸ್‌ಮನ್ ತೋಲ್‌ಸ್ತಾಯ್ ಗಾರ್ಕಿ ವ್ಯಾಸ ವಾಲ್ಮೀಕಿ ಕಾಳಿದಾಸ ಪಂಪ ಬಸವ ಹರಿಹರ ಕುಮಾರವ್ಯಾಸ ತುಲಸೀದಾಸ ಕಂಬ ಮೊದಲಾದ ಮಹಾ ಸಾಹಿತಿಗಳು ಆಯಾಯ ಜನಾಂಗಗಳ ಮಹೋತ್ಕರ್ಷಕ್ಕೆ ಚಿರಸಾಕ್ಷಿಗಳಾಗಿ, ಮುಂದಿನ ಪೀಳಿಗೆಗಳಿಗೆ ಧ್ರುವತಾರೆಗಳಾಗಿ ಪ್ರಜ್ವಲಿಸುತ್ತಿದ್ದಾರೆ. ರಾಷ್ಟ್ರದ ಉಚ್ಛ್ರಾಯ ಕಾಲದಲ್ಲಿ ಕಾಣಿಸಿಕೊಳ್ಳುವ ಇಂಥ ಕವಿಸಂತರು ಅವನತಿಯ ಕಾಲದಲ್ಲಿ ಕಣ್ಮರೆಯಾಗುತ್ತಾರೆ. ಆ ಅವನತಿಯ ಕಾಲ ಸಾಹಿತ್ಯ ಚರಿತ್ರೆಯಲ್ಲಿಯೂ ಅಮಾವಾಸ್ಯೆಯ ಕಾಲವೆನ್ನಬಹುದು. ಆದ್ದರಿಂದ ಒಂದು ನಾಡಿನ ಸಾಹಿತ್ಯ ಚರಿತ್ರೆ ಅದರ ನಾಗರಿಕತೆಯ ಇತಿಹಾಸವೆನ್ನಬಹುದು. ಜನಾಂಗ ದೊಡ್ಡದಾದರೆ ಸಾಹಿತ್ಯವು ದೊಡ್ಡದಾಗುತ್ತದೆ, ಅದು ಸಣ್ಣದಾದರೆ ಸಾಹಿತ್ಯವೂ ಸಣ್ಣದಾಗುತ್ತದೆಂಬ ಸಂಗತಿ ಜಗತ್ತಿನ ಸಾಹಿತ್ಯ ಚರಿತ್ರೆಗಳನ್ನೋದಿದವರಿಗೆ ಹೊಸದಲ್ಲ.

ಕನ್ನಡ ಭಾಷಾಸಾಹಿತ್ಯಗಳಂತೆ ಪ್ರಜ್ವಲವೂ ವೈವಿಧ್ಯ ಮಯವೂ ಸಂಪತ್‌ಸಂಮೃದ್ಧವೂ ರಮ್ಯವೂ ಅವಿಚ್ಛಿನ್ನವೂ ಆದ ಸುದೀರ್ಘ ಇತಿಹಾಸವುಳ್ಳ ಭಾಷಾಸಾಹಿತ್ಯಗಳು ಜಗತ್ತಿನಲ್ಲಿಯೇ ಅತಿ ವಿರಳವೆಂದು ಹೇಳಿದರೆ ಅದು ಅಂಧಾಭಿಮಾನದ ಅತಿಶಯೋಕ್ತಿಯ ಜಲ್ಪವೆಂದು ಯಾರೂ ಕಡೆಗಾಣಿಸಬಾರದು. ಚಕ್ರವರ್ತಿಗಳು ಮಹಾಮಂತ್ರಿಗಳು ದಂಡಾಧೀಶರು ಸಂತರು ಸಮಾಜಸುಧಾರಕರು ವಿರಕ್ತರು ಸ್ತ್ರೀಯರು ವಿವಿಧ ಕಾಯಕದವರು ಭಾಷಾಸಾಹಿತ್ಯಗಳ ಮೇಲ್ಮೆಗಾಗಿ ತಮ್ಮ ಪ್ರತಿಭೆಯನ್ನು ಧಾರೆಯೆರೆದಿದ್ದಾರೆ. ಕಾಲ ಕಾಲಕ್ಕೆ ಸಂಸ್ಕೃತ ಪ್ರಾಕೃತ ಸಾಗರಗಳಿಂದ ಹರಿದು ಬಂದ ಜ್ಞಾನವಾಹಿನಿಗಳನ್ನು ಗರ್ಭೀಕರಿಸಿಕೊಂಡು, ಅನೇಕ ಮತಗಳ ಸಂಘರ್ಷ ಸಂಮಥನಗಳಿಂದ ಸಂಲಬ್ಧವಾದ ಸಂಜೀವಿನೀ ಶಕ್ತಿಗಳಿಂದ ಪರಿಪುಷ್ಟಿಗೊಂಡು, ಕನ್ನಡ ಜನದ ಆಶೆ ಆಕಾಂಕ್ಷೆಗಳನ್ನು ಪ್ರತಿಬಿಂಬಿಸುತ್ತ, ಜನಜೀವನವನ್ನು ರೂಪಿಸುತ್ತ, ಕನ್ನಡ ಸಾಹಿತ್ಯ ಮಹಾಪೂರವಾಗಿ ಹರಿದುಬಂದಿದೆ; ಕನ್ನಡ ಭಾಷೆ ಶ್ರೀಮಂತವಾಗಿ ವಿಕಾಸಗೊಂಡಿದೆ. ಸ್ವಾತಂತ್ರ್ಯ ಚಳುವಳಿಯ ಫಲವಾಗಿ, ಪಾಶ್ಚಾತ್ಯ ಸಾಹಿತ್ಯ ಸಂಪರ್ಕದ ಪರಿಣಾಮವಾಗಿ ಕನ್ನಡ ಸಾಹಿತ್ಯವೃಕ್ಷ ಶಾಖೋಪಶಾಖೆಗಳಾಗಿ ಒಡೆದು ಫಲಪುಷ್ಪಗಳಿಂದ ಸಮೃದ್ಧವಾಗಿದೆ. ಪ್ರಾಯಃ ಒಂದೆರಡು ಭಾಷೆಗಳ ಸಾಹಿತ್ಯವನ್ನು ಬಿಟ್ಟರೆ ಗಾತ್ರವಿಸ್ತಾರ ವೈವಿಧ್ಯ ಶ್ರೀಮಂತತೆಗಳಲ್ಲಿ ಪ್ರಪಂಚದ ಯಾವ ಭಾಷೆಯ ಸಾಹಿತ್ಯದೊಡನೆ ಯಾದರೂ ಹೆಗಲೆಣೆಯಾಗಿ ಇದು ನಿಲ್ಲಬಲ್ಲುದೆಂದು ಧೈರ್ಯವಾಗಿ ಹೇಳಬಹುದಾಗಿದೆ. ಈ ಐವತ್ತು ಅರವತ್ತು ವರ್ಷಗಳಿಂದೀಚೆಗೆ ನೂರಾರಲ್ಲ, ಸಾವಿರಾರು ಮಂದಿ ಸಾಹಿತ್ಯದೇವಿಗೆ ನಾನಾ ರೀತಿಗಳಲ್ಲಿ ಭಾವ ಬುದ್ಧಿಗಳನ್ನು ಧಾರೆಯೆರೆಯುವ ಮೂಲಕ ಕೈಂಕರ್ಯವೆಸಗಿ ಆ ಕ್ಷೇತ್ರವನ್ನು ಶ್ರೀಮಂತಗೊಳಿಸುತ್ತಿರುವುದು ಸಂತೋಷದ ಹಾಗೂ ಅಭಿಮಾನದ ವಿಷಯವಾಗಿದೆ. ಪಾಶ್ಚಾತ್ಯ ಬುದ್ಧಿಯ ಬಸಿರಿನಲ್ಲಿ ಉಗಮಗೊಂಡ ಸಾಹಿತ್ಯಪಂಥಗಳೆಲ್ಲ ಒಂದಲ್ಲ ಒಂದು ರೀತಿಯಲ್ಲಿ, ಒಂದಲ್ಲ ಒಂದು ಪ್ರಮಾಣದಲ್ಲಿ ಇಲ್ಲಿಯೂ ಪ್ರಯೋಗಗೊಂಡು, ಅವುಗಳ ಯೋಗ್ಯತೆಗೆ ತಕ್ಕಂತೆ ಜನಪ್ರಿಯವಾಗಿ, ವಿವಿಧಾಭಿರುಚಿಯ ಜನಮನವನ್ನು ತಣಿಸುತ್ತಿವೆ.

ನವ್ಯತೆ ಸಾಹಿತ್ಯೇತಿಹಾಸದಲ್ಲಿ ಮೇಲಿಂದ ಮೇಲೆ ಎದ್ದು ಕಾಣುವ ವಿಶಿಷ್ಟ ಪ್ರವೃತ್ತಿ; ಪಂಥ ಪ್ರತಿಪಂಥಗಳ ಪರ್ಯಾಯವೇ ಸಾಹಿತ್ಯೇತಿಹಾಸ. ಒಂದು ದಿಕ್ಕಿನಲ್ಲಿ ಹರಿಯುತ್ತಿರುವ ನದಿ ಇದ್ದಕಿದ್ದಂತೆ ತನ್ನ ಪಾತ್ರವನ್ನು ಬದಲಾಯಿಸಿದ್ದಾದರೆ, ಆ ಬದಲಾವಣೆ ಅಥವಾ ತಿರುವಿಗೆ ಆಧುನಿಕವೆಂದೋ ನವ್ಯವೆಂದೋ ಹೊಸ ಹೆಸರಿಡಲು ಪ್ರಯತ್ನಿಸುತ್ತೇವೆ. ವೈವಿಧ್ಯ ಅಥವಾ ನವ್ಯತೆ ಪ್ರತಿಯೊಬ್ಬ ಮಾನವನೂ ದಿನಬೆಳಗಾದರೆ ಅಪೇಕ್ಷಿಸುವ ವಿಷಯ; ಬೆಳಗಿನ ಸಾರು ಸಂಜೆಗೆ ಬೇಸರವಾಗುತ್ತದೆ. ನಿನ್ನೆಯ ಊಟ ಇಂದು ಸೇರುವುದಿಲ್ಲ. ರಸನೆಗೆ ದಿನದಿನವೂ ಒಂದೊಂದು ರುಚಿ ಬೇಕು. ನಮ್ಮ ವೇಷಭೂಷಣಗಳಲ್ಲಿಯೂ ಆಗಾಗ್ಗೆ ಕ್ರಾಂತಿಯನ್ನು ನಿರೀಕ್ಷಿಸುತ್ತೇವೆ. ಕರ್ಣಕೇಶ ಬೇಸರವಾದಾಗ ಕಪೋಲಕೇಶ ಚಾಲ್ತಿಗೆ ಬರುತ್ತದೆ. ಹೊಸ ಹೊಸ ಫ್ಯಾಷನ್ನು ಅಥವಾ ಗತ್ತುಗಳು ಕಲೆಯ ಸಾಮ್ರಾಜ್ಯದಲ್ಲಿ ಅನಿವಾರ್ಯ. ಒಂದು ಪಂಥ ತನ್ನ ಹೊಸತನವನ್ನು ಕಳೆದುಕೊಂಡು ಸಂಪ್ರದಾಯದ ಕೆಸರಿನಲ್ಲಿ ಹಳಸತೊಡಗಿದಾಗ ನವ್ಯತೆ ತಲೆದೋರುತ್ತದೆ. "ಅಪೂರ್ವಮಾಗೆ ಪೇಳ್ದ ಕವೀಶ್ವರರಿಲ್ಲ" ಎಂದು ಹೇಳಿ ಪಂಪ ಆ ಕಾಲಕ್ಕೇ ಹೊಸತನವನ್ನು ಮೆರೆದನು. ನಯಸೇನ ಚಂಪೂ ಧಾಟಿಯಲ್ಲಿ ಕಾವ್ಯರಚನೆ ಮಾಡಿದರೂ ಅನೇಕ ರೀತಿಗಳಲ್ಲಿ ನೂತನತೆಯನ್ನೂ ತೋರಿದನು. ಹೊಸ ಹೊಸ ಯುಗದ ಅವಶ್ಯಕತೆಗನುಗುಣವಾಗಿ ರಗಳೆ ಷಟ್ಪದಿ ಸಾಂಗತ್ಯ ಮೊದಲಾದ ಪ್ರಕಾರಗಳು ಕುಸುಮಿಸಿದುವು. ಮತ್ತೆ ನವೋದಯ ಕಾಲದಲ್ಲಿ ಮಹಾ

ಕ್ರಾಂತಿ ನಡೆಯಿತೆಂದೇ ಭಾವಿಸಬಹುದಾಗಿದೆ. ವಸ್ತು ವಿಚಾರ ಅಭಿವ್ಯಕ್ತಿ ಮತ್ತು ಭಾಷೆಗಳ ದೃಷ್ಟಿಯಿಂದ ಅವುಗಳಲ್ಲಿ ಗೋಚರವಾದ ನವ್ಯತನ ಅಂದಿನ ಜನಮಾನಸವನ್ನು ಸೆರೆಹಿಡಿಯಿತು; ಇಂದಿನ ಜನಮನದಿಂದ ತಿರೋಹಿತವಾಗಿಲ್ಲ. ನವಯುಗದ ಅಭೀಪ್ಸೆಯ ಅಭಿವ್ಯಕ್ತಿಯನ್ನಿಲ್ಲಿ ಕಾಣಬಹುದು :

ಮಾನವನೆ, ನಾರಾಯಣನು ಗುಡಿಯೊಳಿಲ್ಲ
ಫಲಪುಷ್ಪವನು ಕೊಟ್ಟರದೆ ಭಕ್ತಿಯಲ್ಲ.
ಬಡನರನೆ ದೇವನಿಹ ದೇಗುಲವು, ಮುಕ್ತಿ ;
ಬಡಜನರ ಸೇವೆಯನು ಮಾಡುವುದೆ ಭಕ್ತಿ.

('ಹಾಳೂರು')

ಹೊಸ ಯುಗದ ಹೊಸಚೇತನ "ಹೊಸಬಾಳ ಗೀತೆಯನು ದಿಕ್ಕುದೆಸೆ ಬಿರಿವಂತೆ ಕೊರಳೆತ್ತಿ ಕೈಯೆತ್ತಿ ದನಿಯೆತ್ತಿ ಹಾಡಿ" ತರುಣರನ್ನು ಬಡಿದೆಬ್ಬಿಸಿತು; 'ಗೊಬ್ಬರದ ಮೇಲೆ ಕಬ್ಬವಪ್ಪೊಡೆ ಗಂಡುಗಬ್ಬವಾದಂತಲ್ತೆ!' ಎಂಬ ಪ್ರತಿಕ್ರಿಯೆಯನ್ನು ತೋರಿತು. ಪರಂಪರೆ ಪ್ರಗತಿಗಳೆರಡೂ ಪರಸ್ಪರಪೂರಕವಾಗಬೇಕೇ ಹೊರತು ಮಾರಕವಾಗಬಾರದು. ಪರಂಪರೆಯ ನೆಲಗಟ್ಟಿಲ್ಲದ ಪ್ರಗತಿ ಕುಸಿದುಬೀಳುತ್ತದೆ, ನೆಲದ ಗೂಟಕ್ಕೆ ಕಟ್ಟುಗೊಂಡಿರುವ ತನಕ ಗಾಳಿಪಟ ಆಕಾಶದಲ್ಲಿ ನಿರಾತಂಕವಾಗಿ ಹಾರಾಡುತ್ತದೆ; ಅದು ಬಿಚ್ಚುಗೊಂಡ ಕೂಡಲೆ ಯಾವುದೊ ಕೊರಕಲಿನಲ್ಲಿ ಬಿದ್ದು ಹಾಳಾಗುತ್ತದೆ. ನವ್ಯ ಮಾರ್ಗದ ಪ್ರವರ್ತಕರಾದ ಗೋಕಾಕರು ಹೇಳಿರುವಂತೆ "ಕಾವ್ಯವು ನವ್ಯವಾಗುವುದು ಸ್ಪರ್ಧೆಗೆಂದಲ್ಲ, ಪೂರಕವೆಂದು... ಬರಿಯ ಶೂನ್ಯತಾವಾದವೇ ನವ್ಯತೆಯಾಗಲಿ, ಇಲ್ಲವೆ ಇಂದ್ರಿಯುಕ ಜೀವನದ ವಿಕೃತಿಯನ್ನೇ ತೋರಿಸುವ ಚಿತ್ರಸೃಷ್ಟಿ ನೂತನತರ ಮಾರ್ಗವೆಂದಾಗಲಿ ನಾವು ತಿಳಿಯದಿರೋಣ. ಒಂದು ಕಾವ್ಯಮಾರ್ಗದ ನವ್ಯಮಾರ್ಗದ ನವ್ಯತೆ ಅದರ ವಿಶಾಲ ದರ್ಶನದಲ್ಲಿದೆ; ವಿಕೃತಿಗಳ ಪ್ರದರ್ಶನದಲ್ಲಲ್ಲ."

ನವ್ಯತೆ ಯಾರೊ ಕೆಲವು ಕವಿಗಳ ಸ್ವತ್ತಲ್ಲ; ದುರ್ಬೋಧತೆ ಅಥವಾ ದುರ್ಜ್ಞೇಯಕ್ಕೆ ಪರ್ಯಾಯನಾಮವೂ ಅಲ್ಲ. ಅತಿಸ್ಪಷ್ಟತೆ ಅಥವಾ ಅತಿಸ್ಫುಟತ್ವ ಹೇಗೆ ಅಗ್ರಾಹ್ಯವೊ ಹಾಗೆಯೇ ಅಸ್ಪಷ್ಟತೆ ಅಸ್ಫುಟತ್ವಗಳೂ ಅಗ್ರಾಹ್ಯ. ಈ ಸಂದರ್ಭದಲ್ಲಿ ವಿಡಂಬನೆಯ ಮೂಲಕ ಪ್ರಕಟವಾದ ಅತಿಸ್ಪಷ್ಟತೆಯ ಅತಿರೇಕದ ಉದಾಹರಣೆಯೊಂದು ನೆನಪಿಗೆ ಬರುತ್ತದೆ. ಅಕ್ಷರಕುಕ್ಷಿಗಳಾಗಿ ವರ್ಣಮಾಲೆಯ ಪರಿಚಯ ಮಾತ್ರವುಳ್ಳಂಥವರಿಗೂ ಹೃದ್ಗವ್ಯವಾಗುವಂತಹ ಕವನವೊಂದನ್ನು ಲೂಯಿ ಆರಗಾನ್ ರಚಿಸಿದನಂತೆ. ಅದರ ತಲೆಹೆಸರು 'ಸರೆನೇಡ್'.[1] ಅದು ಐದು ಪಂಕ್ತಿಗಳ ಕವಿತೆ, ಮೊದಲ ಮೂರು ಪಂಕ್ತಿಗಳಲ್ಲಿ ಆರು ಅಕ್ಷರಗಳು, ನಾಲ್ಕನೆಯದರಲ್ಲಿ ಐದು, ಮತ್ತು ಐದನೆಯದರಲ್ಲಿ ಮೂರು, ಇಂಗ್ಲಿಷ್ ವರ್ಣಮಾಲೆಯ ೨೬ ಅಕ್ಷರಗಳನ್ನು ಐದು ಪಂಕ್ತಿಗಳಿಗೆ ಹಂಚಿ ಬರೆದಿದ್ದದ್ದೇ ಇದರ ಸ್ವಾರಸ್ಯ. ಅಸ್ಪಷ್ಟತೆ ಕಾವ್ಯದ ಒಂದು ಗುಣ, ನಿಜ ; ಆದರೆ ಅದಕ್ಕೆ ಮಿತಿಯಿರಬೇಕು. ಕವಿಯ ಹೃದಯದಲ್ಲಿದ್ದ ಭಾವವೀಚಿ ಸಹೃದಯನ ಹೃದಯದಲ್ಲಿ ಪರ್ಯವಸಾಯಿಯಾದಾಗ ಮಾತ್ರ ಅದು ಕಾವ್ಯವಾಗುತ್ತದೆ. ಕವಿಯೊಬ್ಬನಿಗೆ ಮಾತ್ರ ಅರ್ಥವಾಗುವ ಮಾತು ಒಗಟಾಗುತ್ತದೆ, ಬೆಡಗಿನ ವಚನವಾಗುತ್ತದೆ. ಎಷ್ಟು ಪ್ರಯತ್ನಿಸಿದರೂ ಅವುಗಳ ಅರ್ಥ ನಿಗೂಢವಾಗಿಯೇ ಉಳಿಯುತ್ತದೆ. ಅನೇಕ ಹೃದಯಗಳನ್ನು ಆರ್ದ್ರಗೊಳಿಸದ ಕಾವ್ಯ ಸಾರ್ಥಕಕಾವ್ಯವಾಗುವುದಿಲ್ಲ.

ಈ "ನವ್ಯತೆ" ಸಾಹಿತ್ಯಕ್ಷೇತ್ರ ಮಾತ್ರವಲ್ಲ, ಚಿತ್ರ ಶಿಲ್ಪ ಕ್ಷೇತ್ರಗಳಿಗೂ ಪ್ರವೇಶಿಸಿದೆ. ಅನೇಕವೇಳೆ ಅವು ಬಣ್ಣದ ಗೊಂದಲಗಳಂತೆ ರುಂಡ ಕೈಕಾಲುಗಳಿಲ್ಲದ ಮುಂಡದಂತೆ ಕಾಣುತ್ತವೆ. ಅವು ಮಹಾವಿದ್ವಾಂಸನ ಅರ್ಥಗ್ರಹಣಸಾಮರ್ಥ್ಯಕ್ಕೆ ಸವಾಲಿನಂತಿವೆ, ಅವನ ವಿದ್ವತ್ತನ್ನು ಮೂದಲಿಸುವಂತಿವೆ.

[1] a b c d e f
g h i j k l
m n o p q r
s t u v w
x y z



ಜನ ನೂತನ ಪಂಥವನ್ನು ಸ್ವೀಕರಿಸಲು ಸಿದ್ಧರಿಲ್ಲದಿರುವಾಗ ಅದು ಅಣಕಕ್ಕೆ ಗುರಿಯಾಗುವುದುಂಟು. ಮೊದಲ ಮಹಾಯುದ್ಧಕ್ಕೆ ಮುಂಚೆ ನಡೆದ ಕಲಾಪ್ರದರ್ಶನವೊಂದರಲ್ಲಿ "Sunset over the Adriatic" ಎಂಬ ಕಲಾಕೃತಿಯನ್ನು ಪ್ರದರ್ಶಿಸಲಾಗಿತ್ತಂತೆ. ಅದನ್ನು ನೋಡಿದ ನವ್ಯಕಲಾ ವಿಮರ್ಶಕರು ಅದರ ಸಾಂಕೇತಿಕತೆ ಸೂಚ್ಯತೆ ವರ್ಣಸಾಮರಸ್ಯ ಕಲಾಕೌಶಲ ಮೊದಲಾದ ಗುಣಗಳನ್ನು ಮನಸಾರೆ ಹೊಗಳಿದರಂತೆ. ಆದರೆ ಆ ಕೃತಿಯ ರಹಸ್ಯ ಬಯಲಾದಾಗ ಆ ನಿಶಿತಮತಿಗಳು ತಬ್ಬಿಬ್ಬಾದರಂತೆ. ಹಲವು ಡಬ್ಬಗಳಲ್ಲಿ ಬಗೆಬಗೆಯ ಬಣ್ಣಗಳನ್ನು ತುಂಬಿಟ್ಟು, ಕತ್ತೆಯೊಂದನ್ನು ಎಳೆತಂದು, ಅದರ ಬಾಲವನ್ನು ಡಬ್ಬಗಳಲ್ಲದ್ದಿ, ಭಿತ್ತಿಯ ಮೇಲೆ ಒದರುವಂತೆ ಏರ್ಪಾಡುಮಾಡಿ, ಅದರ ಫಲವಾಗಿ ಮೂಡಿದ ಚಿತ್ರಕ್ಕೆ ಮೇಲಣ ಹೆಸರನ್ನು ಕೊಡಲಾಯಿತಂತೆ. ರಹಸ್ಯ ಬಯಲಾಗುವ ತನಕ ಆ ಚಿತ್ರ ವಿಮರ್ಶಕರಿಗೆ ಅದ್ಭುತವಾಗಿ ತೋರಿತ್ತು.

ನವ್ಯಕಾವ್ಯದ ಗತಿಯೂ ಇಂಥದೇ ಆಗಿದೆ. ಅದರಲ್ಲಿ ಉತ್ತಮವಾದದ್ದು ಸಹ ಅನುಕೂಲ ವಾತಾವರಣವಿಲ್ಲದ್ದರಿಂದ, ಅದರ ಬಗೆಗೆ ಸಹೃದಯರಲ್ಲಿ ತಿಳಿವಳಿಕೆಯಿಲ್ಲದ್ದರಿಂದ ನಿರ್ಲಕ್ಷ್ಯಕ್ಕೆ ಗುರಿಯಾಗಿದೆ. ಹಳೆಯ ಪಂಥವೊಂದು ಇನ್ನೂ ಜನಪ್ರಿಯವಾಗಿರುವಾಗಲೆ ಬೆಳಕಿಗೆ ಬಂದ ನೂತನ ಪಂಥ ಜನಪ್ರಿಯತೆಯನ್ನು ಗಳಿಸುವುದು ಕಷ್ಟವಾಗುತ್ತದೆ. ಆ ಪಂಥ ಪ್ರವರ್ತಕರ ಕಣ್ಣಿನಲ್ಲಿ ಯಾವುವು ಸಲ್ಲಕ್ಷಣಗಳೆಂದು ತೋರುತ್ತವೆಯೋ ಅವು ಇತರರ ಕಣ್ಣಿನಲ್ಲಿ ದೋಷಗಳಾಗಿ ಪರಿಣಮಿಸುತ್ತವೆ. ಅದೇನೇ ಇರಲಿ, ಆಲೋಚನಾ ಸರಣಿಯಲ್ಲಿ, ಭಾವಾಭಿವ್ಯಕ್ತಿಯ ವಿಧಾನದಲ್ಲಿ, ಭಾಷೆಯ ಪ್ರಯೋಗದಲ್ಲಿ ಹೊಸತನ ಸ್ಪಷ್ಟವಾಗಿ ಗೋಚರಿಸುತ್ತದೆ. ಪದ್ಯಗದ್ಯಗಳ ನಡುವಣ ಕಮರಿಯನು ಕಿರಿದುಗೊಳಿಸಿದ್ದು ಈ ಪಂಥದ ದೊಡ್ಡ ಸಾಧನೆ. ಪದ್ಯದ ಭಾಷೆಯನ್ನು ಆಡುನುಡಿಯ ಹತ್ತಿರಕ್ಕೆ ತಂದದ್ದು ಅದರ ಮತ್ತೊಂದು ಮಹಾಸಾಧನೆ.[1] ಇದೆಲ್ಲವೂ ಹಿಂದೆ ಇರಲಿಲ್ಲವೆಂದಲ್ಲ. ವಚನ ದಾಸ ಸಾಹಿತ್ಯನಿರ್ಮಾಪಕರು ಈ ದಿಶೆಯಲ್ಲಿ ಸಾಕಷ್ಟು ಪ್ರಯೋಗ ನಡೆಸಿದ್ದರು; ವರ್ಡ್ಸ್‌ವರ್ತ್ ಕವಿಯ ಅಭಿಪ್ರಾಯವೂ ಇದೇ ಆಗಿತ್ತು; ಎಲಿಯಟ್ ಮೊದಲಾದ ನವ್ಯಪಂಥೀಯರ ಮತವೂ ಅದೇ ಆಗಿದೆ. ಹಳೆಯ ತಲೆಮಾರಿನ ಕವಿಗಳೂ ನವ್ಯತೆಯ ಧಾಟಿಯಲ್ಲಿ ಕವನಗಳನ್ನು ರಚಿಸಿರುವುದು ಗಮನಾರ್ಹವಾದ ವಿಷಯವಾಗಿದೆ.

ವಾಸ್ತವತೆ (Realism), ಸಹಜತೆ (Naturalism), ಅತಿವಾಸ್ತವತೆ (Surrealism), ಪ್ರತೀಕವಾದ (Symbolism), ಪ್ರತಿಮಾವಾದ (Imagism) ಮೊದಲಾದ ವಾದಗಳು ಪಾಶ್ಚಾತ್ಯರಲ್ಲಿ ಬಳಕೆಯಲ್ಲಿವೆ. ಅಷ್ಟೋ ಇಷ್ಟೋ ಅವು ನಮ್ಮ ಕಡೆಗೂ ಹರಿದು ಬರುತ್ತಿವೆ. ಆದರೆ ಅವು ಭಾರತೀಯ ಧ್ವನಿಯಾಗಿ ಪರಿವರ್ತನೆಗೊಂಡು ಬರಬೇಕು; ಭಾರತೀಯತ್ವವನ್ನೇ ಅಲುಗಾಡಿಸುವಂಥ ವಾದ ಎಷ್ಟೇ ಉತ್ತಮವಾದುದಾಗಿರಲಿ ಶ್ರೇಯಸ್ಕರವಲ್ಲ. ವಿದೇಶೀಯತೆ ದೇಶೀಯತೆಗೆ ಶರಣಾಗಿ ಬಂದಾಗ ಮಾತ್ರ ಅದು ಪುರಸ್ಕಾರಯೋಗ್ಯವಾಗುತ್ತದೆ. ಅಂಧಾನುಕರಣೆ ಕಟ್ಟಿಕೊಂಡ ಅಥವಾ ಕಟ್ಟಿಸಿಕೊಂಡ ಮಾಸೆಹಲ್ಲುಗಳಂತೆ, ನರೆಗೂದಲಿಗೆ ಹಾಕಿಕೊಂಡ ಬಣ್ಣದಂತೆ ಬಹುಕಾಲ ಬಾಳುವಂಥದೂ ಅಲ್ಲ, ಇದ್ದದ್ದರೊಡನೆ ಹೊಂದಿಕೊಳ್ಳುವಂಥದೂ ಅಲ್ಲ; ಅಷ್ಟೇ ಅಲ್ಲ, ಅದು ವಿಕಾರಕ್ಕೆಡೆಗೊಡುವುದೂ ಉಂಟು. ಒಟ್ಟಿನಲ್ಲಿ ಯಾವ ವಾದವೇ ಬರಲಿ, ಯಾವ ಪಂಥವೇ ಇರಲಿ ಅದು ಜನಾಂಗದ ಜಾಯಮಾನಕ್ಕನುಗುಣವಾಗಿರಬೇಕು ; ಆದರಲ್ಲಿ

[1] There neither is, nor can be any difference between the language of prose and that of metrical composition (Words worth),

Poets' mission in T. S. Eliot's phrase is " to purify the dialect of the tribe."

Poetry renews itself by adopting the very language of common man.

ನೆಲದ ಕಂಪು ಎರಚುತ್ತಿರಬೇಕು. ಆ ಪಂಥಗಳು ಹಲವಾರಿದ್ದರೂ, ಅವೆಲ್ಲವನ್ನೊಳಕೊಂಡ ಸಾಹಿತ್ಯ ಪಂಥ ಮಾತ್ರ ಒಂದೇ. 'ಏಕಂ ಸತ್ ವಿಪ್ರಾ ಬಹುಧಾ ವದಂತಿ.' ನಾವೆಲ್ಲರೂ ಏಕಮೇವಾದ್ವಿತೀಯವಾದ ಆ ಮಹಾಪಂಥಕ್ಕೆ ಸೇರಿದವರೆಂಬ ಭಾವನೆ ನಮ್ಮಲ್ಲಿ ಮೂಡುವಂತಾಗಲೆಂದು ಹಾರೈಸೋಣ. ಒಟ್ಟಿನ ಮೇಲೆ ಕನ್ನಡದಲ್ಲಿ ಭಾವಸಾಹಿತ್ಯ ತೃಪ್ತಿಕರವಾಗಿ, ಕೆಲವು ಸ್ತರಗಳಲ್ಲಿ ಶಿಖರಪ್ರಾಯವಾಗಿ, ಕೆಲಮಟ್ಟಗಾದರೂ ಜಗತ್ತಿನ ಶ್ರೇಷ್ಠ ಸಾಹಿತ್ಯಗಳೊಡನೆ ಹೊಯ್‌ಕಯ್ಯಾಗಿ ಆಶಾದಾಯಕವಾಗಿ ಬೆಳೆದಿದೆ, ಬೆಳೆಯುತ್ತಿದೆಯೆಂದು ಧೈರ್ಯವಾಗಿ ಹೇಳಬಹುದು.

ಒಂದು ವರ್ಷದ ಹಿಂದೆ 'ಜ್ಞಾನಗಂಗೋತ್ರಿ'ಯ ಕಚೇರಿಗೆ ಸಿಬ್ಬಂದಿವರ್ಗವನ್ನು ನೇಮಿಸುವ ಸಂದರ್ಭದಲ್ಲಿ ಸಂದರ್ಶನಕ್ಕಾಗಿ ಬಂದಿದ್ದ ತರುಣ ಕವಿಯೊಬ್ಬರನ್ನು ಕುರಿತು ಅವರ ಕವಿತೆಯ ಬಗೆಗೆ ಒಂದೆರಡು ಪ್ರಶ್ನೆ ಕೇಳಿದೆ; "ನೀವು ಸಾಕಷ್ಟು ಕವಿತೆಗಳನ್ನು ಬರೆದಿರುವುದು ಸಂತೋಷದ ಸಂಗತಿ. ನಿಮ್ಮದೊಂದು ಕವಿತೆಗೆ ಪ್ರಸ್ತಾರ ಹಾಕಿ ಅದರ ಛಂದಸ್ಸ್ವರೂಪವನ್ನು ವಿವರಿಸುವಿರಾ?" "ಅದೊಂದೂ ನನಗೆ ಗೊತ್ತಿಲ್ಲ, ಸಾರ್. ನನ್ನ ಮನದಲ್ಲಿದ್ದ ಭಾವತರಂಗಗಳು ಸ್ವೇಚ್ಛೆಯಾಗಿ ಭಾಷಾಮಾಧ್ಯಮದ ಮೂಲಕ ಹರಿದಿವೆ ಮಾತ್ರ ಗಣಯತಿಗಳ ವಿಷಯ ನನಗೆ ಗೊತ್ತಿಲ್ಲ" "ಕವಿತೆ ಬರೆಯುವವರಿಗೆ ಅವುಗಳ ಪರಿಚಯ ಅನಿವಾರ್ಯವಲ್ಲವೆ?'' "ಅನಿವಾರ್ಯವೇನಲ್ಲ". ಜನಪದ ಸಾಹಿತ್ಯವನ್ನು ಸೃಷ್ಟಿಸಿದ ಹಳ್ಳಿಯ ನಿರಕ್ಷರ ಕುಕ್ಷಿಗಳಿಗೆ ಛಂದಸ್ಸಿನ ಗಂಧವೇ ಇರಲಿಲ್ಲ, ನಿಜ. ಆದರೂ ಅವರ ಗೀತೆಗಳಲ್ಲಿ ಲಯಕ್ಕೆ ಪ್ರಧಾನ ಸ್ಥಾನವಿತ್ತು; ಆ ಲಯಜ್ಞಾನ ಗಣಗಳನ್ನು ನಿಯಂತ್ರಿಸುತ್ತಿತ್ತು. ಸ್ವಚ್ಛಂದ ಛಂದವೆಂದ ಮಾತ್ರಕ್ಕೆ ಅದು ಸಂಪೂರ್ಣವಾಗಿ ಛಂದೋನಿಯಮಗಳಿಂದ ಮುಕ್ತವಾಗಿರಬೇಕೆಂದರ್ಥವಲ್ಲ. ಅನಿಯತವಾದ ಗಣಗಳಿಂದ ಭಾವಾರ್ಥಾನುಸಾರಿಯಾದ ಲಯದಿಂದ ಅದು ನಿಯಂತ್ರಿತವಾಗಿರುತ್ತದೆ. ಉತ್ತಮವಾದ ಗದ್ಯದ ಲಕ್ಷಣವೇ ಇದು. ಇದರಿಂದ ಸ್ವಚ್ಛಂದ ಛಂದ ಗದ್ಯಕ್ಕೆ ಹತ್ತಿರವಾಗಿರುತ್ತದೆಂದು ಹೇಳಬಹುದಾಗಿದೆ.

ಇಷ್ಟಾದರೂ ಗದ್ಯಸಾಹಿತ್ಯ ಕೆಲವು ಕವಿಮಿತ್ರರ ಅವಜ್ಞೆಗೆ ಗುರಿಯಾಗಿರುವುದು ಖೇದದ ಸಂಗತಿಯಾಗಿದೆ. ಪಂಕ್ತಿಗೊಂದು ಸ್ವರ ಅಥವಾ ಎರಡು ಮೂರು ಪದ, ಇಂಥ ನಾಲ್ಕಾರು ಪಂಕ್ತಿಗಳನ್ನು ಬರೆದು, ಅದಕ್ಕೆ ಕವಿತೆಯೆಂದು ಹಣೆ ಹೆಸರಿಟ್ಟಾಗ, ಗದ್ಯವನ್ನು ಬರೆದು ಸಾಲುಗಳನ್ನು ಮುರಿದು ಪದ್ಯವೆಂದು ಕರೆದಾಗ ದೊರೆಯುವ ಗೌರವ ಸಾಕಷ್ಟು ಭಾವಾಲೋಚನೆಗಳನ್ನೊಳಗೊಂಡು ಪುಟದ ತುಂಬ ವ್ಯಾಪಿಸುವ ಗದ್ಯಕ್ಕಿಲ್ಲ. ಪದ್ಯದ ಭಾಷೆಗೆ ಗದ್ಯದಭಾಷೆಗೆ ಹತ್ತಿರವಾಗಿರಬೇಕೆನ್ನುವಾಗಲೇ ಗದ್ಯದ ಹಿರಿಮೆಯನ್ನು ಒಪ್ಪಿಕೊಂಡಂತಾಗಿದೆ. ಹಿಂದಿನಂತೆ ಇಂದೂ ಕೂಡ ಗದ್ಯ ಕವಿಗಳಿಗೆ ನಿಕಷಪ್ರಾಯವಾಗಿದೆ. ಭಾವಕ್ಷೇತ್ರಕ್ಕಿಂತ ವಿಚಾರಕ್ಷೇತ್ರ ಮೇಲುಗೈಯಾದಂತೆಲ್ಲ, ಸಾಮಾಜಿಕ ಜೀವನ ಜಟಿಲವಾದಂತೆಲ್ಲ, ಲೋಕಜೀವನ ಸಂಕೀರ್ಣಗೊಂಡಂತೆಲ್ಲ, ಜ್ಞಾನವಿಜ್ಞಾನ ಕ್ಷೇತ್ರಗಳ ಸೀಮಾರೇಖೆಗಳು ಮುನ್‌ಚಾಚಿದಂತೆಲ್ಲ ಪದ್ಯ ಗದ್ಯಕ್ಕೆ ಶರಣಾಗಲೇ ಬೇಕು; ತನ್ನ ಸಾರ್ವಭೌಮ ಪದವಿಯನ್ನು ಬಿಟ್ಟು ಕೊಡಲೇಬೇಕು. ಯಾವ ಸಾಹಿತ್ಯದ ಇತಿಹಾಸದ ಕಡೆಗೆ ಕಣ್ಣು ಹಾಯಿಸಿದರೂ ಮಹಾಕಾವ್ಯ ಮಹಾಕಾದಂಬರಿಗೆ, ಭಾವಗೀತೆ ಸಣ್ಣಕತೆಗೆ ಪದ್ಯನಾಟಕ ಗದ್ಯನಾಟಕಕ್ಕೆ ಜಾಗ ಬಿಟ್ಟುಕೊಟ್ಟದ್ದನ್ನು ಗಮನಿಸಬಹುದಾಗಿದೆ. ಭಾವಸಾಹಿತ್ಯಕ್ಕೆ ನಿಜವಾದ ಮಾತು ವಿಚಾರಸಾಹಿತ್ಯಕ್ಕೆ ನೂರ್ಮಡಿ ಸಾಸಿರ್ಮಡಿಯಾಗಿ ಅನ್ವಯವಾಗಲೇಬೇಕು. ಬಹು ಸಂಕೀರ್ಣವಾದ ಆಧುನಿಕ ಜಗತ್ತಿನ ವ್ಯವಹಾರಗಳನ್ನು ಪೂರೈಸಬೇಕಾದರೆ, ಇಂದಿನ ಮಾನವನ ಮಿಲಿಯಗಟ್ಟಲೆ ಆಶೆ ಆಕಾಂಕ್ಷೆಗಳನ್ನು ಬೇಕುಬೇಡಗಳನ್ನು ನಿತ್ಯ ನೂತನವಾದ ಅನಿಸಿಕೆಗಳನ್ನು ಸಮಗ್ರವಾಗಿ ಸಂಪೂರ್ಣವಾಗಿ ಪ್ರತಿಬಿಂಬಿಸಬೇಕಾದರೆ ಗದ್ಯ ವಿರಾಡ್ರೂಪಿಯಾಗಬೇಕು; ಜ್ಞಾನ ವಿಜ್ಞಾನಗಳ ಅಭಿವ್ಯಕ್ತಿಗೆ, ಸೂಕ್ಷ್ಮಾತಿಸೂಕ್ಷ್ಮವೂ ಅತ್ಯಂತ ಗಹನವೂ ಅತ್ಯಂತ ಜಟಿಲವೂ ಆದ ವಿಚಾರಗಳ ಪ್ರಕಾಶನಕ್ಕೆ ಅದು ಸಶಕ್ತ ಮಾಧ್ಯಮವಾಗಬೇಕು. ಅದು ಒಂದು ಜನಾಂಗದ ಸೃಜನ ಶಕ್ತಿಯನ್ನೂ ಬುದ್ಧಿ ಸಾಮರ್ಥ್ಯವನ್ನೂ ಅಳೆಯುವ ಮಾನ ದಂಡವಾಗಿದೆ. ಅದರ ಗುಣದೋಷಗಳು ಬಲಾಬಲಗಳು ಎತ್ತರಬಿತ್ತರಗಳು



ಆಯೂ ಜನಾಂಗದ ಗುಣದೋಷಗಳನ್ನವಲಂಬಿಸಿವೆ. ನಮ್ಮ ದಿನನಿತ್ಯದ ವ್ಯವಹಾರಗಳೆಲ್ಲ ಸಂಪೂರ್ಣವಾಗಿ ಬೇಬಾಕಿಯಿಲ್ಲದೆ ಏಕಮಾತ್ರ ಮಾಧ್ಯಮವಾದ ಗದ್ಯದಲ್ಲಿಯೇ ನಡೆಯಬೇಕಾಗಿದೆ: ಗಂಡ ಹೆಂಡಿರ ಸರಸ ಸಲ್ಲಾಪದಿಂದ ಹಿಡಿದು ರಾಜಕೀಯ ಮುತ್ಸದ್ದಿಗಳ ಚರ್ಚೆಯತನಕ, ಮಕ್ಕಳ ಶಿಕ್ಷಣದಿಂದ ಹಿಡಿದು ಜ್ಞಾನವಿಜ್ಞಾನ ಕ್ಷೇತ್ರಗಳ ಸಂಶೋಧನೆಯ ತನಕ, ಗ್ರಾಮ ಪಂಚಾಯತಿಯ ಕಾರ್ಯಕಲಾಪಗಳಿಂದ ಹಿಡಿದು ಶಾಸನ ಸಭೆಯ ಕಾರ್ಯಕಲಾಪಗಳ ತನಕ ಪಂಡಿತ ಪಾಮರ ಭೇದವಿಲ್ಲದೆ ಪ್ರತಿಯೊಂದು ವ್ಯವಹಾರಕ್ಕೂ ಗದ್ಯವೇ ಪ್ರಬಲ ಸಾಧನವಾಗಬೇಕಾಗಿದೆ. ರಾಜಕೀಯ ತಜ್ಞರ ಮತ್ತು ವಾಗ್ಮಿಗಳ ಬ್ರಹ್ಮಾಸ್ತ್ರವೆಂದರೆ ಗದ್ಯ. ದಾರ್ಶನಿಕರಾಗಲಿ ಕಾನೂನುಪಂಡಿತರಾಗಲಿ ಇದನ್ನೇ ಮರೆಹೋಗಬೇಕು. ಶ್ರೀಸಾಮಾನ್ಯನಿಗೆ ಆಧುನಿಕ ಜಗತ್ತನ್ನು ಪರಿಚಯಿಸಿಕೊಡುವ ವರದ ಶಕ್ತಿಯೇ ಗದ್ಯ. ಇದು ಭಾಷೆಯ ಸಂಪ್ತಶಕ್ತಿಗಳನ್ನು ಹೊರಗೆಳೆಯುವ ಮಾಂತ್ರಿಕ ಶಕ್ತಿಯಾಗಿದೆ. ವಿಶ್ವದ ಹಲವಾರು ಕಡೆಗಳಿಂದ ದಿನದಿನವೂ ಅಲೆಯಲೆಯಾಗಿ ಅಲೆದು ಬರುತ್ತಿರುವ ಹೊಸ ಭಾವನೆಗಳಿಗೆ ಕಲ್ಪನೆಗಳಿಗೆ ಆಲೋಚನೆಗಳಿಗೆ ವಿಚಾರಧಾರೆಗೆ ರೂಪನೀಡುವ ಕರ್ತವ್ಯಗದ್ಯದ್ದು. ಆದ್ದರಿಂದ ಅದು ದಿನಬೆಳಗಾದರೆ ಹೊಸ ಪದಗಳನ್ನು ಟಂಕಿಸಬೇಕಾಗುತ್ತದೆ, ನೂತನ ಪದಗುಚ್ಛಗಳನ್ನು ಸೃಷ್ಟಿಸಬೇಕಾಗುತ್ತದೆ, ಆವರಣಕ್ಕನುಗುಣವಾಗಿ ಹೊಸ ರೂಪಧಾರಣೆ ಮಾಡಬೇಕಾಗುತ್ತದೆ, ಹಲವಾರು ಒರೆಗಲ್ಲುಗಳಲ್ಲಿ ಉಜ್ಜಿ, ಅನೇಕ ಮತಿಗಳಲ್ಲಿ ರಸನೆಗಳಲ್ಲಿ ಸಾಣೆಗೊಂಡು ಉಜ್ವಲಗೊಳ್ಳಬೇಕಾಗಿದೆ. ಪದ್ಯಕ್ಕಿಂತ ಗದ್ಯ ಹೆಚ್ಚು ವ್ಯಾಪಕವಾಗಬೇಕಾಗಿದೆ, ಶೀಘ್ರಗಾಮಿಯಾಗಬೇಕಾಗಿದೆ, ದಿನದಿನವೂ ಹೊಸದಾಗಬೇಕಾಗಿದೆ, ಮನೆಮನೆಗಳಲ್ಲಿ ಕೇರಿಕೇರಿಗಳಲ್ಲಿ ಹೊಲಗದ್ದೆಗಳಲ್ಲಿ ಕಾರ್ಖಾನೆಗಳಲ್ಲಿ ಶಾಲಾ ಕಾಲೇಜುಗಳಲ್ಲಿ ಆಡಳಿತ ಹಾಗೂ ಪತ್ರಿಕಾ ಕಚೇರಿಗಳಲ್ಲಿ ಸಭೆ ಸಮಾರಂಭಗಳಲ್ಲಿ ಶಾಸನ ಸಭೆಗಳಲ್ಲಿ ಸಂಶೋಧನ ಸಂಸ್ಥೆಗಳಲ್ಲಿ ಸರ್ವತ್ರ ಮೆರೆದಾಡಬೇಕಾಗಿದೆ; ಆಧುನಿಕ ಯುಗದ ಪ್ರಜಾಸತ್ತೆಯಲ್ಲಿ ಇದಕ್ಕೇ ಮಹಾಪ್ರಭುತ್ವ ಸಂಲಭಿಸಬೇಕಾಗಿದೆ; ರಾಷ್ಟ್ರಪ್ರಗತಿಯ ಮಾಪಕವಾಗಬೇಕಾಗಿದೆ ಇದು. ಅಷ್ಟೇ ಅಲ್ಲ, ಅದು ಪದ್ಯವನ್ನು ಸಹ ಕೈಹಿಡಿದು ನಡೆಸಿಕೊಂಡು ಹೋಗಬೇಕಾಗಿದೆ; ಅದಕ್ಕೆ ಹೊಸ ಸ್ಫೂರ್ತಿಯನ್ನು ಕೊಡಬೇಕಾಗಿದೆ; ಹೊಸ ಭಾವಾನುಭವ ವಿಚಾರಗಳನ್ನಾಡಬೇಕಾಗಿದೆ.

ಕನ್ನಡ ಗದ್ಯಕ್ಕೆ ಸಾವಿರಾರು ವರ್ಷಗಳ ಇತಿಹಾಸವಿದೆ: ಕನಿಷ್ಠಪಕ್ಷ ಎರಡೂವರೆ ಸಾವಿರ ವರ್ಷಗಳಿಂದಾದರೂ ಅದು ಕನ್ನಡಿಗರ ನಾಲಗೆಯಲ್ಲಿ ಕುಣಿಯುತ್ತಿದೆ, ಅವರ ಅಭೀಷ್ಟವನ್ನು ನೆರವೇರಿಸುತ್ತಿದೆ; ಅವರ ಬಾಳನ್ನು ತಿದ್ದುತ್ತಿದೆ. ಒಂದೂವರೆ ಸಾವಿರ ವರ್ಷಗಳಿಂದ, ಆಂಗ್ಲರ ಆಳ್ವಿಕೆಯ ಕಾಲ ವಿನಾ, ಅದು ಆಡಳಿತ ಭಾಷೆಯಾಗಿ ಮೆರೆದಿದೆ. ಇದಕ್ಕೆ ಶಾಸನಗಳು ಸಾಕ್ಷಿಯಾಗಿವೆ; ವಡ್ಡಾರಾಧನೆ ಧರ್ಮಾಮೃತ ಹರಿಹರನ ಕೃತಿಗಳಲ್ಲಿ ಶರಣರ ವಚನಗಳಲ್ಲಿ ಬರುವ ಗದ್ಯವೇ ಪ್ರಮಾಣವಾಗಿದೆ. ಹಳಗನ್ನಡ ಕಾವ್ಯಗಳಲ್ಲಿ ಬರುವ ಗದ್ಯದಲ್ಲಿ ಕನ್ನಡತನ ನಾಚಿಕೆಯಿಂದ ಇಣುಕುತ್ತಿರುವುದು ನಿಜ. ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದಿಂದೀಚೆಗೆ ಅದು ಮತ್ತೆ ತಲೆಯೆತ್ತಿ ವಿಜೃಂಭಿಸುತ್ತಿರುವುದು ಸರ್ವವೇದ್ಯವಾದ ಸಂಗತಿ. ಲೋಕ ವ್ಯವಹಾರಗಳು ವಿಸ್ತೃತವಾದಂತೆಲ್ಲ, ವಿಚಾರಶಕ್ತಿ ಪ್ರಮುಖವಾದಂತೆಲ್ಲ, ಚಿಂತನ ಮಂಥನಗಳು ಪ್ರಜ್ವಲಿಸಿದಂತೆಲ್ಲ, ಅಧ್ಯಯನ ಸಂಶೋಧನೆಗಳು ಪ್ರಬಲಿಸಿದಂತೆಲ್ಲ, ಅನುಭವಾಲೋಚನೆಗಳ ಸಂಘರ್ಷಣೆ ತೀಕ್ಷ್ಣವಾದಂತೆಲ್ಲ, ಒಟ್ಟಿನಲ್ಲಿ ಜನಾಂಗ ದೊಡ್ಡದಾದಂತೆಲ್ಲ ಕನ್ನಡವೂ ನಾನಾ ಮುಖವಾಗಿ ಬೆಳೆಯುತ್ತಿದೆ. ಹಿಂದೆಂದೂ ಕಂಡರಿಯದಿದ್ದ ಪ್ರಶ್ನೆಗಳೂ ಸಮಸ್ಯೆಗಳೂ ಕಣೆಗೆದರಿ ಮಾನವಮತಿಯನ್ನು ನಡುಗಿಸಿವೆ. ಗತಕಾಲದ ಕಿಟಕಿಯನ್ನು ತೆರೆಯಲು ಹವಣಿಸುತ್ತಿರುವ ಇತಿಹಾಸಜ್ಞರು, ನಿಸರ್ಗದ ರಹಸ್ಯಗಳನ್ನು ಭೇದಿಸಲು ಯತ್ನಿಸುತ್ತಿರುವ ವಿಜ್ಞಾನಿಗಳು, ಮಾನವ ಜೀವನದ ಮೌಲ್ಯಗಳ ಚಿಂತನೆಯಲ್ಲಿ ನಿರತರಾಗಿರುವ ದರ್ಶನಿಕರು, ಆಜನ್ಮಸಿದ್ಧ ಹಕ್ಕುಗಳ ಪ್ರತಿಪಾದನೆಯಲ್ಲಿ ಹಾಗೂ ಸಾಧನೆಯಲ್ಲಿ ಆಸಕ್ತರಾಗಿರುವ

ರಾಜನೀತಿಜ್ಞರು, ಸಾಮಾಜಿಕ - ಆರ್ಥಿಕ - ನೈತಿಕ - ಸಾಂಸ್ಕೃತಿಕ ಸಮಸ್ಯೆಗಳ ವಿಶ್ಲೇಷಣೆಯಲ್ಲಿ ತೊಡಗಿರುವ ವಿಚಾರವಂತಿಗಳು, ಕ್ಷಿತಿಜಗಳನ್ನು ವಿಸ್ತರಿಸುವ, ನೂತನ ಜಗತ್ತುಗಳನ್ನು ಪ್ರವೇಶಿಸುತ್ತಿರುವ ಕವಿ ವಿಜ್ಞಾನಿಗಳು, ಜಗತ್ತಿನ ಕ್ಷಣಕ್ಷಣದ ವಿದ್ಯಮಾನಗಳನ್ನೆಲ್ಲ ಅಂಗೈಯಲ್ಲಿ ತೋರಿಸುತ್ತ ವಿಚಾರವಂತಿಗಳಿಗೆ ಆಹಾರವನ್ನೂಡುತ್ತಿರುವ ಪತ್ರಿಕಾಕರ್ತರು—ಒಟ್ಟಿನಲ್ಲಿ ಕಲಿತವರ, ಕಲಿಯದವರ, ಸರ್ವಾಭಿರುಚಿಯ, ಸಕಲ ದರ್ಜೆಯ ಜನರ ಬಹುಮುಖವಾದ ಚಟುವಟಿಕೆಗಳಿಂದ ಸ್ಪಂದಿಸುತ್ತಿರುವ ಬಾಳಿಗೆ, ಆ ಬಾಳನ್ನು ರೂಪಿಸುತ್ತಿರುವ ಎಲ್ಲ ಸ್ಪಂದನಗಳಿಗೆ ಗದ್ಯ ಮಾಧ್ಯಮವಾಗುತ್ತಿದೆ, ನಾನಾ ಮುಖವಾಗಿ ನಾನಾ ಆಯಾಮಗಳಲ್ಲಿ ವಿಸ್ತಾರವಾಗುತ್ತಿದೆ; ಸ್ವಾತಂತ್ರ್ಯನಂತರ ಹಾಗೂ ಭಾಷಾವಾರು ಪ್ರಾಂತ್ಯಗಳ ವಿಂಗಡಣೆಯಾದನಂತರ ಕನ್ನಡ ಗದ್ಯ ವ್ಯಾಪಕವಾಗಿ ಬೆಳೆಯುತ್ತಿದೆ, ತನ್ನತನವನ್ನು ಕಂಡುಕೊಳ್ಳುತ್ತಿದೆ.

ಕನ್ನಡ ಗದ್ಯದ ಬೆಳೆವಣಿಗೆ ಶಿಕ್ಷಣ ಮಾಧ್ಯಮವನ್ನವಲಂಬಿಸಿದೆ; ಶಿಕ್ಷಣ ಮಾಧ್ಯಮದ ಯಶಸ್ಸು ಆಡಳಿತ ಮಾಧ್ಯಮವನ್ನವಲಂಬಿಸಿದೆ; ಆಡಳಿತ ಮಾಧ್ಯಮದ ಜಾರೀಕರಣ ಹಿಡಿಮಂದಿ ಅಧಿಕಾರಿಗಳ ಮನೋಧರ್ಮವನ್ನವಲಂಬಿಸಿದೆ. ಬೂರ್ಜ್ವಾ ಭಾವನೆಯಿಂದಾಗಲಿ, ಆಂಗ್ಲರ ಪ್ರಸಾದದಿಂದೊದಗಿರುವ ಗುಲಾಮೀ ಭಾವನೆಯಿಂದಾಗಲಿ ನಾವಿನ್ನೂ ಮುಕ್ತರಾಗಿಲ್ಲ. ಪರಭಾಷೆಯ ಆಡಳಿತ ಮಾಧ್ಯಮ ಪ್ರಜಾಸತ್ತೆಯ ಮುಖಕ್ಕೆಸೆದ ಅವಹೇಳನವಾಗಿದೆ; ಪರಭಾಷಾ ಶಿಕ್ಷಣ ಮಾಧ್ಯಮದ ಮುಂದುವರಿಕೆ ಶಿಕ್ಷಣ ಕ್ಷೇತ್ರದ ಅಸ್ತಿತ್ವವನ್ನೆ ಪ್ರಶ್ನಿಸುವ, ಅದರ ವಿಫಲತೆಯನ್ನು ಸಾರುವ ಅನಿಷ್ಟವಾಗಿದೆ. ಜಗತ್ತಿನ ಯಾವ ಸ್ವತಂತ್ರ ರಾಷ್ಟ್ರದಲ್ಲಿಯೂ ಇಂಥ ಶೋಚನೀಯ ಪರಿಸ್ಥಿತಿಯಿಲ್ಲ. ಗುರುಶಿಷ್ಯರಿಗೆ ಹಾಗೂ ಮಂತ್ರಿ-ಪ್ರಜೆಗಳಿಗೆ ಹೃದಯ ಸಂವಾದವಿಲ್ಲದಾಗ ಶಿಷ್ಯನ ಏಳ್ಗೆಯಾಗಲಿ ಪ್ರಜೆಯ ಕ್ಷೇಮಸಾಧನೆಯಾಗಲಿ ಸಾಧ್ಯವಾಗುವುದಿಲ್ಲ. ಈ ಹೃದಯ ಸಂವಾದ ಸ್ವಭಾಷೆಯ ಮೂಲಕ ಸಾಧ್ಯ. ದೇಶ ಭಾಷೆಯಲ್ಲಿ ಪಾಠ ಕಲಿಯುವುದೆಂತು ವಿದ್ಯಾರ್ಥಿಯ ಹಕ್ಕೋ, ಅಂತೆಯೇ ಆ ಮೂಲಕ ನಮಗೆ ಆಡಳಿತ ಬೇಕೆಂದು ಕೇಳುವುದೂ ಪ್ರಜೆಯ ಹಕ್ಕು. ಕನ್ನಡ ಭಾಷೆಯ ಶ್ರೀಮಂತತೆ ಎಂತು ಶಿಕ್ಷಣ ಮಾಧ್ಯಮದ ಸಾಧ್ಯತೆಯನ್ನು ಘೋಷಿಸುತ್ತದೆಯೊ ಅಂತೆಯೇ ಸಹಸ್ರ ಸಹಸ್ರ ಶಾಸನಗಳು ಆಡಳಿತ ಮಾಧ್ಯಮದ ಸುಲಭತೆಯನ್ನು ಸಾರಿ ಹೇಳುತ್ತಿವೆ. ರಾಷ್ಟ್ರ ಪ್ರಗತಿಯ ಕಣ್ಣಲೆಗಳಂತಿರುವ ಈ ಎರಡು ಕ್ಷೇತ್ರಗಳಲ್ಲಿ ಕನ್ನಡ ತಾನೇತಾನಾದಾಗ ಗದ್ಯ ವಿರಾಟ್ ರೂಪವನ್ನು ತಾಳುತ್ತದೆ. ತನ್ನ ಮಾಟ ಧಾಟಿ ಲಯ ಧ್ವನಿ ಸ್ವರೂಪಗಳಿಗನುಗುಣವಾಗಿ ಜಗತ್ತಿನ ಯಾವ ಭಾಷೆಗಳಿಂದಾದರೂ ಪದ ಪದಗುಚ್ಛಗಳವಡಿಸಿಕೊಳ್ಳುವ ವ್ಯಾಪಕ ಶಕ್ತಿಯನ್ನು ಪಡೆದುಕೊಂಡಾಗ, ಅವುಗಳನ್ನು ಜೀರ್ಣಿಸಿಕೊಳ್ಳುವಂಥ ಅಗ್ನಿಶಕ್ತಿಯನ್ನು ಹೆಚ್ಚಿಸಿಕೊಂಡಾಗ ಅದಕ್ಕೆ ಸರ್ವಶಕ್ತಿಯೊದಗುತ್ತದೆ. ಗದ್ಯದ ಭಾಷೆ ಬೆಳೆಯದಿದ್ದರೆ ಸ್ಪಷ್ಟಾಲೋಚನೆ ಅಸಾಧ್ಯ, ಆಲೋಚನೆ ಶೂನ್ಯವಾದರೆ ಭಾಷೆಯ ಬೆಳೆವಣಿಗೆ ಅಸಾಧ್ಯ, ಅಂತೆಯೇ ಇವೆರಡೂ ಪರಸ್ಪರಾವಲಂಬಿ ಎಂಬುದನ್ನು ಯಾರೂ ಮರೆಯುವಂತಿಲ್ಲ.

ಕನ್ನಡ ಗದ್ಯವನ್ನು ಸರ್ವಾಂಗಸುಂದರವಾಗಿ ಬೆಳೆಸುವ ದೃಷ್ಟಿಯಿಂದ ಮತ್ತೊಂದು ಕಾರ್ಯ ಅತ್ಯಗತ್ಯವಾಗಿ ಆಗಬೇಕಾಗಿದೆ. ಪದ್ಯದಲ್ಲಾಗಲಿ ಗದ್ಯದಲ್ಲಾಗಲಿ ಮಣ್ಣಿನ ವಾಸನೆ ಹೊಡೆಯಬೇಕಾದರೆ ಇತರ ಪರಿಕರಗಳ ಜತೆಗೆ ದೇಸಿನುಡಿಗಟ್ಟನ್ನು ಹೆಚ್ಚುಹೆಚ್ಚಾಗಿ ಬಳಸಬೇಕಾಗುತ್ತದೆ. ಆಡುಮಾತನ್ನು ಗ್ರಾಂಥಿಕ ಭಾಷೆಯಲ್ಲಿ ಅಳವಡಿಸಿ ಕೊಂಡದ್ದಾದರೆ ಭಾಷೆಗೆ ಬಿಗಿ ಬನಿ ಬಂಡ ಬೆಡಗು ಬಿನ್ನಾಣಗಳು ತಾವಾಗಿಯೇ ಒದಗಿ, ಅದು ಸದಾ ನಿತ್ಯನೂತನವಾಗಿರುತ್ತದೆ, ಜೀವಂತವಾಗಿರುತ್ತದೆ. ಆಡುಮಾತಿನ ಪೊಗರು ಹೊಳಪು ಕೂರ್ಪು ಕೆಚ್ಚು ಜೀವಂತಿಕೆಗಳು ಗ್ರಾಂಥಿಕ ಭಾಷೆಗಿರುವುದಿಲ್ಲ. ಒಂದು ಮಾತು ಅಥವಾ ಒಂದು ನುಡಿಗಟ್ಟು ಬಳಕೆಯಿಂದ ಜೀವಂತವಾಗುತ್ತದೆಯೋ ಹೊರತು ಹೊಳಪೇರುತ್ತದೆಯೋ ಹೊರತು ಸವೆಯುವುದಿಲ್ಲ; ಅದು ಹಲವು ನಾಲಿಗೆಗಳಲ್ಲಿ ಕುಣಿದಷ್ಟೂ ಕೂರ್ಪು ಸಮನಿಸುತ್ತದೆ; ಅದೇ ಮಾತು ಗ್ರಾಂಥಿಕ ಭಾಷೆಯಲ್ಲಿ ಸೇರಿಕೊಂಡು ಆಡುಮಾತಿನಿಂದ ಹೊರತಾದರೆ ನಿರ್ಜೀವವಾಗುತ್ತದೆ, ಕಾಂತಿಹೀನವಾಗುತ್ತದೆ. ಶೈಲಿಯಲ್ಲಿ ದೇಶಿಯನ್ನು ಸಾಧಿಸಬೇಕಾದರೆ ಆಡುಮಾತಿನ ಹಸಾದ ಅತ್ಯಾವಶ್ಯಕ. ಇದಕ್ಕಾಗಿ ಹಳ್ಳಿಗಳಲ್ಲಿ ಬಳಕೆಯಲ್ಲಿರುವ, ಯಾವ ಪಂಡಿತಕೋಶದಲ್ಲಿಯೂ ಸಿಗದ ಮಾತುಗಳನ್ನು ಸಂಗ್ರಹಿಸಬೇಕು, ವಿದ್ಯಾಭ್ಯಾಸ ಸಾರ್ವತ್ರಿಕವಾದಂತೆಲ್ಲ ಈ ಮಾತುಗಳು ನಾಚಿಕೊಂಡು ಮರೆಯಾಗುತ್ತವೆ. ಹಣ ಕಳೆದುಹೋದರೆ ಅದು ಮತ್ತೆ ಸಿಗಬಹುದು, ಸಿಗದಿದ್ದರೂ ಬಾಧಕವಿಲ್ಲ, ಸಂಪಾದಿಸಬಹುದು. ಆದರೆ ಒಮ್ಮೆ ಮರೆಯಾದ ಮಾತು ಎಂದೆಂದಿಗೂ ಮರೆತಂತೆಯೆ. ಅದು ದುಡ್ಡುಕೊಟ್ಟರೆ ಸಿಗುವಂಥದಲ್ಲ. ಒಂದೊಂದು ಮಾತಿಗೆ ಬೆಲೆಕಟ್ಟೋಣವೂ ಸಾಧ್ಯವಿಲ್ಲ. ಈಗ ಬಳಕೆಯಲ್ಲಿರುವ ಸಹಸ್ರ ಸಹಸ್ರ ಪದಗಳನ್ನು ಸಂಗ್ರಹಿಸಿ ಪ್ರಕಟಿಸುವುದಾದರೆ ಅದು ಕಿಟ್ಟೆಲ್ ಕೋಶದಷ್ಟೇ ಗಾತ್ರವಾಗುತ್ತದೆ. ಆ ಅಕ್ಷಯನಿಧಿ ಸಾಹಿತಿಗಳ ಕೈಗೆ ದೊರೆತಾಗ ಕನ್ನಡ ಗದ್ಯ ಕಲ್ಪನೆಗೆ ಮೀರಿ ಪರಿಪುಷ್ಟಗೊಳ್ಳುತ್ತದೆ. ಇದಕ್ಕಾಗಿ ವಿಶ್ವವಿದ್ಯಾ ನಿಲಯಂಗಳು, ಪರಿಷತ್ತು ಹಾಗೂ ಕನ್ನಡ ಸಂಘಗಳು ಪರಸ್ಪರ ಸಹಕರಿಸಿ ಈ ಅಮೂಲ್ಯ ನಿಧಿಯನ್ನುಳಿಸಿಕೊಳ್ಳಬೇಕಾಗಿದೆ.

ಈ ಸಂದರ್ಭದಲ್ಲಿ ಕನ್ನಡನುಡಿಗೆ ಹಾಗೂ ಕರ್ಣಾಟಕದ ಕಲೆಗಳಿಗೆ ಇಂದಿನ ಮೈಸೂರು ಸರ್ಕಾರ ನೀಡುತ್ತಿರುವ ಪ್ರೋತ್ಸಾಹವನ್ನು ನೆನೆಯದಿದ್ದರೆ ಕರ್ತವ್ಯಚ್ಯುತಿಯ ಆರೋಪಕ್ಕೆ ಗುರಿಯಾಗಬೇಕಾದೀತು. ಶ್ರೀ ವೀರೇಂದ್ರ ಸಂಪುಟದ ಅರ್ಥ ಸಚಿವರೂ ವಿದ್ಯಾಸಚಿವರೂ ಸ್ವಯಂ ಕಲಾಭಿಜ್ಞರಾದದ್ದರಿಂದ, ಕನ್ನಡ ನುಡಿಯ ಮಹತ್ತನ್ನು ಬಲ್ಲವರಾದ್ದರಿಂದ ಕನ್ನಡ ಭಾಷಾಸಾಹಿತ್ಯ ಸಂಬಂಧವಾದ ಯೋಜನೆಗಳಿಗೆ ಕೈಕೊಕ್ಕರಿಸದೆ ಉದಾರವಾಗಿ ದ್ರವ್ಯಸಹಾಯ ನೀಡುತ್ತಿದ್ದಾರೆ. ಇಂಥ ಯೋಜನೆಗಳಿಗೆ ಅವರೆಂದೂ ಇಲ್ಲೆ ಎಂದವರಲ್ಲ. ಒಂದುಕಾಲುಕೋಟಿ ರೂಪಾಯಿ ವೆಚ್ಚತಗಲುವ ಕನ್ನಡ ವಿಶ್ವಕೋಶದ ಬೃಹದ್ಯೋಜನೆ ಹಾಗೂ ಇಪ್ಪತ್ತೈದು ಲಕ್ಷ ವೆಚ್ಚದ ಜ್ಞಾನ ಗಂಗೋತ್ರಿಗೆ ಮಂಜೂರಾತಿ ನೀಡಿದೆ. ದುಡ್ಡಿನ ಅಭಾವದಿಂದಾಗಿ ವಿಶ್ವವಿದ್ಯಾನಿಲಯಗಳ ಪ್ರಕಟಣ ಕಾರ್ಯ ಕುಂಠಿತವಾಗಿಲ್ಲ. ಸಂಗೀತ ನಾಟಕಅಕಾಡೆಮಿ, ಸಾಹಿತ್ಯ ಅಕಾಡೆಮಿ, ಕನ್ನಡ ಸಾಹಿತ್ಯ ಪರಿಷತ್ತು ಮೊದಲಾದ ಸಾಂಸ್ಕೃತಿಕ ಸಂಸ್ಥೆಗಳಿಗೆ ಯಾವ ಕೊಕ್ಕೆಯೂ ಇಲ್ಲದೆ ಧನಸಹಾಯವನ್ನು ನೀಡುತ್ತಿದೆ. ಮೇಲಾಗಿ, ಅನೇಕ ಸಾಹಿತಿಗಳಿಗೆ ಹಾಗೂ ಕಲಾವಿದರಿಗೆ ಜೀವಾವಧಿ ವೇತನವನ್ನು ನೀಡುತ್ತಿದೆ. ಈ ಜೀವನಾಂಶ ಯೋಜನೆ ಇನ್ನೂ ವಿಸ್ತೃತವಾಗುವ ಭರವಸೆಯಿದೆ. ಪರಿಷತ್ತಿಗೆ ನೀಡುವ ಸಾಲಿಯಾನ ಸಹಾಯ ದ್ರವ್ಯ ಐದುಲಕ್ಷಕ್ಕಾದರೂ ಹೆಚ್ಚಬೇಕಾದದ್ದು ನ್ಯಾಯ. ಕನ್ನಡ ಶಿಕ್ಷಣ ಹಾಗೂ ಆಡಳಿತ ಮಾಧ್ಯಮವಾಗಬೇಕೆಂಬುದು ಈ ಸರ್ಕಾರದ ಸಂಕಲ್ಪವಾಗಿದೆ; ಪ್ರತಿಗಾಮಿ ಶಕ್ತಿಗಳ ಕಾರಣವಾಗಿ ಆ ಸಂಕಲ್ಪ ಇನ್ನೂ ಈಡೇರದಿರುವುದು ನಾಡಿನ ದುರ್ದೈವ.

ಒಟ್ಟಿನಲ್ಲಿ ಇದೊಂದು ಪರ್ವಸಮಯ. ವಿಶ್ವವಿದ್ಯಾನಿಲಯಗಳು, ಕನ್ನಡ ಸಾಹಿತ್ಯ ಪರಿಷತ್ತು, ಕರ್ನಾಟಕ ವಿದ್ಯಾವರ್ಧಕ ಸಂಘ, ಕರ್ಣಾಟಕ ಇತಿಹಾಸ ಸಂಶೋಧನಮಂಡಲಿ, ವಯಸ್ಕರ ಶಿಕ್ಷಣ ಸಮಿತಿ—ಈಗ ಏಕೀಭವಿಸಿ ಕನ್ನಡ ನಾಡು ನುಡಿಗಳ ಏಳ್ಗೆಗಾಗಿ ದುಡಿಯುವುದಾದರೆ ಎರಡು ಮೂರು ವರ್ಷಗಳಲ್ಲಿ ಕನ್ನಡ ಕವಿಸಂತರ, ಭಾಷಾಭಿಮಾನಿಗಳ, ಇಡೀ ಕನ್ನಡ ಜನತೆಯ ಕನಸು ನನಸಾಗುವುದರಲ್ಲಿ ಸಂದೇಹವಿಲ್ಲ. ಎಲ್ಲ ಕನಸುಗಳು ನನಸಾಗಿ ಕನ್ನಡ ನುಡಿ ಜಗತ್ತಿನ ಶ್ರೇಷ್ಠ ಭಾಷೆಗಳಲ್ಲೊಂದಾಗಲಿ, ಕನ್ನಡ ನಾಡಿನ ಕೀರ್ತಿ ಜಗದಗಲಕ್ಕೂ ಹರಡಲೆಂದು ಒಕ್ಕೊರಲಿನಿಂದ ಹಾರೈಸೋಣ.

# ಕನ್ನಡದಲ್ಲಿ ಮಹಾಪ್ರಾಣಗಳು

— ಓ. ಎಲ್. ನಾಗಭೂಷಣಸ್ವಾಮಿ

ಬಾಲ್ಯದಿಂದಲೇ ವರ್ಧಿಸುತ್ತಿದ್ದ ಸೂಕ್ಷ್ಮ ರೂಪವಾದ ಹೊಳಹಿನಿಂದ ಕೂಡಿದ್ದ ಶ್ರೀ ನಾಗಭೂಷಣಸ್ವಾಮಿಯು ಇಂ[illegible] ಬಿ. ಎ. ತರಗತಿಯಲ್ಲಿ ಮೈಸೂರಿನ ಮಹಾರಾಜಾಸ್ ಕಾಲೇಜಿನಲ್ಲಿ ಓದುತ್ತಿದ್ದಾನೆ. ಸ್ವತಂತ್ರ ವಿಚಾರಿಯೂ ಪ್ರತಿಭಾಶಾಲಿ[illegible] ಆದ ಸ್ವಾಮಿ ನಮ್ಮ ಓದುಗರಿಗಾಗಿ "ಕನ್ನಡದಲ್ಲಿ ಮಹಾಪ್ರಾಣಗಳು'' ಎಂಬ ಲೇಖನ ಒದಗಿಸಿದ್ದಾನೆ. ಧನ್ಯವಾದಗಳು.

—ಸಂ.

ಶಬ್ದ ಮತ್ತು ಅರ್ಥಗಳು ಭಾಷೆಯ ಎರಡು ಮುಖ್ಯ ಘಟಕಗಳು. ಅಕ್ಷರಗಳು ಶಬ್ದಗಳನ್ನು ಪ್ರತಿನಿಧಿಸುತ್ತವೆ. ಕನ್ನಡದ ಅಕ್ಷರಗಳನ್ನು ಸ್ವರಗಳು ಮತ್ತು ವ್ಯಂಜನಗಳೆಂದು ವಿಭಾಗಿಸಬಹುದು. ವ್ಯಂಜನಗಳಲ್ಲಿ ವರ್ಗೀಯ ವ್ಯಂಜನ ಮತ್ತು ಅವರ್ಗೀಯ ವ್ಯಂಜನಗಳೆಂದು ಎರಡು ವಿಧ. ವರ್ಗೀಯ ವ್ಯಂಜನಗಳಲ್ಲಿ ಅಲ್ಪ ಪ್ರಾಣಗಳೂ, ಮಹಾಪ್ರಾಣಗಳೂ ಇರುತ್ತವೆ. "ಪ್ರಾಣ" ಎಂದರೆ ಉಸಿರು. ಯಾವ ಅಕ್ಷರಗಳ ಉಚ್ಚಾರಣೆಯಲ್ಲಿ ಹೆಚ್ಚು ಉಸಿರು ಹೊರಬರುತ್ತದೆಯೋ ಅವು ಮಹಾಪ್ರಾಣಗಳು; ಯಾವ ಅಕ್ಷರಗಳ ಉಚ್ಚಾರಣೆಯಲ್ಲಿ ಕಡಿಮೆ ಉಸಿರು ಹೊರಬರುತ್ತದೆಯೋ ಅವು ಅಲ್ಪ ಪ್ರಾಣಗಳು.

ವರ್ಗದ್ವಿತೀಯ ವರ್ಣಂ
ವರ್ಗಚತುರ್ಥಾಕ್ಷರಂ ಮಹಾಪ್ರಾಣಮುಮ
ಪೊರ್ಗವಿದರ್ ಸಂಖ್ಯೆಯೊಳಂ
ಭೋರ್ಗರೆವನು ಕೃತಿಯೊಳಂ ಪ್ರಯೋಗಿಸು
ತಿರ್ಪರ್

ಎಂಬ ಸೂತ್ರದಲ್ಲಿ ಕೇಶಿರಾಜನು ಮಹಾಪ್ರಾಣಗಳು ಯಾವುವು ಮತ್ತು ಅವು ಎಲ್ಲೆಲ್ಲಿ ಬರುತ್ತವೆ. ಎಂಬುದನ್ನು ಹೇಳಿದ್ದಾನೆ. 'ಪ್ರತಿವರ್ಗದ ಎರಡನೆಯ ಮತ್ತು ನಾಲ್ಕನೆಯ ಅಕ್ಷರಗಳು ಮಹಾಪ್ರಾಣಗಳು. ಬಲ್ಲವರು ಅವನ್ನು ಸಂಖ್ಯಾವಾಚಕಗಳಲ್ಲಿಯೂ, ಅನುಕರಣವಾಚಕಗಳಲ್ಲಿಯೂ ಪ್ರಯೋಗಿಸುತ್ತಾರೆ. ಖ್. ಛ್, ಠ್, ಥ್, ಫ್, ಘ್, ಝ್, ಢ್. ಧ್, ಭ್— ಇವು ಮಹಾಪ್ರಾಣಗಳು. ಕೇಶಿರಾಜನು ಮಹಾಪ್ರಾಣಯುಕ್ತ ಸಂಖ್ಯಾವಾಚಕಗಳೆಂದು ಕೊಟ್ಟಿರುವ ಉದಾಹರಣೆಗಳಲ್ಲೆಲ್ಲಾ 'ಸಾಸಿರ' ಎಂಬ ಪದವು ಬಂದಿದೆ. ಸಾಸಿರವು ಸಂಸ್ಕೃತದ 'ಸಹಸ್ರ' ಎಂಬ ಪದದ ತದ್ಭವ. ಆದ್ದರಿಂದ ಛ ಎಂಬ ಮಹಾಪ್ರಾಣವೊಂದೇ ಸಂಖ್ಯಾವಾಚಕಗಳಲ್ಲಿ ಬರುವುದು. ಮಹಾಪ್ರಾಣಯುಕ್ತ ಅನುಕರಣವಾಚಕಗಳೆಂದು ನೀಡಿರುವ ಉದಾಹರಣೆಗಳಲ್ಲಿ ಹತ್ತು ಮಹಾಪ್ರಾಣಗಳೂ ಬಂದಿವೆ.

"ಒಳವು ಮಹಾ ಪ್ರಾಣಂಗಳ್ ವಿಳಸತ್ಕರ್ಣಾಟಕ ಭಾಷೆಯೊಳ್ ಕೆಲವು ನಿಜೋಜ್ವಳವಾಗಿ'' – ಕನ್ನಡ ಭಾಷೆಯಲ್ಲಿ ಮಹಾಪ್ರಾಣಗಳಿರುವ ಕೆಲವು ಶಬ್ದಗಳು ಸಹಜವಾಗಿಯೇ ಇವೆ — ಎಂದು ಕೇಶಿರಾಜನ ಅಭಿಪ್ರಾಯ. ಮಹಾಪ್ರಾಣಗಳಿರುವ ಕನ್ನಡ ಶಬ್ದಗಳೆಂದು ಅವನು ವೃತ್ತಿಯಲ್ಲಿ ಕೊಟ್ಟಿರುವ ನಲವತ್ತೆಂಟು ಪದಗಳಲ್ಲಿ ಒಂದಾದರೂ ಕನ್ನಡದ್ದು ಎಂದು ಧೈರ್ಯವಾಗಿ ಹೇಳಲು ಸಾಧ್ಯವಿಲ್ಲ. ಇವುಗಳಲ್ಲಿ ಕೆಲವು ಸಂಸ್ಕೃತ ಭಾಷೆಯಿಂದ ಕನ್ನಡಕ್ಕೆ ಬಂದಿವೆ. ಕೆಲವು ಮರಾಠೀ ಭಾಷೆಯಿಂದ ಬಂದಿವೆ, ಇನ್ನು ಕೆಲವು ಪ್ರಾಕೃತದಿಂದ ಬಂದಿವೆ. ಮಹಾಪ್ರಾಣಗಳನ್ನು ಸಾಮಾನ್ಯವ್ಯವಹಾರಗಳಲ್ಲಿ ಕನ್ನಡದ ಜನ ಉಪಯೋಗಿಸುತ್ತಿರಲಿಲ್ಲ ಎಂಬ ಧ್ವನಿ ಕೇಶಿರಾಜನ ಮಾತಿನಲ್ಲಿದೆ. ಕನ್ನಡದಲ್ಲಿ ಮಹಾಪ್ರಾಣಗಳು ಸ್ವಭಾವಸಿದ್ಧವಾದ ವರ್ಣಗಳೆಂದು ಅವನು ಒತ್ತಿಹೇಳಿದ್ದರೂ ಅಲ್ಲಿಯೂ ಆತನು ಆ ಅಭಿಪ್ರಾಯವನ್ನು ನಿರ್ಧಾರವಾಗಿ ಹೇಳಿದಂತಿಲ್ಲ. 'ಒಳವು ಮಹಾಪ್ರಾಣಂಗಳ್' ಎಂದು ಅವನು ಕೊಟ್ಟಿರುವ ಉದಾಹರಣೆಗಳು ಕನ್ನಡದ ಜಾಯಮಾನಕ್ಕೆ ಸಂಪೂರ್ಣವಾಗಿ ಒಗ್ಗುವುದಿಲ್ಲ.

ಅಚ್ಚಗನ್ನಡದ ಶುದ್ಧಗೆಯನ್ನು ನಿರ್ಣಯಿಸುತ್ತಾ ಕೇಶಿರಾಜನು ಅದರಲ್ಲಿ ನಲವತ್ತೇಳು ಅಕ್ಷರಗಳಿವೆ ಎಂದು ಹೇಳಿದ್ದಾನೆ; ಅದರಲ್ಲಿ ಮಹಾಪ್ರಾಣಗಳೂ ಸೇರಿವೆ. ಆದರೆ ದ್ರಾವಿಡ ಭಾಷೆಗಳಲ್ಲಿ ಮಹಾಪ್ರಾಣಗಳು ಇರಲಿಲ್ಲ. ದ್ರಾವಿಡ ಭಾಷಾ ವರ್ಗದ ಪ್ರಾಚೀನ ಭಾಷೆಯಾದ ತಮಿಳಿನಲ್ಲಿ ಮಹಾಪ್ರಾಣಗಳಿಲ್ಲ. ಅಚ್ಚ ತೆಲುಗಿನಲ್ಲಿ ಮಹಾಪ್ರಾಣಗಳು ಇಲ್ಲವೆಂದು ನನ್ನಯ್ಯಭಟ್ಟನು ಹೇಳಿದ್ದಾನೆ. ಪ್ರಾಚೀನ ಮಲೆಯಾಳ ಭಾಷೆಗಾಗಿ ಉಪಯೋಗಿಸುತ್ತಿದ್ದ ವಟ್ಟೆಳುತ್ತು, ಕೋಲೆಳುತ್ತು ಲಿಪಿಗಳಲ್ಲಿಯೂ ಮಹಾಪ್ರಾಣ ಚಿಹ್ನೆಗಳಿಲ್ಲ. ಅಚ್ಚ ತುಳುವಿನಲ್ಲಿಯೂ ಮಹಾಪ್ರಾಣಗಳಿಲ್ಲ. ಸಂಸ್ಕೃತದ ಪ[illegible]ವದಿಂದ ದ್ರಾವಿಡಭಾಷೆಗಳಲ್ಲಿ ಮಹಾಪ್ರಾಣಗಳು ಬ[illegible]ಬಂದುವೆಂದು ಭಾಷಾ ಶಾಸ್ತ್ರಜ್ಞರು ಹೇಳುತ್ತಾರೆ.

ಕೇಶಿರಾಜನೇ ಹೇಳುವಂತೆ ಮಹಾಪ್ರಾಣಗಳು ಸಂ[illegible]ಖ್ಯಾವಾಚಕಗಳಲ್ಲಿಯೂ ಮತ್ತು ಅನುಕರಣ ವಾಚಕಗಳ[illegible]ಲ್ಲಿಯೂ ಬರುತ್ತವೆ. ಸಂಖ್ಯಾವಾಚಕಗಳಲ್ಲಿ ಇರ್ಛಾಸಿರಂ[illegible] ನೂರ್ಛಾಸಿರಂ, ಪದಿನೆಣ್ಛಾಸಿರಂ ಎಂಬ ಪದಗಳನ್[illegible] ನೋಡಿದರೆ ನೂರು ಮತ್ತು ಸಾವಿರಕ್ಕೆ ನಮ್ಮಲ್ಲಿ ಪ್ರತ್ಯೇಕ ಶಬ್ದಗಳಿದ್ದಂತೆ ಕಾಣುವುದಿಲ್ಲ. ನೂರರ ಸಂಖ್ಯೆಯನ್ನು ನಿರ್ದೇಶಿಸಲು ನಮ್ಮಲ್ಲಿ ಸರಿಯಾದ ಶಬ್ದವಿಲ್ಲ. ಸಂಸ್ಕೃತದಲ್ಲಿ ಶತ ಎಂಬ ಪದವಿದೆ. 'ಬಡ್ಡಿ (ರಾಶಿ) ಎಂದರೆ ನೂರು ಎಂಬ ಕಲ್ಪನೆ ಪ್ರಾಚೀನರಿಗಿತ್ತು. ನೂರು ಎಂದರೆ ಪುಡಿ ಎಂದು ಅರ್ಥ. ಅದು ಸಂಖ್ಯಾವಾಚಕವಲ್ಲ. ಬಡ್ಡಿಯೇ ನೂರರ ಕಾರ್ಯವನ್ನು ನಿರ್ವಹಿಸುತ್ತಿದ್ದಿತು. ಇತ್ತೀಚೆಗೆ ನೂರು ಪ್ರಚಾರಕ್ಕೆ ಬಂದಿತು. ಸಾಸಿರ ಎಂಬ ಪದವೂ ಕನ್ನಡದ್ದಲ್ಲ. ಮೇಲಾಗಿ ಇರ್ಸಾಸಿರ ಎಂಬಂತಹ ಕಡೆಗಳಲ್ಲಿ ಸಕಾರಕ್ಕೆ ಛವು ಆದೇಶವಾಗಿ ಬರಬೇಕಾಗಿಲ್ಲ ಅಲರ್ಚರ್ಣ, ಪೊಣರ್ಚು ಎಂಬ ಕಡೆಗಳಲ್ಲಿ ರೇಫದ ಮುಂದೆ ಸಕಾರಕ್ಕೆ 'ಚ'ವು ಆದೇಶವಾಗಿ ಬರುತ್ತದೆ. ಸಂಸ್ಕೃತದಲ್ಲಿ ಮಾತ್ರ ಮಹಾಪ್ರಾಣಗಳು ನಿತ್ಯ; ಕನ್ನಡದಲ್ಲಿ ಅವು ನಿತ್ಯವಲ್ಲ; ಆದರೂ ಸಂಸ್ಕೃತ ಮಹಾಪ್ರಾಣಾಕ್ಷರಗಳ ಛಾಯೆ ಕನ್ನಡದ ಮೇಲೆ ಬಿದ್ದಿದೆ.

ಅನುಕರಣ ಶಬ್ದಗಳು ಯಾವುದೇ ಭಾಷೆಯ ನೈಸರ್ಗಿಕ ಲಕ್ಷಣವನ್ನು ತೋರುವುದಿಲ್ಲ. ಅವುಗಳಿಗೆ ಧಾತುಗಳಿಲ್ಲ. ಅವನ್ನು ಗಟ್ಟಿಯಾಗಿಯೂ ಮೃದುವಾಗಿಯೂ ಉಚ್ಚರಿಸುವುದುಂಟು. ಎರಡನೆಯ ನಾಗವರ್ಮನು 'ಕರ್ಣಾಟಕ ಭಾಷಾ ಭೂಷಣ'ದಲ್ಲಿ —

'ನ ಅತ್ರ ಪ್ರಾಯೇಣ ವರ್ಗಾಣಾಂ
ದ್ವಿತೀಯ ಚತುರ್ಥಾಃ'

ಎಂದು ಹೇಳಿ 'ಪ್ರಾಯೇಣೇತಿ ವಚನಾದ್ ಸಂಖ್ಯಾನು ಕರಣಾದೌ ದೃಶ್ಯನ್ತೇ' ಎಂದು ಹೇಳಿದ್ದಾನೆ. 'ಕಾವ್ಯಾವಲೋಕನದ' 'ಶಬ್ದಸ್ಮೃತಿ'ಯಲ್ಲಿ ಸಂಖ್ಯೆ ಮತ್ತು ಅನುಕರಣೆಯಲ್ಲಿ ಮಹಾಪ್ರಾಣಗಳಿವೆಯೆಂದು ಹೇಳಿದ್ದಾನೆ. ಕೇಶಿರಾಜನು 'ಶಬ್ದಸ್ಮೃತಿ'ಯನ್ನು ಅನುಸರಿಸಿದ್ದಾನೆ.

ಸಂಸ್ಕೃತ ಮತ್ತು ಪ್ರಾಕೃತಗಳ ಪ್ರಭಾವದಿಂದ ಕೇಶಿರಾಜನ ಕಾಲಕ್ಕೆ ಮಹಾ ಪ್ರಾಣಗಳಿರುವ ಕನ್ನಡದ ಪದಗಳ ಉಪಯೋಗ ನಡೆಯುತ್ತಿದ್ದಿರಬೇಕು. ಅಲ್ಲದೆ ಕೇಶಿರಾಜನು ಇದ್ದ ಕಾಲ ಹಳಗನ್ನಡವು ನಡುಗನ್ನಡವಾಗಿ ಪರಿವರ್ತನೆ ಹೊಂದುತ್ತಿದ್ದಂತಹ ಸಂಧಿ ಕಾಲ. ತನ್ನ ಕಾಲದ ಭಾಷೆಯ ಸ್ವರೂಪವನ್ನು ಗಮನಿಸಿದ್ದರೂ ಕೇಶಿರಾಜನು ಹಳಗನ್ನಡದ ಗ್ರಂಥಗಳ ಆಧಾರದ ಮೇಲೆ ಹಳಗನ್ನಡದಲ್ಲಿ ವ್ಯಾಕರಣರಚನೆ ಮಾಡಲು ಪ್ರಯತ್ನಿಸಿದ್ದಾನೆ. ವೈಜ್ಞಾನಿಕದೃಷ್ಟಿ ಇಲ್ಲದ ಆ ಕಾಲದಲ್ಲಿ ಅವನಿಗೆ ಮಹಾಪ್ರಾಣಗಳು ಒಂದು ಬಿಡಿಸಲಾಗದ ಸಮಸ್ಯೆಯಾಗಿದೆ. ಆ ಸಂಧಿ ಕಾಲದಲ್ಲಿ ಗ್ರಂಥ ರಚನೆ ಮಾಡಿದವರೆಲ್ಲ ಸಂಸ್ಕೃತ ಭಾಷಾ ಮರ್ಯಾದೆಯನ್ನು ನಿಕಟವಾಗಿ ಅನುಸರಿಸಿರುವುದನ್ನು ಕಾಣಬಹುದು. ಭಾಷಾಶಾಸ್ತ್ರಜ್ಞರು ಸಂಸ್ಕೃತಕ್ಕೂ ದ್ರಾವಿಡ ಭಾಷೆಗಳಿಗೂ ಜ್ಞಾತಿಸಂಬಂಧವಿಲ್ಲವೆಂದು ಹೇಳದಿದ್ದರೆ ಅದೇ ಸಮಸ್ಯೆ ಇಂದಿಗೂ ಉಳಿದಿರುತ್ತಿತ್ತೇನೋ !

ಪೂರ್ವ ದ್ರಾವಿಡ ಭಾಷೆಯಿಂದ ಬೇರೆಯಾಗಿ ಇನ್ನೂ ಶೈಶವಾವಸ್ಥೆಯಲ್ಲಿದ್ದಾಗಲೇ ಕನ್ನಡ ಭಾಷೆಗೆ ಸಂಸ್ಕೃತದ ಸಂಪರ್ಕವಾಯಿತು. ಮಹಾಪ್ರಾಣಗಳನ್ನೂ ಒಳಗೊಂಡಂತೆ ಅನೇಕ ವಿಷಯಗಳಲ್ಲಿ ಸಂಸ್ಕೃತದ ಪ್ರಭಾವ ಕನ್ನಡದ ಮೇಲೆ ಬಿದ್ದಿತು. ಈಗ ಕನ್ನಡದ ಪದಗಳು ಯಾವುವು? ಅನ್ಯ ಭಾಷೆಯ ಪದಗಳು ಯಾವುವು? ಎಂಬುದನ್ನು ಹೇಳುವುದೇ ಕಷ್ಟವಾಗಿದೆ. ತದ್ಭವಗಳು ಅನ್ಯದೇಶೀಯಗಳು; ಕನ್ನಡವವಲ್ಲ. ಸಂಖ್ಯಾವಾಚಕಗಳಾಗಲಿ, ಅನುಕರಣಗಳಾಗಲಿ ಸಹಜವಾಗಿ ಮಹಾಪ್ರಾಣಗಳನ್ನು ಹೊಂದಿಲ್ಲ. ಕನ್ನಡದಲ್ಲಿ ಮಹಾಪ್ರಾಣಗಳಿರುವ ಶಬ್ದಗಳಲ್ಲಿ ಅನೇಕ ಸಂಸ್ಕೃತ ಪದಗಳನ್ನು ಕನ್ನಡಕ್ಕೆ ಹೊಂದಿಸಿಕೊಂಡು ಬರೆಯುವುದರಿಂದ ಮಹಾಪ್ರಾಣಗಳನ್ನು ಬಿಡಲು ಸಾಧ್ಯವಿಲ್ಲ. ಇಂಗ್ಲಿಷಿನ ಅನೇಕ ಪದಗಳನ್ನು ಕನ್ನಡದಲ್ಲಿ ಬರೆಯುವಾಗ ಮಹಾಪ್ರಾಣಗಳನ್ನು ಉಪಯೋಗಿಸುತ್ತೇವೆ. (Father- ಫಾದರ್) ಕನ್ನಡದಲ್ಲಿ ಮಹಾಪ್ರಾಣಗಳಿಲ್ಲ, ಆದರೆ ಅವನ್ನು ಬಿಡುವಂತಿಲ್ಲ.

# ಜನಪದ ಸಾಹಿತ್ಯದಲ್ಲಿ ಬಸವಣ್ಣನವರು

— ಹರತಿ ವೀರೇಶ.

"ಹರತಿ ವೀರೇಶ" ಎಂಬ ಕಾವ್ಯನಾಮದಿಂದ ಬರೆಯುತ್ತಿರುವ ತರುಣ ಸಾಹಿತಿ ಶ್ರೀ ಹೆಚ್. ವಿ. ವೀರಭದ್ರಯ್ಯನವರು. ಕನ್ನಡನಾಡಿನ ಜಾನಪದ ಸಾಹಿತ್ಯ ವೈಶಾಲ್ಯವೂ, ವೈವಿಧ್ಯಮಯವೂ ಆದುದು. ಅದು ಈ ನಾಡಿನ ಜನಜೀವನದ ಪ್ರತಿಬಿಂಬವಾಗಿದೆ. ಚಾರಿತ್ರಿಕ. ಪೌರಾಣಿಕ ಸಾಮಾಜಿಕ, ಆಧ್ಯಾತ್ಮಿಕ ಕ್ಷೇತ್ರಗಳಲ್ಲಿ ಈ ನಾಡಿನ ಜನಜಂಗುಳಿ ಬಿಟ್ಟುಹೋಗಿರುವ ಹೃದಯಸ್ಪರ್ಶೀ ಸಾಹಿತ್ಯ ಕ್ಷೇತ್ರದ ಬಗೆಗೆ ಪರಿಶೀಲಿಸಿದಾಗ ಅದು ರೋಮಾಂಚಕಾರೀ ಸನ್ನಿವೇಶವನ್ನೇ ಉಂಟುಮಾಡೀತು. ಅಂಥ ಅಂತಸ್ಸತ್ವಭರಿತವಾಗಿದೆ ಈ ಸಾಹಿತ್ಯ. ತರುಣ ಲೇಖಕರಾದ ಶ್ರೀ ವೀರಭದ್ರಯ್ಯನವರು ಬಸವಣ್ಣನವರ ಬಗೆಗೆ ಜನಜನಿತವಾಗಿರುವ ಅನೇಕ ತ್ರಿಪದಿಗಳನ್ನಾಯ್ದು ಈ ಲೇಖನ ಹೆಣೆದು ನಮ್ಮ ಓದುಗರಿಗೆ ಒದಗಿಸಿದ್ದಾರೆ. ಅವರಿಗೆ ಧನ್ಯವಾದಗಳು.

—ಸಂ.

"ಕನ್ನಡದ ವೇದಗಳು ಜಾನಪದ ಗೀತೆಗಳು" ಎನ್ನುವ ಡಾ|| ಜಿ. ಎಸ್. ಶಿವರುದ್ರಪ್ಪನವರ ಮಾತಿನಲ್ಲಿ ಸಮರ್ಪಕತೆ ಕಾಣಬಂದಂತೆ "ಭಾರತದ ಜಾನಪದ ಗೀತೆಗಳು ನಮ್ಮ ದೇಶದ ಘನವಾದ ರಾಷ್ಟ್ರೀಯ ಸೊತ್ತು, ಭಾರತದ ಸಾಂಸ್ಕೃತಿಕ ಪರಂಪರೆಯ ಬಹುಮಟ್ಟಿನ ತಿರುಳು ಇವುಗಳಲ್ಲಿ ಹುದುಗಿದೆ" ಎಂಬ ಡಾ|| ಗದ್ದಗೀಮಠರ ಹೇಳಿಕೆಯಲ್ಲಿ ಔಚಿತ್ಯವಿದೆ. ಅಲ್ಲದೆ "ನಮ್ಮ ಹಳ್ಳಿಗರ ಸಂಸ್ಕೃತಿಯು ಒಡಮೂಡಿದ್ದು ಪಂಡಿತರ ಕಾವ್ಯಗಳಲ್ಲಲ್ಲ; ಶಿಲಾಶಾಸನ ಶಿಲ್ಪಕಲೆಯಲ್ಲಲ್ಲ; ಪಾಮರರೆಂದು ಕರೆಯಲ್ಪಡುವ ಹಳ್ಳಿಗರ ಹಾಡುಗಳಲ್ಲಿ; ಜಾನಪದ ಸಾಹಿತ್ಯದಲ್ಲಿ .... ಅವರ (ಹಳ್ಳಿಗರ) ಹಾಡಿನಲ್ಲಿ ಸ್ಫೂರ್ತಿಯಿದೆ; ಸ್ವಾತಂತ್ರ್ಯವಿದೆ; ತಿರುಳನ್ನಡವಿದೆ. ಅಂತೆಯೇ ಜಾನಪದ ಸಾಹಿತ್ಯವು ಪಾಮರರ ಉಸಿರಾದರೂ ಅದನ್ನು ರಸಿಕರೆಲ್ಲರೂ ಹೊತ್ತು ಕುಣಿದಾಡುತ್ತಾರೆ. ಜಾನಪದ ಸಾಹಿತ್ಯವು ನಿರಾಭರಣ ಸುಂದರಿಯಾಗಿರುವುದಲ್ಲದೆ 'ಸಮಷ್ಟಿ ಪ್ರತಿಭೆಯ ಅತ್ಯಂತ ಪ್ರೋಜ್ವಲವೂ ಕಲಾತ್ಮಕವೂ ಆದ ಆ ವಿಷ್ಕಾರ' ವಾಗಿದ್ದು ಸಾರವತ್ತಾಗಿ ಭಾರವಾಗಿರತಕ್ಕದ್ದಾಗಿ ದೇವರನ್ನು ಬೇಡಿ ಪಡೆದುಕೊಂಡ ಸಹಜ ಸಾಹಿತ್ಯ ವಿಶೇಷವಾಗಿದೆ.

ಶಿವಶರಣರ–ಸಾಧು–ಸತ್ಪುರುಷರ ಪಾದಧೂಳಿಯಿಂದ ಕನ್ನಡನಾಡು ಪಾವನವಾಗಿದೆ. ಇವರ ಪವಾಡಗಳನ್ನೂ, ಲೀಲೆಗಳನ್ನೂ, ಕಂಡು ಕೇಳಿದ ಜನಪದವು ಇವರನ್ನು ಹಾಡಿಕೊಂಡಾಡುತ್ತಾ ಬಂದಿದೆ. ಸದಾಚಾರ ಸಂಪನ್ನರಾದ ಶಿವಶರಣರ ಪ್ರಭಾವವು ಜನತೆಯ ಮೇಲೆ ಬಹಳವಾಗಿದೆ. ಶಿವಶರಣರ ವಿಚಾರವಾಗಿ ಜಾನಪದಸಾಹಿತ್ಯವು ಅಪಾರವಾಗಿದೆ.

ಸದುವಿನಯದ, ಮೃದುವಚನಂಗಳ, ಸಕಲ ಜೀವರಿಗೆ ಲೇಸನೇ ಬಯಸಿದ ಬಸವಣ್ಣನವರ ಜೀವನವೇ ಒಂದು ಸುಂದರ ಮಹಾಕಾವ್ಯವಾಗಿದೆ. ಜೀವನದುದ್ದಕ್ಕೂ ಆತ್ಮ ಪರೀಕ್ಷೆಯನ್ನು ಮಾಡಿಕೊಳ್ಳುತ್ತಲೇ ಲೋಕ ನಿರೀಕ್ಷಿಸುವಂಥ ಸರಳತೆಯ ಮಹತಿಯನ್ನು ತೆರೆದು ತೋರಿದ ವಿಭೂತಿ ಪುರುಷರವರು. ಜನಜೀವನದ ಹೃದಯವನ್ನು ಹಸನುಗೊಳಿಸಿದ "ದೇವಕೃಷಿಕ"ರಾದ ಅವರ ಬದುಕೊಂದು ಉತ್ತಹೊಲ; ತೆರೆದ ಪುಸ್ತಕ. ಶ್ರೀ ಸಾಮಾನ್ಯನ ಜೀವನಕ್ಕೆ ಮುತ್ತಿನ ಮೌಲ್ಯವನ್ನಿತ್ತು ದಿವ್ಯಜ್ಯೋತಿಪಥದಲ್ಲಿ ನಡೆಯುತ್ತಾ ಕಂಡ ಭಕ್ತರಿಗೆ ಕೈ ಮುಗಿದ ಅಣ್ಣನವರ ಜೀವನವನ್ನು ಎದೆ ತುಂಬಿ ಜನಪದ ಕವಿ ಹಾಡಿದುದನ್ನು ಚಿತ್ರಿಸುವುದೇ ಈ ಲೇಖನದ ಉದ್ದೇಶ.

ಕನ್ನಡ ಸಾಹಿತ್ಯದಲ್ಲಿ ಬಸವಣ್ಣನವರನ್ನು ಕುರಿತ ಗ್ರಂಥಗಳಲ್ಲಿ ದೊರೆಯಬಹುದಾದ ವಿವರಣೆಗಳೆಲ್ಲವೂ ಇಲ್ಲಿ ದೊರೆಯುವುದಿಲ್ಲವಾದರು, ಜನಮನದಲ್ಲಿ ಬಸವಣ್ಣನವರು ನೆಲೆನಿಂತ ಬಗೆಯನ್ನೂ, ಬೀರಿದ ಪ್ರಭಾವವನ್ನೂ ಕಾಣಬಹುದು. ಬಸವಣ್ಣನವರ ತಂದೆ–ತಾಯಿಗಳು ಯಾರು ಎಂಬುದರಿಂದಲೇ ಆರಂಭವಾಗುತ್ತದೆ.

ಹಡೆದವ್ವ ಮಾದವ್ವ ಹಡೆದಪ್ಪ ಮಾದರಸು
ಪಡೆದವ್ವ ಅಕ್ಕ ನಾಗಾಯಿ! ಬಸವನಿಗೆ
[illegible]||



ತಂದೆ-ತಾಯಿಗಳು ಮಾದರಸ, ಮಾದಲಾಂಬೆ ಎಂಬುದು ಇತರ ಗ್ರಂಥಗಳಲ್ಲು ಕಾಣಬರುತ್ತದೆ. ಆದರೆ ಅಕ್ಕ ನಾಗಲಾಂಬಿಕೆಯ ವಿಚಾರ ಕೆಲವು ಗ್ರಂಥಗಳಲ್ಲಿ ಮಾತ್ರ ಕಾಣಿಸುತ್ತದೆ. ಜನಪದ ಸಾಹಿತ್ಯದಲ್ಲಿಯೂ 'ಪಡೆದವ್ವ' ನಾಗಲಾಂಬಿಕೆ ಎಂದಿದೆ. ವಿಚಾರಣೀಯ ಸ್ಥಾನ ಅಂಶ. ಬಸವಣ್ಣನವರ ಬಾಲ್ಯ ಸುಂದರವಾಗಿಯೇ ಬಾಗೇವಾಡಿಯಲ್ಲಿ ಕಳೆದಿರಬೇಕು. ಅವನ ವಿದ್ಯಾಭ್ಯಾಸ ನಡೆಯುವ ಸಾಧನೆಯ ಕರ್ಮಭೂಮಿ, ಧರ್ಮರಂಗ ಕೂಡಲಸಂಗಮ ಕ್ಷೇತ್ರ.

ಹುಟ್ಟಿ ಬಂದನು ಬಸವ ಕಟ್ಟಿದಕೆ ಕಲ್ಯಾಣ
ಬಿಟ್ಟು ಬಾಗೋಡಿ ನಾಗಾಯಿ! ಯೊಡಗೂಡಿ
ನೆಟ್ಟು ಮಾಡಿದನು ಸಂಗಮಕೆ||

ಅಕ್ಕ ನಾಗಲಾಂಬಿಕೆಯೊಂದಿಗೆ ಕಪ್ಪಡಿಯ ಸಂಗಮ ಕ್ಷೇತ್ರಕ್ಕೆ ಧಾವಿಸುತ್ತಾರೆ ಬಸವಣ್ಣನವರು. ಅಲ್ಲಿ ಅವರ ಜೀವನದ, ದೈವಶ್ರದ್ಧೆಯ ಉಪಾಸನೆ, ಸಾಧನೆ ನಡೆಯಲಾರಂಭವಾಗುತ್ತದೆ.

ಬಸವ ಸಾಲಿಯ ಕಲಿತ ಎಸೆವ ಸಂಗಮದೊಳಗೆ
ಹೆಸರು ಪಡೆದುಕೊಂಡ ಜಗದೊಳಗೆ! ವರಸಂಗ
ಹಸು ಮಗನ ಹರಸಿ ಸಲಹಿದನು ||

ಸಾಸುವೆಯ ಮೇಲೆ ಸಾಗರ ಹರಿದಂತೆ ಬಸವಣ್ಣನವರ ಮೇಲೆ ಹರಕರುಣೋದಯವಾಗಿ ಅವರ ಭಾವೀ ಬಾಳಿನ ಅರುಣೋದಯವಾಗುತ್ತದೆ. ಸಂಗಮ ಕೃಪಾವಲಯದಲ್ಲಿ, ಹಲವುದಿನ ಶಿವರತಿಯಲ್ಲಿ ಮಗ್ನರಾಗಿ, ಶಿವಸುಖ, ಶಿವಸಾನ್ನಿಧ್ಯದಲ್ಲಿ ಧ್ಯಾನಲೀನರಾಗಿರುತ್ತಾರೆ. ಅದೇ ವೇಳೆಯಲ್ಲಿ ವೇದಜಡರಾದವರ ಶುಷ್ಕ ಸಂಪ್ರದಾಯದ ಬಂದಳಿಕೆ ಧರ್ಮದ ಹೆಮ್ಮರಕ್ಕೆ ಮುಕ್ಕಿ ಮೇಲು–ಕೀಳುಗಳ, ತರ–ತಮಗಳ, ಭಾವನೆ ಸಮಾಜ ಜೀವನದ ವಿಕಾರಾವಸ್ಥೆಯಾಗಿರುತ್ತದೆ. ಆಗ ಬಸವಣ್ಣನವರು–

ವೇದ ವೇದದವಾದ ಭೇದ ಹುಟ್ಟಿಸಿ ಜಗಕೆ
ದಾದು ಯಾರಿಲ್ಲ ಹೇಳುವುದಕ್ಕೆ! ಬಸವಣ್ಣ
ಭೇದ ಅಳುಕಿಸಿದ ಕುಲಕುಲಕೆ ||

ಕುಲದ ವಿಚಾರ ಯುಗಯುಗಳಿಂದಲೂ ಅವ್ಯಾಹತವಾಗಿ, ಮಾನವ ಜನಾಂಗದ ದೊಡ್ಡ ಕಳಂಕದಂತೆ ಬೆಳೆದು ಬಂದಿರುವ ಅಸಾಧು ಸಂಪ್ರದಾಯ, ಜಾತಿಮತಗಳ ಬೇರನ್ನು ಸಮೂಲನಾಶಮಾಡಲು ಜಾಗೃತ ಚೇತನಗಳು ಶ್ರಮಿಸಿರುವುದನ್ನು, ಪ್ರಾಣಾರ್ಪಣೆ ಮಾಡಿರುವುದನ್ನು ಇತಿಹಾಸದ ಪುಟಗಳಲ್ಲಿ ಕಾಣುತ್ತೇವೆ ಜನಾಂಗಕ್ಕೆ ಹತ್ತಿದ ಈ ನಂಜನ್ನುಂಡ–ನಂಜುಂಡರನೇಕರು ಆಗಿಹೋಗಿದ್ದಾರೆ. ಬಸವಣ್ಣನವರೂ ಆ ಶ್ರೇಷ್ಠ ಶ್ರೇಣಿಯಲ್ಲಿ ಶ್ರಮಿಸಿದ ಸುಧಾರಕ ಸುಧಾಕರರಾಗಿದ್ದಾರೆ. ವೇದಗಳನ್ನೆಂದೂ ಆ ಜ್ಞಾನ ಪಿಪಾಸು ದೂರಲಿಲ್ಲ; ಜ್ಞಾನ ಕಾಂಡಕ್ಕೆ ಕೈ ಮುಗಿದು ತಮ್ಮ ವಚನಗಳಲ್ಲಿ ವೇದವಾಕ್ಯಗಳನ್ನು, ವಾಕ್ಯಖಂಡಗಳನ್ನು ಉದ್ಧರಿಸಿ ಗೌರವಿಸಿದ್ದಾರೆ. ವೇದವೆಂಬುದು ಉದರಂಭರಣದ ವಿದ್ಯೆಯಾಗಿ ತನ್ನ ಸತ್ವವನ್ನು ಕಳೆದುಕೊಳ್ಳುತ್ತಿದ್ದುದನ್ನು ಕಂಡು ಅಣ್ಣನವರು ಕಡುನೊಂದಿದ್ದುಂಟು.

ವಾದ ವಾದವೆ ನಡೆದು ವೇದವೇದವೆ ಸೋತು
ಭೇದ ಬೇಡೆಂದು ಬಸವಣ್ಣ! ಸಾರುದಕೆ
ಹೋದ ಹೋದಲ್ಲಿ ಹೊಸ ಮಾತು ||

ಮಾನವರಲ್ಲಿ ಭೇದ ಬೇಡವೆಂದು ಪ್ರಚಾರ ಭಿತ್ತಿ ಪತ್ರವನ್ನು ಎತ್ತಿಹಿಡಿದು ಮಾನವ್ಯದ ಪಾರಮ್ಯವನ್ನು ಪ್ರತಿಪಾದಿಸುತ್ತಾ "ಹೊಸ ಮಾತ"ನ್ನು – ಶಿವಭಕ್ತರೆಲ್ಲ –ಶಿವಬಾಳಿಗೆ ಒಳಗಾದ ಚೇತನಗಳೆಲ್ಲ–ಒಂದೇ ಎನ್ನುವ ಬೀಜ ಮಂತ್ರವನ್ನು ಬಿತ್ತುತ್ತಾ ನಡೆದರು. ಸಾಧನೆಯ ದಾರಿಯಲ್ಲಿ ಸಾಗಿದ ಅವರು–

ಹೊಲೆಯ ಮಾದಿಗರೆಂಬ ಕುಲಬೇರು ಕಿತ್ತೊಗೆದ
ಭಲರೆ ಬಸವಯ್ಯ ಬಸವರಸ! ನಿನ್ನುಸುರು
ನೆಲೆಯಾತು ನಿತ್ಯ ಜನಪದಕೆ ||

ಎನ್ನುವಂತೆ ನಾಡಕವಿಯ ಹೃದಯವನ್ನು ಮೀಟಿ ನುಡಿಸಿದರು. ಕುಲವಾವುದಾದರೆಯು ಮಾನವರು ಒಂದೆಂಬ ಘನತತ್ತ್ವದ ಅನುಷ್ಠಾನ ಪ್ರಿಯರಾದ ಬಸವಣ್ಣನವರ ಹೃದಯ ವೈಶಾಲ್ಯತೆಯನ್ನು ಕೇಳಿ ತಿಳಿದುಕೊಂಡ ರಾಜ ಬಿಜ್ಜಳ ಅವರನ್ನು ತನ್ನಲ್ಲಿಗೆ ಆಹ್ವಾನಿಸುತ್ತಾನೆ.

ಬಿಜ್ಜಳನು ಕೇಳಿದನು ದರ್ಜೆ ಬಸವನ ಹೆಸರ
ಅಜ್ಜಮ್ಮ ನೂರು ಸಂಗಮಕೆ ಕರೆತರಲು
ಮರ್ಜಯಲ ಬಂದ ಬಲದೇವ ||

ಬಸವಣ್ಣನವರ 'ದರ್ಜೆ' ಯನ್ನರಿತು ಬಿಜ್ಜಳನ ಮಂತ್ರಿಯಾದ ಬಲದೇವನೇ ಬಂದ "ಮರ್ಜಿ" ಯಿಂದ ಅತ

ಅಣ್ಣನವರ ಜೀವನ ವಿಧಾನ, ನುಡಿ ನಡೆಗಳಲ್ಲಿ ಅವರು ಸಾಧಿಸಿಕೊಂಡಿದ್ದ [ಸಕ್ರಿಯ ಸಾಮರಸ್ಯ, ಅಂತರಂಗ ಬಹಿರಂಗಗಳ ಸುಂದರ ಹೊಂದಾಣಿಕೆಯನ್ನು ಕಂಡ ಬಲದೇವ "ಕೆಚ್ಚೆದೆಯ ವೀರ ಬಸವನಿಗೆ" ಮಗಳನ್ನು ಕೊಟ್ಟು ಕಲ್ಯಾಣವನ್ನು ನೆಚ್ಚಿ ಸಲಹೆಂದು ಕೈಮುಗಿದು ಬೇಡುತ್ತಾನೆ. ಅಂತೆಯೇ–

ಅರಸ ಬಿಜ್ಜಳರಾಯ ಮರೆತಂದು ಕುಲಮತವ
ಕರೆಸಿ ಬಸವನಿಗೆ ಒಪ್ಪಿಸಿದ। ಮಂತ್ರಿಪದ
ಹರುಷದಲಿ ರಾಜ ಮುದ್ರಿಕೆಯ॥

ಬಿಜ್ಜಳರಾಜ ಅನ್ಯಧರ್ಮದ ಅನುಯಾಯಿಯಾದ ಬಸವಣ್ಣನವರಿಗೆ ರಾಜಮುದ್ರೆಯನ್ನು ಕೊಟ್ಟು ಮಂತ್ರಿಯನ್ನಾಗಿ ನಿಯಮಿಸಿದ್ದು ಆತನ ಗುಣಗ್ರಾಹಿತ್ವಕ್ಕೆ ಸಾಕ್ಷಿಯಾಗಿರುವುದಲ್ಲದೆ ಬಸವಣ್ಣನವರ ವ್ಯಕ್ತಿತ್ವದ ಮತ್ತೊಂದು ಮುಖವನ್ನು ಅನಾವರಣ ಮಾಡಿದೆ. ಅವರು ಲೌಕಿಕವನ್ನೆಂದೂ ದೂರಿದವರಲ್ಲ. ಕ್ರಿಯಾಶಕ್ತಿಯ ಮೇರು ಧೀಮಂತ ಶಕ್ತಿಯಾಗಿದ್ದವರು. ರಾಜಕಾರಣದಂತಹ ಮಹತ್ವದ ಮಣಿಹದಲ್ಲಿಯೂ ಪಳಗಿದವರು. ಅಲ್ಲದೆ ರಾಜ್ಯಕಾರ್ಯದಲ್ಲಿದ್ದೂ ಆತ್ಮ ಜ್ಯೋತಿಯನ್ನು ಬೆಳಗಿಸಿಕೊಳ್ಳುತ್ತಾ ಅರಿವಿಗೊಳಗಾದ ಭಕ್ತ ಚೇತನ ಅವರದು. "ಆನು ಬೆವಹಾರವ ಮಾಡುವೆನಯ್ಯ ಜಂಗಮ ದಾಸೋಹಕ್ಕೆಂದು" ಕಲ್ಯಾಣ ಕೆಲಸದಲ್ಲಿ ನಿತ್ಯನಿರಂತರ ಸೇವೆಗೈಯುತ್ತಿರುವಾಗಲೇ ಅನುಭವ ದೂರವಾದ ಅರಿವು ಅರಿವಲ್ಲ ಎಂಬ ಸತ್ಯಕಂಡುಂಡ ಅವರು ಕಲ್ಯಾಣದಲ್ಲಿ ಒಂದು ನವನವೋನ್ಮೇಷಿತವಾದ, ದಿವ್ಯ ಸುಂದರವಾದ ಮಂಟಪ ರಚನೆ ಮಾಡಿದರು.

ಸಾಗಿ ಬಸವನು ಬಂದು ಕೂಗಿದನು ಕಲ್ಯಾಣ.
ಜಾಗಿನಲಿ ಕಟ್ಟಿ ಅನುಭಾವ। ಮಂಟಪದ
ಕೂಗು ಕೇಳುತಲಿ ಜನವೆದ್ದು॥

ಅನುಭವದ ಕೂಗು ಕೇಳಿದ ಜನ ಎದ್ದರು! ಇಲ್ಲಿ "ಎದ್ದರು" ಎಂಬುದು ಕೇವಲ ವಾಚ್ಯಾರ್ಥದಲ್ಲಿಯೇ ಸೀಮಿತವಾಗದೆ, ಜಾಗೃತ ಜೀವಿಗಳಾದರು. ನಿಜ ಜ್ಞಾನದ ಅನುಭಾವದ ವಾಣಿಗೆ ಓಗೊಟ್ಟರು ಎಂಬುದನ್ನು ಧ್ವನಿಸುತ್ತದೆ.

ಕೂಡಿದರು ಹುರುಪಿನಲಿ ನಾಡಬಲ್ಲಿದರೆಲ್ಲ
ಕೂಡಕಟ್ಟಿದರು ಶಿವನುಡಿಯ। ಕಾಯಕದ
ಗೂಡಾತು ಲೋಕ ಜನ ಹಿಗ್ಗಿ॥

ಕಾಯಕದ ಗೂಡಾತು ಲೋಕ! ಅನುಭವ ಮಂಟಪ ಮಾಡಿದ ಪ್ರಭಾವ, ಅದರಿಂದಾದ ಅದ್ಭುತ ಪರಿಣಾಮವು ಇದು. ಅದರ ಸೂತ್ರಧಾರಿಯಾಗಿ ನಿಂತವರು ಬಸವಣ್ಣನವರು. ಲೋಕಕಾರಕ ಸಂದೇಶದಂತಿರುವ ದುಡಿದು ತಿನ್ನಬೇಕು ಎಂಬ ಘನ ತತ್ವ ಇಂದಿನ ರಕ್ತ ಜಗತ್ತಿಗೆ ದಿವ್ಯ ಔಷಧಿ! ಮತ್ತು ಕಾಯಕ ಕೇವಲ "ತುತ್ತಿನಚೀಲ" ವನ್ನು ತುಂಬಿಸಿಕೊಳ್ಳುವ ಸಾಧನವಾಗದೆ, ತನ್ನರಿವಿಗೊಳಗಾಗುವ ಗುರು ಮಾಧ್ಯಮವಾಗಿ ಕೈಗೊಂಡ ವೃತ್ತಿಯಲ್ಲಿಯೇ ಪರಮಾತ್ಮನನ್ನು ಕಾಣುವ ದಿವ್ಯ ಸೋಪಾನವಾಗಿ ಬೆಳಗಿತು. ಮಾಡುವ ಮಾಟದಿಂದಲೇ ಬೇರೊಂದರ ಠಾವನರಿಯುವಂತಾಯಿತು. ಅನುಭಾವ ಹೆಪ್ಪುಗಟ್ಟಿ ಅರ್ಪಣಾಭಾವ ಕೆನೆಗೊಂಡು ಕಾಯಕದ ಹಾಲು ಹೊಳೆ ಕಲ್ಯಾಣದ ಒಳಗೆ ಹೊರಗೆ ಹರಿಯಲು ಪ್ರಾರಂಭಿಸಿತು; ಅನುಭವ ಮಂಟಪದ ಸ್ಥಾಪನೆಯ ದೆಸೆಯಿಂದ, ಬಸವಣ್ಣನವರ ಹೆಸರು ಸುತ್ತಮುತ್ತೆಲ್ಲ ಹಬ್ಬಿತಲ್ಲದೆ ದೂರ ದೂರಿನ ಬನವಾಸಿಯ ತನಕವೂ, ಉಡುತಡಿಯವರೆಗೂ ಕುಡಿವರಿಯಿತು. ಸೊನ್ನಲಿಗೆಯಂತೂ ಕಲ್ಯಾಣದ ಸಮೀಪದ್ದೇ ಆದ ಊರು. ಅಣ್ಣನವರ ಬಹುಮುಖವ್ಯಕ್ತಿತ್ವವನ್ನರಿತು ನಾಡಿನ ಬಲ್ಲಿದರು ಕಲ್ಯಾಣದತ್ತ ನೀರಿರುವ ಕೆರೆಗೆ ಕರು ಬರುವಂತೆ ಬಂದರು.

ಅಲ್ಲಮನು ಸಿದರಾಮ ಬಲ್ಲಿದೆಲ್ಲರು ಬರಲು
ಕಲ್ಯಾಣ ಮನೆಗೆ ಕಳೆಬಂತು। ಬಸವಯ್ಯ
ಎಲ್ಲಿ ಹೋದಲ್ಲಿ ಬೆಲ್ಲಾದ॥

ಅಲ್ಲಮಪ್ರಭು, ಕಲ್ಯಾಣದ ಪ್ರಣತಿಯಲ್ಲಿ ಭಕ್ತಿ ತೈಲವನ್ನೆರೆದು ಆಚಾರವೆಂಬ ಬತ್ತಿಯ ಹೊತ್ತಿಸಿ ತೊಳಗಿ ಬೆಳಗುತ್ತಿದ್ದ ಬಸವಜ್ಯೋತಿಯನ್ನು ಕಣ್ಣಾರೆ ಕಾಣಲು ಬಂದರು. ಕಲ್ಯಾಣಕ್ಕೆ ಪುಣ್ಯವನ್ನರಸಿ ಪುಣ್ಯವೇ ಧಾವಿಸುವಂತೆ, ಕರ್ಮಯೋಗಿ ಸಿದ್ಧರಾಮನೂ ಬಂದ, ಭಕ್ತಯೋಗಿ ಸಂದರ್ಶನದ ವೈತರಣಿಯಲ್ಲಿ ಮಿಂದು



ಉ. ಕಲ್ಯಾಣದ ಮನೆಗೇ ಕಳೆ ಬಂದಿತು ... ಆಗಮನದಿಂದ. ಬಸವಣ್ಣನವರಿಗಂತೂ ವಿನಿಗಿ ...ಯಕ್ಕೆ ಅಂಬುಧಿಯುಕ್ಕಿನಂತಾಯಿತು. ಸೆಲ್ಲಿ...ಯ ಎಲ್ಲಿ ಹೋದಲ್ಲಿ ಬೆಲ್ಲಾದ', ನಿಜ. ಅವರ ದಿವ್ಯ..., ಮನೋಧರ್ಮ, ಹೃದಯ ಶ್ರೀಮಂತಿಕೆಯೇ ದ...ಂದು. "ಭಕ್ತನಾದರೆ ಬೆಲ್ಲದಿ ಕುಳಿಯಂತಿರ...ು" ಎಂದಿಲ್ಲವೇ ಅವರೇನೇ. ಎಲ್ಲಿ ಹೋದರೂ ...ರು "ಬೆಲ್ಲ" ವಾಗುವುದರಲ್ಲಿ ಆಶ್ಚರ್ಯವೇನು?

'ಅನುಭವ ಮಂಟಪ' – ಹೆಸರೇ ನಿತ್ಯ ನೂತನ ಅರ್ಥದೀಪ್ತ. ಅದರ ಮಹತ್ವದ ಕಾರ್ಯಕಲಾಪಗಳು ಕಲ್ಯಾಣದ ಮನೆಮನೆಯ ಹೃದಯ ವೀಣೆಯನ್ನು ಮಿಡಿಯುವಂತಾಯಿತು. ಜಾತಿಮತ ಪಂಥಗಳ ಬಂಧನವನ್ನು ಹರಿದು ಆತ್ಮಜ್ಞಾನಕ್ಕೊಳಗಾದ ಭಕ್ತರೆಲ್ಲ ತಮ್ಮ ತಮ್ಮ ವಿಚಾರಧಾರೆಯನ್ನು ಹರಿತವಾದ, ನಿಸ್ಪೃಷ್ಟವಾದ ವಾದವಿವಾದದ ಸಾಣೆಗಲ್ಲಿನ ಮೇಲೆ ಉಜ್ಜುತ್ತಾ ಮರಮರ ಮಥನಿಸಿ ಕಿಚ್ಚು ಹುಟ್ಟುವಂತೆ ಆತ್ಮ ಆತ್ಮ ಮಥನಿಸಿ ದಿವ್ಯ ಜ್ಞಾನ ಹುಟ್ಟುವುದಕ್ಕೆ ಪ್ರವರ್ತಕರಾದಾಗ ಬಸವಣ್ಣನವರ ಆತ್ಮ ಆನಂದ ತುಂದಿಲವಾಯಿತು. ಬಯಸಿದ ಬೆಳೆ ಕೈಗೂಡಿ ಬಂದಂತಾಯಿತು.

ಹಾರುವರ ಕುಲ ಹೊರೆಯ ಬೀರನ್ನೆ ಕಿತ್ತೊಗೆದು
ಸಾರಿದನು ಬಸವ ಬೆಂಗುಡಿಗ। ಶರಣರಿಗೆ
ಧೀರ ಕಾಯಕವೇ ಕುಲವಾತು॥

ಕಾಯಕದ ಕುಲವನ್ನು ನಿರ್ಮಿಸಿದ ಅದ್ಭುತ ಕ್ರಾಂತಿ ಪುರುಷರಾದರು ಬಸವಣ್ಣನವರು. ಅವರ ವೈಚಾರಿಕ ಪ್ರಜ್ಞೆಯ, ಆತ್ಮರತಿಯ ದಿವ್ಯ ಸಂಗಮವಾಯಿತು ಕಾಯಕ. ಕಾಯಕದಿಂದ ಕೈಲಾಸವೆನ್ನದೆ, ಕಾಯಕವೇ ಕೈಲಾಸ ಎಂಬ ಅಖಂಡ ಮಂಗಳ ದೃಷ್ಟಿಯ ವಿಭೂತಿಯಾತ್ಮರಾದರು. ಅಸ್ಪೃಶ್ಯತೆಯ ಬಗ್ಗೆ ಅವರು ನೊಂದು ಪರಿತಪಿಸಿ, ಅದರ ನಿವಾರಣೆಗಾಗಿ ಸಕ್ರಿಯವಾಗಿ ಶ್ರಮಿಸಿದರು. ಆ ಮುಖೇನ ಬಂದ ಕಹಿಯನ್ನುಂಡು ಲೋಕದ ಡೊಂಕಿಗೆ ಮರುಗಿದರು. ಶರಣ ಹರಳಯ್ಯನವರು ತಾನು ಹೊಲೆಯರವನೆಂದೂ ತನ್ನನ್ನು ಮುಟ್ಟಬಾರದೆಂದೂ ಬಸವಣ್ಣನವರನ್ನು ಬೇಡಿದಾಗ—

ಹೊಲೆಯಲಲ್ಲದೆ ಲೊಕ ತಲೆಯಲ್ಲಿ ಹುಟ್ಟುವುದೆ
ಹೊಲೆಯ ಎಣಿಸಿದರೆ ಕುಲವುಂಟೆ। ಶರಣರಿಗೆ
ಹೊಲಬಳಿದು ಬೇರೆ ಕುಲವುಂಟೆ॥

–ಎಂದೆನ್ನುತ್ತಾ ತಮ್ಮ ಪ್ರಾಣವನ್ನಪ್ಪುವಂತೆ ಅಪ್ಪಿ 'ಮನದೊಳು ಮಾತನಾಡಿಸು' ತ್ತಾರೆ. ನೀತಿಮಂಟಪದ ಮೂಲಚೂಲರಾದ ಅವರು ಕುಲದ ಬೇರುಕಿತ್ತು ಸಮಾಜ ಸುಧಾರಣೆಯ ದೀವಟಿಗೆಕಾರರಾದರು. ಅವರ ಪ್ರಭಾವ ಮಧುವರಸನಂಥ ಹಿರಿಯ ವ್ಯಕ್ತಿಯನ್ನು ಪರಿವರ್ತಿಸಿತು.

ಹಾರುವರ ಮಧುವರಸ ಊರವರಾತನು ಮೀರಿ
ಧಾರೆ ಎರೆದಿತ್ತು ಮಗಳನ್ನು। ಬೀಗಾದ
ಮಾರಹರ ಭಕ್ತ ಹರಳನಿಗೆ॥

ಮೇಲು-ಕೀಳೆಂಬ ಭಾವನೆಯನ್ನ ಬಯಲಾಗಿಸಿ, ಅವೆರಡರ ಸುಂದರ ಸಂಬಂಧವನ್ನು ವಿನೂತನವಾಗಿ, ಅದ್ಭುತ ಪವಾಡವೆಂಬಂತೆ ನಡೆಯಿಸಿದರು. ಆದರೆ ದೀಪದ ಬೆಳಕು ಸೇರದ ಕುರುಡರು ಯಾವ ಕಾಲದಲ್ಲೂ ಇದ್ದೇಯಿರುತ್ತಾರೆ. ಕೆಲವರು ಹಿಸುಣರು ರಾಜಬಿಜ್ಜಳನಿಗೆ ಜಾತಿಸಂಕರವಾಗುತ್ತಿದೆಯೆಂದೂ, ಅದಕ್ಕೆ ಬಸವಣ್ಣನವರೇ ಕಾರಣರೆಂದೂ ದೂರು ಹೊತ್ತರು. ಬಿಜ್ಜಳನಿಗೂ ಕೋಪ ಹೆಚ್ಚಿತ್ತು. ಪರಿಸರಣದ ಪ್ರಭಾವದಿಂದ ಬಸವಣ್ಣನವರು "ಅರಮನೆಗೆ ಶಿವನುರಿ" ಬೇಡವೆಂದು ಎಷ್ಟು ಹೇಳಿದರೂ

ಅರಸ ಬಿಜ್ಜಳರಾಯ ಮರೆತು ಬಸವನ ಮಾತ
ಕರೆಸಿ ಶರಣರಿಗೆ ವಿಷ ಬಿಟ್ಟ। ಬಸವಯ್ಯ
ಹೊರಹೊಂಟ ಹೇಸಿ ಮನನೊಂದು॥

ಅಭಿಮಾನಿಯ ಶರಣ ತನ್ನ ಮಾತಿಗೆ ಮನ್ನಣೆ ದೊರೆಯದಾದಾಗ 'ಅರಸ ಮುನಿದರೆ ನಾಡೊಳಗೆ ಬಾರದಯ್ಯ' ಎಂದು ನಿಶ್ಚಯಿಸಿ ಲೋಕದರಸನ ಸನ್ನಿಧಿಗೆ ತೆರಳಲು ನಿರ್ಧರಿಸಿ ಕಲ್ಯಾಣದಿಂದ ಕಾಲ್ತೆಗೆದರು. ಅ ಮುಂಚೆ ತಾವೇ ಆಶಿಸಿ ಪೋಷಿಸಿದ ಅನುಭವ ಮಂಟಪದ ಉತ್ತರಾಧಿಕಾರತ್ವವನ್ನು ಜ್ಞಾನನಿಧಿಯಾದ ಸೋದರಳಿಯ ಚೆನ್ನಬಸವಣ್ಣನವರಿಗೆ ವಹಿಸಿಕೊಡುವುದಕ್ಕೆ ಮುಂದಾದರು.

ಶಿವಯೋಗಿ ಹುಗ ಬಾರೊ ಶಿವಪುತ್ರ ಚೆನಬಸವ
ಶಿವಶಾಣಿ ಚೆನ್ನ ಬಸವಣ್ಣ! ಕಲ್ಯಾಣ
ಶಿವಗಳಸ ಬಾರೊ ಜುಂಬೆಜಕೆ॥

ಎಂದು ಮುಕ್ತ ಹೃದಯದಿಂದ ಕಲ್ಯಾಣದ ಶಿವಗಳಸ ದಂತಿದ್ದ ಚೆನ್ನ ಬಸವಣ್ಣನವರಿಗೆ ಅನುಭವ ಮಂಟಪದ ವಹಿವಾಟು ವಹಿಸಿಕೊಟ್ಟು ಪುರದ ಪುಣ್ಯವೇ ಪುರುಷ ರೂಪಿಂದ ಪೋಗುತಿದೆ ಎಂಬಂತೆ ಕೃಷ್ಣಾ ಮಲಪ್ರಭಾನದಿಗಳ ತೋಳ್ತೆಕ್ಕೆಯಲ್ಲಿದ್ದ ಕಪ್ಪಡಿಯ ಸಂಗಮಕ್ಕೆ ನಡೆದರು.

ಹೇಳಿ ಹೊರಟನು ಬಸವ ಕೇಳಲಾರದೆ ಮಾತ
ಗೋಳಿಟ್ಟು ಜನವು ಶರಣಾಲೆ! ಸಂಗಮಕೆ
ಆಳು ಬಸವಯ್ಯ ದಯವಿಟ್ಟು॥

ಎಂದು ಕಲ್ಯಾಣದ ಜನ ಸಾಲುಗಟ್ಟಿದರು ಸಂಗಮದ ವರೆಗೆ. ಜನಮನವನ್ನು ಲೋಕ ಹೃದಯವನ್ನು ಗೆದ್ದ ಆದರ್ಶ ನಾಯಕರತ್ನರಾದರು ಬಸವಣ್ಣ. 'ನೀನೇ ನಮ್ಮನ್ನು ಆಳಬೇಕು' ಎಂದು ಜನತೆ ದುಂಬಾಲು ಬೀಳುವ ದೃಶ್ಯ ರಮಣೀಯಕ! ಬಸವಣ್ಣನವರು ಇದ್ದೂ ಇಲ್ಲದಂತೆ ಬಾಳಿದರು. ಜನರ ಪ್ರಾರ್ಥನೆಯನ್ನು ತೆರೆದ ಕಿವಿಗಳಿಂದಾಲಿಸಿದರೂ ಪುನಃ ಅಧಿಕಾರ ಪದವಿ ಪಟ್ಟಗಳಿಗಾಶಿಸದೆ

ಹರಹರನೆ ಪರಸಂಗ ಗುರು ಎನಗೆ ಪರಸಂಗ
ಕರುಣ ನಿಧಿ ಹರನೆ ಸಂಗಮನೆ! ಎಂದೆನುತ
ಕರಮುಗಿದು ಬಸವ ಬಯಲಾದ॥

ಸಂಗಮದಲ್ಲಿ, ಸಂಗಮನಲ್ಲಿ ಬಸವಣ್ಣ ಬಯಲಾದರು. ಜನಪದ ಕವಿಯ ಎದೆಯಲ್ಲಿ ನೆಲೆ ನಿಂತರು. ಕವಿ ಬಸವನ ಮಹಿಮೆಯನ್ನು 'ಕೋಚೆತ್ತಿ' ಹಾಡಿದ್ದಾನೆ.

ಬಸವ ಭಕ್ತಿಯ ಬೀಜ ಬಸವ ಮುಕ್ತಿಯ ತೇಜ
ಬಸವ ಕಾಯಕದ ಗುರು ಬೀಜ! ಶಿವಮಂತಕೆ
ಬಸವ ಓಂಕಾರ ಶಿವನಾಮ॥

ಭಕ್ತಿಯ ಬೀಜವಾಗಿ, ಮುಕ್ತಿಯ ತೇಜವಾಗಿ, ಬಾಗಿ ಕಾಯಕದ ಗುರುಬೀಜವಾಗಿ ಅವರು ಬಾಳಿ ಮಿಂಚಿನ ಹೆಜ್ಜೆಯನ್ನೂರಿ ಹೋಗಿದ್ದಾರೆ; ದಿ...ಟಪ ...ನು ಜೀವನದ ಹಾದಿತಳದು ತೋರಿದ್ದಾರೆ. ...ರು

ಬಸವ ರಾಜ್ಯದ ಸಿರಿಯು ಬಸವ ಬಡವರ ನಿಧಿಯ...
ಬಸವ ಮಳೆ ಬೆಳೆಯು ನಾಡೊಳಗೆ! ನಿಜದೀಪ
ಬಸವನೇ ಸಗ್ಗ ಸೋಪಾನ॥

ಧರ್ಮಾತ್ಮರ, ಸಾಧು ಸಂತರ ಪುಣ್ಯ ಸ್ಮರಣೆ, ಆದರ್ಶಗಳ ಅನುಕರಣೆ, ಅನುಸರಣೆಗಳು ಇಹಪರಗಳ ಸೋಪಾನವಾಗುವುದರಲ್ಲಿ ಅತಿಶಯೋಕ್ತಿ ಏನಿದೆ ಮಾನವ ಜನಾಂಗದ ಒಳಿತಿಗಾಗಿ ಜೀವನವನ್ನು ಮುಡಿಪಿಟ್ಟು ದುಡಿದ ಕೆಲವೇ ಪುಣ್ಯ ಜೀವಿಗಳು ಪಂಕ್ತಿಯಲ್ಲಿ ಅಣ್ಣನವರೂ ಎತ್ತರದಲ್ಲಿಯೇ ನಿಂತಿದ್ದಾರೆ 'ರಾಜ್ಯದ ಸಿರಿಯಾಗಿ' ಜನಪದ ಸಾಹಿತ್ಯದಲ್ಲಿ ಅವರ ಚಿತ್ರ ಮೂಡಿಬಂದಿರುವುದಂತೂ ಹೃದಯವೇದ್ಯವಾಗಿದೆ; ಸಹಜ ಸೌಂದರ್ಯದಿಂದ ಕಂಗೊಳಿಸುತ್ತಿದೆ. ಸರಳತೆ, ಮುಗ್ಧತೆಯಿಂದ ಜನಪದ ಕವಿ ಬಸವಣ್ಣನವರ ಜೀವನ ಚಿತ್ರಕ್ಕೊಂದು ಸುಂದರವಾದ ಸುವರ್ಣದ ಚೌಕಟ್ಟು ಕಟ್ಟಿ ಧನ್ಯನಾಗಿದ್ದಾನೆ. 'ಅಪೌರುಷ ಕವಿತೆ' ಯಾದ ಜನಪದ ಸಾಹಿತ್ಯ ನಾಗರಿಕತೆಯ ಕಾಲದಲ್ಲಿ ಇತಿಹಾಸ ಪುರಾಣಗಳ ಸಾರವನ್ನು ಜನರ ಮಟ್ಟಕ್ಕಿಳಿಸುವುದೂ, ಚರಿತ್ರೆಯಲ್ಲಿ ನಡೆದ ಮರೆಯಲಾಗದ ಸಂಗತಿಗಳನ್ನು ಜನರ ನೆನಪಿನಲ್ಲಿ ನಿಲ್ಲಿಸುವುದೂ. ಭಕ್ತಿ ಜ್ಞಾನ ವೈರಾಗ್ಯಗಳನ್ನು ಮನೆಮನೆಗೆ ಬೀರುವುದೂ ತನ್ನ ಕೆಲಸವನ್ನಾಗಿಸಿಕೊಂಡು ಹೆಸರಿನ ಕೆಸರಾಸೆಗೆ ಆಶಿಸದೆ ಅಜ್ಞಾತವಾಗಿಯೇ ಸೇವೆಸಲ್ಲಿಸುತ್ತಿದೆ.





# ದಾಸಿಮಯ್ಯನ ಭಕ್ತಿಭಾವ

—ಡಿ. ಕೆ. ರಾಜೇಂದ್ರ, ಜಾನಪದ ವಿಭಾಗ
ಮಾನಸಗಂಗೋತ್ರಿ ಮೈಸೂರು.

ದೇವರದಾಸಿಮಯ್ಯನೇ ಆದ್ಯವಚನಕರ್ತೃವಲ್ಲದಿದ್ದರೂ, ಈಗ ದೊರೆತಿರುವ ವಚನಗಳಲ್ಲಿ ದೇವರ ದಾಸಿಮಯ್ಯನ ವಚನಗಳೇ ಮೊದಲಿನವುಗಳಾಗಿವೆ. ಇವನಿಗಿಂತ ಹಿಂದೆ ವಚನಗಳು ರಚಿತವಾಗಿದ್ದಿರಬಹುದಾದರೂ, ಅವುಗಳಾವುವೂ ನಮಗೆ ಇದುವರೆವಿಗೂ ದೊರೆತಿಲ್ಲ. ಆದರೆ, ಇಷ್ಟರಿಂದಲೇ ದುಡುಕಿ, ದಾಸಿಮಯ್ಯನನ್ನೆ ಆದ್ಯವಚನಕರ್ತೃವೆಂದೂ ಕರೆಯುವಂತಿಲ್ಲ. ಇವನಿಗಿಂತ ಹಿಂದೆ ವಚನಕಾರರು ಇದ್ದರೆಂಬುದು ದಾಸಿಮಯ್ಯನ ವಚನಗಳಿಂದ ಊಹಿಸಬಹುದಾಗಿದೆ.

ಕರಿಯನಿತ್ತಡೆ ಒಲ್ಲೆ. ಸಿರಿಯನಿತ್ತಡೆ ಒಲ್ಲೆ ಹಿರಿದಪ್ಪ
ರಾಜ್ಯವ
ನಿತ್ತಡೆ ಬಲ್ಲೆ. ನಿಮ್ಮ ಶರಣರ ಸೂಳ್ನುಡಿಯ ಒಂದರ
ಗಳಿಗೆ
ಇತ್ತಡೆ, ನಿಮ್ಮ ನಿತ್ತೆ ಕಾಣಾ ರಾಮನಾಥಾ.

ಆದರೆ, ಇದುವರೆವಿಗೂ ದಾಸಿಮಯ್ಯನಿಗೆ ಹಿಂದೆ ರಚಿತವಾಗಿರಬಹುದಾದ ಯಾವ ವಚನಗಳೂ ದೊರೆಯದೆ ಇರುವುದರಿಂದ, ಇವನನ್ನೇ ಆದ್ಯವಚನ ಕರ್ತೃವೆಂದು ಭಾವಿಸಬಹುದಾಗಿದೆ.

"ಇವನ ವಚನಗಳು ಎಲ್ಲಿಯೂ ಒತ್ತಟ್ಟಿಗೆ ಸಿಕ್ಕುವುದಿಲ್ಲ" [1] ಸಿಕ್ಕಿರುವಷ್ಟು ವಚನಗಳಿಂದಲೇ ನೋಡುವುದಾದರೆ, ದೇವರದಾಸಿಮಯ್ಯನ ವಚನಗಳ ಮಹತ್ವ ಎಂಥದೆಂಬುದು ಅರ್ಥವಾಗುತ್ತದೆ. ವೀರಶೈವ ಮತದ ಧರ್ಮ ಇವನ ವಚನಗಳಲ್ಲಿ ಅತ್ಯಂತ ಮಾರ್ಮಿಕವಾಗಿ, ಪುಷ್ಪದಲ್ಲಿ ಅಡಗಿರುವ ಪರಿಮಳದಂತೆ ಅಡಕಗೊಂಡಿದೆ. ಭಕ್ತ ಭಗವಂತರ ಸಂಬಂಧ, ಭಕ್ತಿಯಲ್ಲಿರಬೇಕಾದ ನಿಷ್ಠೆ, ನಿಯಮ, ಅಂತಃಶುದ್ಧಿ–ಇವುಗಳನ್ನು ಒತ್ತಿ ಮನ ಮುಟ್ಟುವಂತೆ ಹೇಳಿದ್ದಾನೆ.

---

[1] ಫ. ಗು. ಹಳಕಟ್ಟಿ : ದೇವರದಾಸಿಮಯ್ಯನ ವಚನಗಳು-ಪು. 1

ದಾಸಿಮಯ್ಯ ಪವಾಡ ಪುರುಷನೆಂದು ಹೆಸರಾದವನು. ಹೋದೆಡೆಗಳಲ್ಲೆಲ್ಲಾ, ವಾದವಿವಾದಗಳು ಏರ್ಪಟ್ಟ ಕಡೆಗಳಲ್ಲೆಲ್ಲಾ ಶಿವನ ಮಹಿಮೆಯನ್ನು ಮನಗಾಣಿಸಲು ಪವಾಡಗಳನ್ನು ಮಾಡಿ, ಶಿವನ ಮಹಿಮೆಯನ್ನು ಮೆರೆದಿದ್ದಾನೆ. ಇವನ ಪವಾಡ ಶಕ್ತಿಗೆ ಮರುಳಾಗಿ, ಅನೇಕರು ವೀರಶೈವ ಮತಾವಲಂಬಿಗಳಾದರು

ಬಸವಣ್ಣನವರು 'ಭಕ್ತಿಭಂಡಾರಿ' ಎಂದು ಹೆಸರುಗೊಂಡಿದ್ದರೂ, ಭಕ್ತಿ ಸಾಧನೆಯ ಕ್ರಮ ಅವರ ವಚನಗಳಲ್ಲಿ ಸ್ಪಷ್ಟವಾಗಿ ಮೂಡಿಬಂದಿದ್ದರೂ, ದಾಸಿಮಯ್ಯನ ವಚನಗಳಲ್ಲಿ ಈ ಅಂಶ ಅಷ್ಟೇ ಸ್ಪಷ್ಟವಾಗಿ, ಮೂಡಿ ಬಂದಿದೆ. ಮೋಕ್ಷವನ್ನು ಗಳಿಸಲು ಅಗತ್ಯವೆನಿಸಿದ–ಭಕ್ತ, ಮಹೇಶ. ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಆರು ಸ್ಥಲಗಳನ್ನು ದಾಸಿಮಯ್ಯ ವಿಸ್ತಾರವಾಗಿ ವಿವರಿಸಿದ್ದಾನೆ. ಭಕ್ತಿಮಾರ್ಗದಲ್ಲಿ ನಡೆಯುವವನು ಮಾಯೆಗೆ ಒಳಗಾಗಿ ಎಂದೂ ದಾರಿತಪ್ಪಬಾರದು. ಆತ್ಮಶುದ್ಧಿ, ಮನಸ್ಥೈರ್ಯ ಇವುಗಳು ಭಕ್ತನಾಗುವವನಿಗಿರಬೇಕಾದ ಮೊದಲ ಗುಣಗಳು ಭಗವಂತ ಭಕ್ತನನ್ನು ಹಲವಾರು ಬಗೆಗಳಲ್ಲಿ ಪರೀಕ್ಷಿಸಿ ನೋಡುತ್ತಾನೆ. ಕಷ್ಟನಷ್ಟಗಳಿಗೆ ಗುರಿಮಾಡುತ್ತಾನೆ. ಆದರೆ ಅವುಗಳನ್ನೆಲ್ಲ ಧೈರ್ಯದಿಂದ ಗೆದ್ದು ಅಜೇಯನೆನಿಸಿ ಕೊಂಡಾಗಲೇ ಭಗವಂತ ಅವನನ್ನು ಕೈಹಿಡಿದು ಎತ್ತಿಕೊಳ್ಳುವುದು :

ಹರ ತನ್ನ ಭಕ್ತರ ತಿರಿವಂತೆ ಮಾಡುವ. ಬರೆದು
ನೋಡುವ,
ಸುವರ್ಣದ ಚಿನ್ನದಂತೆ; ಅರೆದು ನೋಡುವ,
ಚಂದನದಂತೆ;
ಅರೆದು ನೋಡುವ, ಕಬ್ಬಿನ ಕೋಲಿನಂತೆ; ಬೆದರದೆ
ಬೆಚ್ಚದೆ
ಇದ್ದಡೆ ಕರವಿಡಿದೆತ್ತಿಕೊಂಬ ನಮ್ಮ ರಾಮನಾಥಾ,

'ಕಷ್ಟ ಬಂದಾಗ ಮಾತ್ರ ವೆಂಕಟರಮಣ' ಎಂದು ಕಾಲಿಪಾಡಿಯಲು ಬರುವ ಕಪಟ ಭಕ್ತರನ್ನು ಭಗವಂತ

ಎಂದೂ ರಕ್ಷಿಸುವುದಿಲ್ಲ. ಸಂದರ್ಭವಶಕ್ಕೆ ಒಳಗಾಗಿ ಭಗವಂತನನ್ನು ಮರೆಹೊಕ್ಕರೆ ಅವನು ಎಂದೂ ಮೈದೋರುವವನಲ್ಲ. ಅವನು ಮಾಡುವ ಪೂಜೆ ಅಂತರಂಗದಿಂದ ಬಂದದಾಗಬೇಕು. ಲೌಕಿಕ ಸುಖದಲ್ಲಿ ಮೈಮರೆತು, ಮಾಡಬಾರದ್ದನ್ನೆಲ್ಲಮಾಡಿ, ಅದಕ್ಕಾಗಿ ಪ್ರಾಯಶ್ಚಿತ್ತವನ್ನು ಅನುಭವಿಸಬೇಕಾಗಿ ಬಂದಾಗ ಭಗವಂತನನ್ನು ಮರೆಹೊಕ್ಕರೆ, ಅವನೂ ಆಗ ಕೈಕಟ್ಟಿ ಕೂರುತ್ತಾ„ ನೆಜ್ವರವಿಡಿದ ಬಾಯಿಗೆ ನೊರೆ ಹಾಲು ಹೇಗೆ ರುಚಿಸುವುದಿಲ್ಲವೋ ಹಾಗೆ, ನರಕದಲ್ಲಿ ಬೀಳುವ ಮನುಜರಿಗೆ ಶಿವಭಕ್ತಿ ಎಂಬುದು ಕರಗಹಿಯಾಗಿ ಕಾಣುತ್ತದೆ."

‘ನಂಬಿ ನೆಚ್ಚಿ ಕರೆದರೆ ಓ ಎನ್ನುವನೆ’ ಹೊರತು, ಹಾಗಲ್ಲದೆ ಆಡಂಬರದ, ಬೂಟಾಟಿಕೆಯ, ಕಪಟ ಭಕ್ತಿಗೆ ಭಗವಂತ ಎಂದೂ ಮೈದೋರುವುದಿಲ್ಲ ಅಂಥ ಭಕ್ತರನ್ನು ದಾಸಿಮಯ್ಯ ನಾಯಿಗೂ ಕಡೆಯಾಗಿ ಭಾವಿಸುತ್ತಾನೆ:

ಒಲವಿಲ್ಲದ ಭಕ್ತಿ, ಲವಲವಿಕೆ ಇಲ್ಲದ ಪೂಜೆ,
ಸಲೆನಿಮ್ಮ
ನಂಬಿ ನಂಬದವನ ಬಾಳುವೆ, ಹೊಲೆಯರ ನಾಯಿ
ಹುಲುಸರ
ನಿಯಿಂದ ಕರಕಷ್ಟ, ಕಾಣಾ ರಾಮನಾಥಾ.

ಮಾಡುವ ಪೂಜೆ ಒಲವಿನಿಂದ, ಪ್ರೀತಿಯಿಂದ ಕೂಡಿದುದಾಗಿರಬೇಕು. ದೇವರನ್ನು ನಂಬದೆಯೆ, ನಂಬಿಯು ನಂಬದಂತೆ ನಲಿಸುವವನ ಭಕ್ತಿ ಅರ್ಥವಿಲ್ಲದುದಾಗುತ್ತದೆ. ಅಂಥವರ ಪಾಡು ‘ಹೊಲೆಯರ ನಾಯಿಗೂ’ ಕಡೆಯಾದುದಾಗುತ್ತದೆ ಎಂದು ಕಟುವಾಗಿ ನುಡಿದಿದ್ದಾನೆ. ಆತ್ಮಶುದ್ಧಿಯಿಲ್ಲದ ಭಕ್ತಿ, ದೇವರಿಗೆ ಎಂದೂ ಮೆಚ್ಚಿಕೆಯಾಗುವುದಿಲ್ಲ; ಶ್ರೀಮಂತರು ದೇವಸ್ಥಾನಗಳಿಗೆ ಹೋಗಿ ಆಡಂಬರದಿಂದ ಮಾಡಿಸುವ ಪೂಜೆಯನ್ನು ದಾಸಿಮಯ್ಯ ಗಮನಿಸಿದ್ದನೆಂದು ಕಾಣುತ್ತದೆ. ಅಂತಹವರ ಬಗ್ಗೆ ದಾಸಿಮಯ್ಯ ಕಟುವಾಗಿ ಖಂಡಿಸುತ್ತಾನೆ:

ಸತಿಯರ ಸಂಗವನು, ಅತಿಶಯದ ಗಾಸವನು,
ಪೃಥ್ವಿಗೀಶ್ವರನ ಪೂಜೆಯನು-ಅರಿವುಳ್ಳಡೆ
ಹೆರರ ಕೈಯಿಂದ ಮಾಡಿಸುವರೆ ರಾಮನಾಥಾ?

ಭಕ್ತಿಯಲ್ಲಿ ನಿಷ್ಠೆಯಿಲ್ಲದೆ, ಬಾಹ್ಯ ಲಾಂಛನಗಳನ್ನು ಧರಿಸಿ ಜನರನ್ನು ಮರುಳು ಗೊಳಿಸಬಹುದಲ್ಲದೆ, ಭಗವಂತನನ್ನು ಮರುಳುಗೊಳಿಸಲಾಗುವುದಿಲ್ಲ. ಡಂಭಾಚಾರದ ಪೂಜೆಯಿಂದ ಮುಕ್ತಿ ಎಂದೂ ದೊರೆಯಲಾರದು. ಹಾಕುವ ಬೀಜ ಗಟ್ಟಿಯಾಗಿದ್ದು, ಸತ್ವಯುತವಾಗಿದ್ದರೆ ಮಾತ್ರ ಅದರಿಂದ ಬಿಡುವ ಫಲವೂ ಫಲಕಾರಿಯಾಗಿರುತ್ತದೆ. ಹಾಗೆ ಮಾಡುವ ಪೂಜೆಯಲ್ಲಿ ನಿಷ್ಠೆ ಇದ್ದರೆಮಾತ್ರ, ಆ ನಿಷ್ಠೆಯಿಂದ ಕೂಡಿದ ಭಕ್ತಿ ಮುಕ್ತಿಗೆ ದಾರಿಮಾಡಿಕೊಡುತ್ತದೆ. ನಿಷ್ಠೆಯಿಲ್ಲದ ಪೂಜೆ ಯಾವ ಪುರುಷಾರ್ಥವನ್ನೂ ಸಾಧಿಸಲಾರದು. ದಾಸಿಮಯ್ಯ ಇಂತಹ ಡಾಂಬಿಕ ಭಕ್ತರ ಬಗ್ಗೆ ಕಟುವಾಗಿ ನುಡಿದಿದ್ದಾನೆ.

ಹಂದಿ ಶ್ರೀಗಂಧವ ಹೂಸಿದಡೇನು? ಗಂಧರಾಜನಾಗ
ಬಲ್ಲುದೆ? ನವಿಲು
ನಲಿಯುತ್ತೆಂದಡೆ, ಕಾಡುಕೋಳಿ ಪುಚ್ಚವ ತೆರೆಕೊಂ
ಡಂತೆ ಕರ್ಮಿಗಳ ಭಕ್ತಿ.
ಹೊರವೇಷದಲ್ಲಿ ವಿಭೂತಿ ರುದ್ರಾಕ್ಷಿಯ ಹೂಸಿದ
ಡೇನು? ತೆರನನರಿದು
ಮರವೆಯ ಕಳೆದು ಮಾತಿನಂತೆ ನೀತಿಯುಳ್ಳಡೆ
ಅವರನಜಾತೆಯೆಂಬೆ ಕಾಣಾ ರಾಮನಾಥಾ.

ಮಾತಿನಂತೆ ನೀತಿಯುಳ್ಳವನಾಗಿ ನಡೆದಾಗ ಅವನು ಮಾಡುವ ಪೂಜೆಯಲ್ಲಿಯೂ ನಿಷ್ಠೆಯಿರುತ್ತದೆ. ಭಕ್ತಿಯ ಮಾರ್ಗವನ್ನರಿಯದೆ ವ್ಯರ್ಥವಾಗಿ ಆಡಂಬರದ ಪೂಜೆಯನ್ನೆಸಗಿದರೆ ದೇವರು ಮರುಳಾಗುವುದಿಲ್ಲ. ‘ನವಿಲನ್ನು ನೋಡಿ ಕೆಂಬೂತ ಪುಕ್ಕ ತರೆದು ಕೊಂಡಂತೆ’ ಅದು ಕೇವಲ ಅನುಕರಣೆಯಾಗುತ್ತದೆ. ಇಂತಹ ಭಕ್ತರನ್ನು ಹಂದಿಗಳಿಗೆ ಹೋಲಿಸಿ ಕರ್ಮಿಗಳೆಂದು ಕರೆಯುತ್ತಾನೆ ದಾಸಿಮಯ್ಯ.

ನಿಜವಾದ ಭಕ್ತ ಜ್ಞಾನಿಯೂ ಆಗಿರುತ್ತಾನೆ. ಜ್ಞಾನವಿಲ್ಲದ ಭಕ್ತಿ ಮುಕ್ತಿಮಾರ್ಗಕ್ಕೆ ಬಾಧಕವೇ ಹೊರತು, ಸಾಧಕವಾಗಲಾರದು. ಅದನ್ನೇ ದಾಸಿಮಯ್ಯ ‘ಅನುಭಾವ’ ಎಂದು ಕರೆಯುತ್ತಾನೆ. ಕಾಟಾಚಾರಕ್ಕಾಗಿ ಅಥವಾ ಯಾವುದೋ ಭಯದಿಂದ ಭಗವಂತನ ಮರೆಹೊಕ್ಕು, ಅವನನ್ನು ಪೂಜಿಸುವವ



ರನ್ನು ದಾಸಿಮಯ್ಯ ಕಂಡಿರಬೇಕು. ಅಂತಹವರನ್ ದಾಸಿಮಯ್ಯ ಎಚ್ಚರಿಸಲು ಪ್ರಯತ್ನಿಸಿದ್ದಾನೆ:

ಅನುಭಾವವಿಲ್ಲದವನ ಭಕ್ತಿ ತಲೆಕೆಳಗಪ್ಪುದಯ್ಯಾ?
ಅನುಭಾವವೇ
ಭಕ್ತಿಗಾಧಾರ. ಅನುಭಾವವೇ ಭಕ್ತಿಗೆ ನೆಲೆವನೆ
ಅನುಭಾವವುಳ್ಳವರ
ಕಂಡರೆ ತೂರ್ಯಾ ತೂರ್ಯ ಸಂಭಾಷಣೆಯ ಮಾಡದಿ
ರ್ದರೆ ನರಕದಲ್ಲಿಕ್ಕಯ್ಯ ರಾಮನಾಥಾ.

ಭಕ್ತನಾದವನು, ಜ್ಞಾನಿಗಳು ಸಿಕ್ಕಿದಾಗ ಅವರೊಡನೆ ಸಂಭಾಷಣೆ ನಡೆಸಿ ತನ್ನ ಜ್ಞಾನವನ್ನು ಮತ್ತಷ್ಟು ವೃದ್ಧಿಗೊಳಿಸಿಕೊಳ್ಳಲು ಪ್ರಯತ್ನಿಸಬೇಕು. ಅದು ಭಕ್ತಿಮಾರ್ಗವನ್ನು ಸುಲಭಗೊಳಿಸುವಲ್ಲಿ, ಮುಕ್ತಿ ಮಾರ್ಗಕ್ಕೆ ಹತ್ತಿರವಾಗಿರಲು ನೆರವಾಗುತ್ತದೆ. ಹಾಗೆ ತನ್ನ ಜ್ಞಾನವನ್ನು ಹೆಚ್ಚಿಸಿಕೊಳ್ಳಲು ಪ್ರಯತ್ನಿಸದ ಭಕ್ತನನ್ನು ನರಕದಲ್ಲಿಕ್ಕಯ್ಯ ರಾಮನಾಥಾ ಎನ್ನುತ್ತಾನೆ.

“ವಚನಕಾರರು ಭಕ್ತಿಯ ಸ್ವರೂಪವನ್ನು ವಿವರಿಸುವುದು ನೋಡಿದರೆ ಜ್ಞಾನದಿಂದಲೇ ಮುಕ್ತಿ ಎಂಬ ವಾದವನ್ನು ವಚನ ಧರ್ಮದಲ್ಲಿ ಅಂಗೀಕರಿಸುವುದಿಲ್ಲವೆಂಬುದು ತಿಳಿಯುತ್ತದೆ. ಆದರೆ ಜ್ಞಾನದ ಅವಶ್ಯಕತೆಯನ್ನೂ, ಜ್ಞಾನದಿಂದಲೂ ಮುಕ್ತಿಯುಟೆಂಬುದನ್ನು ವಚನಧರ್ಮ ಒಪ್ಪುತ್ತದೆ. ಅದರ ವಿವರಣೆಯಲ್ಲಿ ಬಹುಮಟ್ಟಿಗೆ ಅದ್ವೈತದ ದೃಷ್ಟಿಯನ್ನಿಟ್ಟುಕೊಂಡಿರುವಂತೆ ತೋರುತ್ತದೆ. ಆತ್ಮಸ್ವರೂಪವನ್ನು ತಿಳಿಯದೇ ಇರುವುದರಿಂದ ಪುಣ್ಯ ಪಾಪಗಳು ಸುಖ ದುಃಖಗಳು, ಜನ್ಮಾಂತರಗಳು ಪ್ರಾಪ್ತವಾಗುತ್ತವೆ. ಸಂಸಾರದಿಂದ ಆತ್ಮನಿಗೆ ಬಿಡುಗಡೆಯಾಗುವುದಿಲ್ಲ ಆತ್ಮಜ್ಞಾನವುಂಟಾದರೆ ಮುಕ್ತಿ.”[2] ನಿಷ್ಕಲ್ಮಷ ಭಕ್ತಿಗೆ ಅಂತರಂಗಶುದ್ಧಿ ಬೇಕಾಗಿರುವಂತೆ, ಮುಕ್ತಿಯ ಸಾಧನೆಗೆ ಜ್ಞಾನದ ಆವಶ್ಯಕತೆಯು ಅತಿಯಾಗಿದೆ ಆತ್ಮಶುದ್ಧಿಯಾಗಬೇಕಾದರೆ, ಜ್ಞಾನದೃಷ್ಟಿಯು ಮುಖ್ಯವಾದುದಾಗಿದೆ ಒಳ್ಳೆಯದು ಕೆಟ್ಟದ್ದು, ಪಾ. ಪುಣ್ಯ ಇವುಗಳ ತಾರತಮ್ಯವನ್ನು ಅರಿಯಬೇಕಾದರೆ ಜ್ಞಾನದೃಷ್ಟಿಬೇಕಾಗುತ್ತದೆ. ಆತ್ಮಜ್ಞಾನವುಳ್ಳವನಿಗೆ ಭಕ್ತಿಮಾರ್ಗ-ಮುಕ್ತಿಮಾರ್ಗ ಎರಡೂ ಸುಲಭವೆನಿಸುತ್ತವೆ ಈ ದೃಷ್ಟಿಯಿಂದ ವಚನಕಾರರು ಭಕ್ತಿಮಾರ್ಗಕ್ಕೆ ಜ್ಞಾನದ ಅವಶ್ಯಕತೆಯನ್ನೂ ಒತ್ತಿಹೇಳಿದ್ದಾರೆ:

ಅನುಭಾವವಿಲ್ಲದೆ ಈ ತನು ಎಳತಟವಾದುದಯ್ಯಾ!
ಅನುಭಾವವೇ
ತನುವಿಂಗೆ ಆಧಾರ. ಅನುಭಾವಿಗಳ ಅನುಭಾವ
ಮನವಾರೆ
ವೇಧಿಸಿದವರಿಗೆ ಜನನವಿಲ್ಲ ಕಾಣಾ ರಾಮನಾಥಾ.

ವಚನಕಾರರು ಭಕ್ತಿಮಾರ್ಗದಲ್ಲಿ ಸ್ತ್ರೀಪುರುಷರಿಬ್ಬರಿಗೂ ಸಮಾನ ಸ್ಥಾನವಿದೆಯೆಂಬುದನ್ನು ಹೇಳುತ್ತಾರೆ. ಶಿವನಿಗೆ ಲಿಂಗಭೇದವಿಲ್ಲದೆ ಎರಡೂ ಮೆಚ್ಚಿಕೆಯಾದುದು. “ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ.” ಎಂದು ದಾಸಿಮಯ್ಯ ಹೇಳುತ್ತಾನೆ. ಅನುಭಾವದಿಂದ ಕೂಡಿದ ಭಕ್ತಿ ಯಾರಲ್ಲಿದ್ದರೇನು, ಭಗವಂತ ಅದನ್ನು ಆತ್ಮಾದರದಿಂದ ಸ್ವೀಕರಿಸುತ್ತಾನೆ ಅಲ್ಲದೆ ಸತಿಪತಿಗಳೊಂದಾಗಿ ಸಲ್ಲಿಸುವ ಪೂಜೆ ಮತ್ತೂ ಮಹತ್ವದ್ದಾಗಿರುತ್ತದೆ, ಅಂತಹ ಪೂಜೆಯನ್ನು ಶಿವ ಮೆಚ್ಚಿಕೊಳ್ಳುತ್ತಾನೆ:

ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ
ಸತಿಪತಿಗಳೊಂದಾ
ಗದವನ ಭಕ್ತಿ ಅಮೃತದೊಳು ವಿಷವ ಬೆರೆದಂತೆ ಕಾಣಾ
ರಾಮನಾಥಾ

ಸತಿಪತಿಗಳು ಸಂಸಾರದಲ್ಲಿ ಒಂದಾಗಿದ್ದೂ, ಭಕ್ತಿ ಮಾರ್ಗದಲ್ಲಿ ಬೇರೆ ಬೇರೆ ದಾರಿಯನ್ನು ಹಿಡಿದಾಗ, ಅಂತಹ ಪೂಜೆ ಶಿವನಿಗೆ ಮೆಚ್ಚಿಕೆಯಾಗುವುದಿಲ್ಲ. ಅದು ಅಮೃತದಲ್ಲಿ ವಿಷವ ಬೆರಸಿದಂತಾಗುತ್ತದೆ ಸತಿಪತಿಗಳಾದ ಬಳಿಕ, ಭಕ್ತಿಮಾರ್ಗದಲ್ಲಿ ಅವರ ಮಾರ್ಗ ಒಂದೇ ಆಗಿರಬೇಕು. ಹಾಗಲ್ಲದೆ–

ಗಂಡ ಭಕ್ತನಾಗಿ ಹೆಂಡತಿ ಭವಿಯಾದಡೆ ಉಂಡ ಊಟ
ಇಬ್ಬರಿಗೂ
ಸರಿಭಾಗೆ, ಸತ್ತ ನಾಯ ತಂದಟ್ಟದ ಮೇಲೆ ಇಳುಹಿ
ಇಬ್ಬರೊಪ್ಪ
ಚ್ಚಿಯ ಹಂಚಿಕೊಂಡು ತಿಂಬಂತೆ ಕಾಣಾ ರಾಮನಾಥಾ

2 ಎಂ. ಆರ್. ಶ್ರೀನಿವಾಸಮೂರ್ತಿ: ವಚನ ಧರ್ಮಸಾರ—ಪು. 53.

ಸತಿಯೊಡನಿದ್ದೂ, ಸತಿಯೊಡಗೂಡಿ ಭಕ್ತಿಯನ್ನಾಚರಿಸದೆ ಹೋದರೆ ಅಂಥ ಭಕ್ತಿಯಲ್ಲಿ ಹುರುಳಿರುವುದಿಲ್ಲ. ಭಕ್ತನಾದವನು ಜ್ಞಾನಿಯೂ ಆಗಿರಬೇಕೆಂಬುದು ಈ ದೃಷ್ಟಿಯಿಂದಲೇ. ಇಷ್ಟಾನಿಷ್ಟಗಳ ಮರ್ಮವನ್ನರಿತು ಭಕ್ತರಾದವರು ನಡೆಯಬೇಕಾಗುತ್ತದೆ. ಜ್ಞಾನದಿಂದ ಕೂಡಿರದ ಭಕ್ತಿ ತಪ್ಪುದಾರಿಗೆ ಎಳೆದೊಯ್ಯುವ ಸಾಧ್ಯತೆಯೂ ಇರುತ್ತದೆ—

ಸಾಸುವೆಯ ಮಟ್ಟ ಭಕ್ತಿಯುಳ್ಳನ್ನಕ್ಕ ವೇಶಿಯ ಮುಟ್ಟದಡೆ
ಹೊಲೆಯರ ಮನೆಯ ಮುರಹ ಹೊರಗಿರಿಸಿದಡೆ, ಹಂದಿಬಂದು
ಮೂಸಿ ಪೋದಂತೆ ಕಾಣಾ ರಾಮನಾಥಾ

ವಿಷಯ ವಾಸನೆಯನ್ನು ಕಡೆಗಣಿಸದ ಹೊರತು ಅವನು ಜ್ಞಾನಿಯಾಗಲಾರ, ನಿಜವಾದ ಭಕ್ತನೆನಿಸಿಕೊಳ್ಳಲಾರ. ಮನಸ್ಸು ಪರಿಶುದ್ಧಿಯಿಲ್ಲದೆ, ಮಾಡುವ ಕಾರ್ಯದಲ್ಲಿ ಶ್ರದ್ಧೆಯಿಲ್ಲದೆ ಹೋದರೆ, "ನಾನು ಏನನ್ನು ಮಾಡುತ್ತಿದ್ದೇನೆ" ಎಂಬ ಅರಿವೂ ಅವನಿಗಿರುವುದಿಲ್ಲ; "ವಿಷಯದ ಪಿತ್ತ ತಲೆಗೇರಿದಲ್ಲಿ ವಿವೇಕವೆಂಬ ದೃಷ್ಟಿ ನಷ್ಟವಾಗಿ ಪಶುಪತಿಯ ನೆನಹು ಕೆಟ್ಟು, ಮತಿ ಮಂದವಾದಲ್ಲಿ ಮಂತ್ರದ ನೆನಹೂ" ಅವನಿಗಿರುವುದಿಲ್ಲ. ಆದ್ದರಿಂದ ಭಕ್ತನಿಗೆ ಮುಖ್ಯವಾಗಿ ಇರಬೇಕಾದದ್ದು ಆತ್ಮಶುದ್ಧಿ ಹಾಗೂ ಜ್ಞಾನದೃಷ್ಟಿ. ಅಲ್ಲದೆ ಇವುಗಳನ್ನು ಸರಿತೂಗಬಲ್ಲಂತಹ ನಿಷ್ಠೆ ಅವನಲ್ಲಿರಬೇಕಾಗುತ್ತದೆ.

ಭಕ್ತಿ ಮಾರ್ಗ ಬಹು ಕಠಿಣವಾದದ್ದು. ಅಂತರಂಗ ಶುದ್ಧಿಯಿಲ್ಲದೆ, ಅಂತರಂಗ ಜ್ಞಾನವಿಲ್ಲದೆ ಅದು ಸಾಧಿಸುವುದಿಲ್ಲ. ಕೇವಲ ಹೊರಗಿನ ಲಾಂಛನಗಳನ್ನು ಕಟ್ಟುನಿಟ್ಟಾಗಿ ಪಾಲಿಸುವಷ್ಟರಿಂದಲೇ ಅವನು ಭಕ್ತನೆನಿಸಿಕೊಳ್ಳಲಾರ. ಮತಿಭ್ರಷ್ಟನಾಗಿ ವರ್ತಿಸುವವನು ಎಂದೂ ಭಕ್ತನೆನಿಸಿಕೊಳ್ಳಲಾರ. ವಿಷಯಲಾಲಸೆಯನ್ನು ಬಿಡದೆ ಕೇವಲ ಹೊರಗಿನ ಲಾಂಛನಗಳನ್ನು ಧರಿಸುವುದರ ಮೂಲಕ ಅವನ ಭಕ್ತಿ ಮಾರ್ಗ, ಆ ಮೂಲಕ ಆಗಬೇಕಾದ ಮುಕ್ತಿ ಮಾರ್ಗ ಎಂದೂ ಕೈಗೂಡುವುದಿಲ್ಲ. ಇದನ್ನು ದಾಸಿಮಯ್ಯ ಅತ್ಯಂತ ಮಾರ್ಮಿಕವಾಗಿ ನುಡಿದಿದ್ದಾನೆ:

ತೊಡೆಯಲ್ಲಿ ಮುದ್ರೆಯನೊತ್ತಿದಡೇನೋ ಅದು ನಡೆಯಲ್ಲಿ
ಶುಚಿಯಾಗ ಬಲ್ಲುದೆ? ಮಡಿಲಲ್ಲಿ ಲಿಂಗವ ಕಟ್ಟಿದಡೇನೋ?
ಲೋಕ ಅಜ್ಞಾನಿತನ ಬಿಡುವುದೆ? ನಡೆ ನುಡಿ ಸತ್ಯ ಸದಾಚಾರಿಗಳು
ಬಿಡೆಯೊಡೆಗೊಬ್ಬರು ಕಾಣಾ ರಾಮನಾಥಾ

ನಿಷ್ಠೆಯಿಲ್ಲದ ಭಕ್ತಿ, ಆಕಳ ಕೆಚ್ಚಲಿಗೆ ಉಣ್ಣೆ ಕಚ್ಚಿಕೊಂಡಂತೆ. ಅದಕ್ಕೆ ನೊರೆಹಾಲು ದಕ್ಕಲಾರದು. ನೋಡುವವರಿಗೆ ಅದು ಒಳ್ಳೆಯ ಸ್ಥಾನದಲ್ಲಿದ್ದು ನೊರೆ ಹಾಲನ್ನು ಕುಡಿಯುತ್ತಿದೆ ಎಂಬಂತೆ ಕಾಣಬಹುದು; ಆದರೆ ಅದಕ್ಕಲ್ಲಿ ಉಪವಾಸವೇ ಗತಿ. ದೇವರನ್ನು ನಂಬುವುದಾದರೆ ಆತ್ಮಶುದ್ಧಿಯಿಂದ, ಒಂದೆ ಚಿತ್ತದಿಂದ ನಂಬಬೇಕು. ಸದ್ಭಾವನೆ, ಸದ್ಭಕ್ತಿ ಇದಕ್ಕೆ ಮುಖ್ಯ. ಚಂಚಲ ಮನಸ್ಸಿನಿಂದ ಪೂಜೆಗೆ ಕುಳಿತಾಗ, ಅದರಿಂದ ಲಭಿಸಬಹುದಾದ ಮುಕ್ತಿಯೂ ಅಷ್ಟೇ ಚಂಚಲಚಿತ್ತದಿಂದ ಕೂಡಿರುತ್ತದೆ. ಶ್ರದ್ಧೆಯೊಂದಿದ್ದರೆ ಅವನು ತನ್ನ ಸ್ಥಿರ ಮನಸ್ಸಿನಿಂದ ದೇವರನ್ನು ಎಲ್ಲಿಯಾದರೂ ಪೂಜಿಸಿ ಒಲಿಸಿಕೊಳ್ಳಬಹುದು—

ನಿಷ್ಠೆಯುಳ್ಳ ಭಕ್ತ ನಟ್ಟಡವಿಯಲ್ಲಿರ್ದಡೇನು? ಅದು ಪಟ್ಟಣ
ಪಂಚಕಸುವುದು. ನಿಷ್ಠೆಯಿಲ್ಲದ ಭಕ್ತ ಪಟ್ಟಣದಲ್ಲಿದ್ದರೂ
ಅದು ನಟ್ಟಡವಿ ಕಾಣಾ ರಾಮನಾಥಾ.

ನಿಷ್ಠೆಯಿಲ್ಲದವನ ಭಕ್ತಿ ಹೀಗೆ ಚಂಚಲಚಿತ್ತದಿಂದ ಕೂಡಿದುದಾಗಿರುತ್ತದೆಯೆಂದು ನುಡಿಯುತ್ತಾನೆ ದಾಸಿಮಯ್ಯ.

ದೇವರನ್ನು ನಂಬಿ ಹೊರಟ ಮೇಲೆ ತನ್ನ ಹಿತಚಿಂತನೆಯನ್ನು ಅವನಿಗೆ ಅರ್ಪಿಸಬೇಕು. ತನ್ನ ದಿನನಿತ್ಯದ ಜೀವನದ ಬಗ್ಗೆ ಭಕ್ತನಾದವನು ಯೋಚಿಸುತ್ತ ಕುಳಿತರೆ, ಪೂಜಾಕಾರ್ಯದಲ್ಲಿ ತನ್ಮಯತೆ ಬರುವುದಿಲ್ಲ. ಭಗವಂತ ತನ್ನ ಭಕ್ತರನ್ನು ಹಲವು ಬಾರಿ ಹಲವು ಸಂಕಷ್ಟಗಳಿಗೆ ಗುರಿ ಮಾಡಿ, ಅದರಲ್ಲಿ ಗೆದ್ದುಬಂದವರನ್ನು ಮಾತ್ರ ಕೈಗೆತ್ತಿಕೊಳ್ಳುತ್ತಾನೆ. ಒಲವಿಲ್ಲದ ಭಕ್ತಿ ಭಕ್ತನಿಗೆ ಎಂದಿಗೂ ಮುಕ್ತಿಯನ್ನು



ದೊರಕಿಸಿಕೊಡಲಾರದು. ಭಕ್ತನಾದವನು ಸರ್ವತ್ಯಾಗಿಯಾಗಿ ಭಗವಂತನನ್ನು ಮರೆಹೋಗಬೇಕೆಂದು ದಾಸಿಮಯ್ಯ ಭಕ್ತಿಯ ಸೂತ್ರವನ್ನು ಮುಂದಿಡುತ್ತಾನೆ. 'ಇಂದಿಗೆಂತು ನಾಳೆಗೆಂತೆಂದು ಚಿಂತಿಸಲೇಕೆ? ತಂದಿಕ್ಕುವ ಶಿವಂಗೆ ಬಡತನವೆ?'—

ನೀನೀಶ ನೀಯದೆ ಮಾನೀಶನೀವನೆ? ನೀನೀಸುವ ಕಾರಣ
ಮಾನೀಶನೀವನು. ಆ ಮಾನೀಶನ ಹೃದಯದೊಳು ಪೊಕ್ಕು
ನೀನೀಸುವ ಕಾರಣದಿಂದೆ ನೀನೆ ಶರಣೆಂಬೆನಯ್ಯ ರಾಮನಾಥಾ.

ಈ ಭೂಮಂಡಲದ ಪ್ರತಿಯೊಂದು ವಸ್ತುವಿನ ಚಲಾಚಲಸ್ಥಿತಿಗೂ ಭಗವಂತನೇ ಕಾರಣ. ಅವನ ಅಪ್ಪಣೆಯಿಲ್ಲದೆ ಯಾವೊಂದು ವಸ್ತುವೂ ಚಲಿಸಲಾರದು. ಒಂದು ಪಕ್ಷ ಮಾನವ ಮಾನವನಿಗೇ ಉದಾರವಾಗಿ ದಾನಮಾಡುವ ಬುದ್ಧಿಯನ್ನು ಹೊಂದಿದ್ದರೂ, ದಕ್ಕೂ ಆ ದಯಾಮಯನೇ ಕಾರಣ. ಕೊಡುವನೆವನೂ ಅವನೇ, ಕೊಡಿಸುವವನೂ ಅವನೇ, ಮತ್ತೆ ಬೇಡವೆನಿಸಿದಾಗ ಕಸಿದುಕೊಳ್ಳುವ ಶಕ್ತಿಯುಳ್ಳವನೂ ಅವನೇ. ಆದ್ದರಿಂದ ಅಂತಹ ಕೃಪಾಳುವಾದ ದೈವವನ್ನು ಒಂದೆ ಚಿತ್ತದಿಂದ ನಂಬಿ ಭಜಿಸಬೇಕೆನ್ನುತ್ತಾನೆ. "ಇಳೆನಿಮ್ಮದಾನ. ಬೆಳೆನಿಮ್ಮದಾನ ಸುಳಿದು ಬೀಸುವ ವಾಯು ನಿಮ್ಮದಾನ. ನಿಮ್ಮ ದಾನವನುಂಡು ಅನ್ಯರ ಹೊಗಳುವ ಕುನ್ನಿಗಳ ನೇನನೆಂಬೆ ರಾಮನಾಥಾ ಕಾಯ ನಿಮ್ಮದಾನ. ಜೀವ ನಿಮ್ಮದಾನ. ಕಾಯ ಜೀವವುಳ್ಳಲ್ಲಿಯೇ ನಿಮ್ಮ ಪೂಜಿಸದ ನಾಯಿಗಳ ನೇನೆಂಬೆ ಹೇಳಾ ರಾಮನಾಥಾ?" ಎಂದೂ, ವಿಷಯ ಲಾಲಸೊಳಲ್ಲಿ ಮೈಮರೆತು, ದೈವವನ್ನು ನೆನೆಯದ ಆ ಕಪಟಿಗಳನ್ನು 'ನಾಯಿ'ಗಳೆಂದೇ ಕರೆಯುತಾ ದಾಸಿಮಯ್ಯ.

ವಚನಕಾರರು ತೋರುವ ಭಕ್ತಿಮಾರ್ಗವೆಲ್ಲಾ ಒಂದೇ ಎಂಬಂತೆ ಕಂಡುಬರುವುದಾದರೂ, ಅವರುಗಳಲ್ಲಿ ಒಬ್ಬೊಬ್ಬರೂ ಒಂದೊಂದು ಅಂಶಕ್ಕೆ ಹೆಚ್ಚು ಪ್ರಾಧಾನ್ಯತೆಯನ್ನು ಕೊಟ್ಟಿದ್ದಾರೆ. ಒಟ್ಟಿನಲ್ಲಿ ಅವರು ಸಮಾಜದಲ್ಲಿ ಸುಖ ಶಾಂತಿಯನ್ನು, ಧರ್ಮ ಮಾರ್ಗವನ್ನು ಭಕ್ತಿಯ ನೆಲೆಯನ್ನು ಕಂಡು ಕೊಂಡು, ಅದನ್ನು ಇತರರಿಗೂ ಅರ್ಥವಾಗುವ ರೀತಿಯಲ್ಲಿ ಹೇಳಲು ಹೊರಟವರು. ಸಂಸಾರದ ಜಂಜಾಟದಲ್ಲಿ ಸಿಲುಕಿ ನೊಂದು ಬೆಂದು, ಅದರಿಂದ ಪಾರಗುವ ದಾರಿಯನ್ನು ಕಾಣದೆ ಪರಿದಾಡುತ್ತಿದ್ದವರಿಗೆ ಮುಕ್ತಿಮಾರ್ಗವನ್ನು ತೋರಿಸಿಕೊಟ್ಟರು ಈ ವಚನಕಾರರು. ಲೌಕಿಕ ಸುಖಕ್ಕೆ ಮನಸೋತು ತನ್ನ ತನವನ್ನೇ ಕಳೆದು ಕೊಂಡು ಬದುಕುತ್ತಿದ್ದಂತಹವರಿಗೆ ಜ್ಞಾನಮಾರ್ಗವನ್ನು ತೋರಿಸಿಕೊಟ್ಟರು. ಕಾಯಕದ ಮಹತ್ವವನ್ನು, ಭಕ್ತಿಯ ಮಹತ್ವವನ್ನು ತೋರಿಸಿಕೊಟ್ಟರು ಈ ಒಂದು ಮಾರ್ಗನ ಪರಿಧಿಯಲ್ಲಿ—ದೇವರ ದಾಸಿಮಯ್ಯ, ಬಸವಣ್ಣ, ಅಲ್ಲಮಪ್ರಭು, ಅಕ್ಕಮಹಾದೇವಿ, ಸಿದ್ಧರಾಮ, ಚೆನ್ನಬಸವ—ಈ ಒಬ್ಬೊಬ್ಬರೂ ಒಂದೊಂದು ವಿಶಿಷ್ಟ ಮಾರ್ಗವನ್ನು ಹಿಡಿದು ಹೆಸರುಗಳಿಸಿದರು. ಬಸವಣ್ಣನವರು 'ಭಕ್ತಿ ಭಂಡಾರಿ' ಎನ್ನಿಸಿಕೊಂಡರೆ, ಚನ್ನಬಸವ 'ಜ್ಞಾನಕ್ಕೆ' ಹೆಸರಾದವನಾದ. ಸಿದ್ಧರಾಮ 'ಕರ್ಮಯೋಗಿ' ಎನ್ನಿಸಿಕೊಂಡ, ಅಲ್ಲಮ 'ವೈರಾಗ್ಯ' ನಿಧಿ ಎನ್ನಿಸಿಕೊಂಡ. ಹೀಗೆ ಒಬ್ಬೊಬ್ಬರೂ, ತಾವು ಭಕ್ತಿಯ ಶಕ್ತಿಯ, ಮಾರ್ಗವನ್ನು ತೋರುವಲ್ಲಿ ತಮ್ಮ ವಿಶಿಷ್ಟತೆಯನು ಮೆರೆದಿದ್ದಾರೆ. ಆದರೆ ಸೂತ್ರ ಒಂದೇ ಆಗಿದೆ.

ದಾಸಿಮಯ್ಯನ ವಚನಗಳು ಈ ದೃಷ್ಟಿಯಿಂದ ಮಹತ್ವವಾದುವುಗಳಾಗಿವೆ; ವಿಶಿಷ್ಟವಾದುವುಗಳಾಗಿವೆ. ಈಗ ಸಿಕ್ಕಿರುವ ವಚನಗಳಲ್ಲಿ ಇವನವೇ ಮೊದಲ ವಚನಗಳಾಗಿರುವುದರಿಂದ, ಇವನ ವಚನಗಳ ಪ್ರಭಾವ ಮುಂದಿನ ವಚನಕಾರರುಗಳ ಮೇಲೆ ಗಾಢವಾಗಿ ಆಗಿದೆಯೆಂಬುದರಲ್ಲಿ ಆಶ್ಚರ್ಯವಿಲ್ಲ. ಇವರೆಲ್ಲರ ಮಾರ್ಗವೂ ಒಂದೇ ಆಗಿರುವುದರಿಂದ ಹೀಗಾಗುವುದರಲ್ಲಿ ಆಶ್ಚರ್ಯವೇ ಇಲ್ಲ. ಆದರೂ ಕುತೂಹಲದ ದೃಷ್ಟಿಯಿಂದ ಇದು ಗಮನಾರ್ಹವಾದ ಅಂಶವಾಗಿದೆ

ವಚನಕಾರರೂ. ಸಾಮಾನ್ಯ ಮನುಷ್ಯತ್ವದಿಂದಲೆ ಮೇಲೆ ಬಂದವರಾದುದರಿಂದ, ಮಾನುಷಸಹಜವಾದ ಗುಣಲಕ್ಷಣಗಳನ್ನು ಅರಿತಿದ್ದರು. ಅವುಗಳನ್ನು ಮೀಟಿ

ಹೊರಬರುವುದು ಅಸಾಧ್ಯವಲ್ಲದಿದ್ದರೂ, ವಿಷಯ ಲಾಲಸೆಗಳಿಗೆ ಗುರಿಯಾದವರಿಗೆ ಅದು ಕಷ್ಟವಾದುದು ಎಂಬುದನ್ನು ತಿಳಿದಿದ್ದರು. ಅಂತಹವರ ಬಗ್ಗೆಯೂ ವಚನಕಾರರು ಗಮನಹರಿಯಿಸದೆ ಇಲ್ಲ. ತಪ್ಪು ಮಾಡುವುದು ಮಾನವನ ಸಹಜವಾದ ಗುಣವಾದುದರಿಂದ, ಅನಿವಾರ್ಯವಾಗಿ, ಆಕಸ್ಮಿಕವಾಗಿ ಎಸಗಿದ ತಪ್ಪುಗಳನ್ನು ಕ್ಷಮಿಸಿ ಕೃಪೆದೋರಬೇಕೆಂದು ಪ್ರಾರ್ಥಿಸುತ್ತಾರೆ. ಇಂತಹ ಸಂಸಾರ ಸುಖದಲ್ಲಿ ಸಿಲುಕಿ, ಮತ್ತೆ ಅದರಿಂದ ಪಾರಾಗಲೆಳಸುವಲ್ಲಿ ಉಂಟಾಗಬಹುದಾದ ಕಷ್ಟವನ್ನು ನೀನೊಮ್ಮೆ ಅನುಭವಿಸಿ ನೋಡು ಎಂದು ಭಗವಂತನನ್ನೇ ಕರೆಯುತ್ತಾನೆ :

ಒಡಲು ಗೊಂಡವ ಹಸಿವ ಒಡಲು ಗೊಂಡವ ಹುಸಿವ.
ಒಡಲು ಗೊಂಡವನೆಂದು ನೀನೆನ್ನ ಜಡಿದೊಮ್ಮೆ ನುಡಿಯದಿರಾ.
ನೀನೆನ್ನಂತೊಮ್ಮೆ ಒಡಲು ಗೊಂಡು ನೋಡಾ ರಾಮನಾಥಾ.

ಶುದ್ಧ ಭಕ್ತಿ ಸುಲಭವಾದದ್ದಲ್ಲ. ಅಂತರಂಗ ಶುದ್ಧಿಯಿಲ್ಲದೆ ಅದು ಸಾಧ್ಯವಿಲ್ಲ. ಅದರಲ್ಲಿ ನಿಷ್ಠೆ, ಜ್ಞಾನ, ಆತ್ಮಾರ್ಪಣಾಭಾವ ಸಮರ್ಪಣಾಭಾವ ಎಲ್ಲವೂ ಅಡಕಗೊಂಡಿರಬೇಕು. ಆಗಲೇ ಮುಕ್ತಿ ಮಾರ್ಗ ಸಾಧ್ಯ. ಮನಸ್ಸು ಸ್ವಚ್ಛವಾಗಿ, ನಿಷ್ಕಲ್ಮಶವಾಗಿರಬೇಕು, "ಕರಿಯ ನೀತ್ತಡೆ ಒಲ್ಲೆ; ಸಿರಿಯನಿತ್ತಡೆ ಒಲ್ಲೆ; ಹಿರಿದಪ್ಪ ರಾಜ್ಯವನಿತ್ತಡೆ ಒಲ್ಲೆ. ನಿಮ್ಮ ಶರಣರ ಸೂಳ್ನುಡಿಯ ಒಂದರಗಳಿಗೆ ಇತ್ತಡೆ ನಿಮ್ಮನಿತ್ತೆ ಕಾಣಾ ರಾಮನಾಥ" ಎಂಬ ದೃಢ ಮನಸ್ಸು, ಆತ್ಮಶುದ್ಧಿ ಭಕ್ತನಿಗಿರಬೇಕಾಗುತ್ತದೆ. ಹಾಗೆಂದು ಅವರು ಸಾಂಸಾರಿಕ ಜೀವನವನ್ನು ತ್ಯಜಿಸಿರೆಂದು ಹೇಳಲಿಲ್ಲ. ಸಂಸಾರದಲ್ಲಿದ್ದುಕೊಂಡೇ ಮುಕ್ತಿ ಪಡೆಯುವ ಮಾರ್ಗವನ್ನು ತೋರಿದನು. "ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ" ಎಂದು ನುಡಿದರು. "ಅಡವಿಯಾರಣ್ಯದಲ್ಲಿ ಮಡಿವನಕ ತಪವಿದ್ದು, ಮಡಿವಾಗ ಮೃಡನ ಮರೆವಡೆ" ಪ್ರಯೋಜನವೇನು ? ಎಂದು ಹೇಳುವುದರ ಮೂಲಕ, ಸಂಸಾರವನ್ನು ತ್ಯಜಿಸಿ ಕಾಡಿನಲ್ಲಿ ಹೋಗಿ ತಪಸ್ಸು ಮಾಡಿ ದೇವರನ್ನು ಒಲಿಸಿಕೊಳ್ಳುತ್ತೇನೆಂಬುದನ್ನು, ವಚನಕಾರರು ಖಂಡಿಸಿದರು.

ವೀರಶೈವ ಧರ್ಮದ ಹಲವು ತತ್ತ್ವಗಳು ಹೀಗೆ ಸುಲಭವಾಗಿದ್ದು, ಎಲ್ಲರಿಗೂ ಪ್ರಿಯವಾಗುವಂತಿದ್ದು ಅನೇಕರನ್ನು ಮುಕ್ತಿ ಮಾರ್ಗದತ್ತ ಒಯ್ಯಿತು. ಸಂಸಾರದಲ್ಲಿದ್ದುಕೊಂಡು ಮುಕ್ತಿಯನ್ನು ಪಡೆಯಬಹುದೆಂಬುದನ್ನು ದೇವರನ್ನು ಒಲಿಸಿಕೊಳ್ಳಬಹುದೆಂಬುದನ್ನು ವಚನಕಾರರು ಒತ್ತಿ ಹೇಳಿದರು. ಈ ದೃಷ್ಟಿಯಿಂದ ದಾಸಿಮಯ್ಯನ "ಭಕ್ತಿಭಾವ" ಸರ್ವಾದರಣೀಯವಾಗಿದೆ.



ಸತ್ಪುರುಷರ ಸ್ನೇಹವು ಬರುತ್ತ ಬರುತ್ತ ಆನಂದವನ್ನು ಹೆಚ್ಚಿಸುತ್ತದೆ. ದುರ್ಜನರದು ದಿನ ದಿನವೂ ಸಂತೋಷವನ್ನು ಕಡಮೆ ಮಾಡುತ್ತದೆ.

ಹೇಗೆಂದರೆ, ಕಬ್ಬನ್ನು ತುದಿಯಿಂದ ತಿಂದರೆ ಬರುತ್ತ ಬರುತ್ತ ರುಚಿ ಹೆಚ್ಚುತ್ತದೆ; ತಾಳಿಂದ ತಿಂದರೆ ರುಚಿ ಕಡಮೆಯಾಗುತ್ತ ಬರುತ್ತದೆ.

ಸಜ್ಜನರು ಯಾವ ಕುಲದಲ್ಲಿ ಹುಟ್ಟಿದರೂ ಎಲ್ಲರಿಂದಲೂ ಸನ್ಮಾನಿಸಲ್ಪಡುವರು.

ಹೇಗೆಂದರೆ, ಗೋರೋಚನ, ಪುನುಗು, ಜವ್ವಾದಿ, ಜೇನು — ಇವುಗಳು ಹೀನ ಸ್ಥಳಗಳಲ್ಲಿ ಹುಟ್ಟಿದರೂ ಎಲ್ಲರಿಂದಲೂ ಅಪೇಕ್ಷಿಸಲ್ಪಡುತ್ತವೆ.



# ರಷ್ಯಾ ಸಾಧಿಸಿದ ಬಾಹ್ಯಾಕಾಶದ ರೋಮಾಂಚಕಾರೀ ಅದ್ಭುತ ಸಾಧನೆಯ ಮೈಲುಗಲ್ಲುಗಳು

— ಎಂ. ಕೆ. ಅಶ್ವತ್ಥನಾರಾಯಣಸ್ವಾಮಿ.

ಕಳೆದ ಅನೇಕ ವರ್ಷಗಳಿಂದ ಸತತ ಪ್ರಯತ್ನಮಾಡಿ ಬಾಹ್ಯಾಕಾಶ ಪ್ರವಾಸದ ಅಧ್ಯಯನದಲ್ಲಿ ರಷ್ಯಾ ಪ್ರಥಮತಃ 13 ವರ್ಷಗಳ ಹಿಂದೆ ಹಾರಿಬಿಟ್ಟ ಸ್ಪುಟ್ನಿಕ್ ಮೊದಲ ಮೈಲುಗಲ್ಲು. ಅಲ್ಲಿಂದೀಚೆಗೆ ಅಮೆರಿಕಾ-ರಷ್ಯಾ ರಾಷ್ಟ್ರಗಳು ಊಹಾತೀತವಾದ ರೋಮಾಂಚಕಾರಕ ಪ್ರಯೋಗಗಳನ್ನು ಮಾಡಿ ವಿಜ್ಞಾನ ಪ್ರಪಂಚದ ಅನೇಕ ವರ್ಷಗಳ ಆಶೆ ಆಕಾಂಕ್ಷೆಗಳ ಕನಸನ್ನು ನನಸು ಮಾಡಿದ್ದಾರೆ. ಪ್ರಕೃತ ಲೇಖನದಲ್ಲಿ ತಾ|| 4-10-57ರಲ್ಲಿ ಭಾರತ ಪ್ರವಾಸದಲ್ಲಿ ಕೃಶ್ಚೇವ್ ಬುಲ್ಗಾನಿನ್ ಅವರು ಇದ್ದ ಕಾಲದಲ್ಲಿಯೇ ರಷ್ಯಾ ವಿಜ್ಞಾನಿಗಳು ಹಾರಿಬಿಟ್ಟ ಸ್ಪುಟ್ನಿಕ್‌ನಿಂದ ಮೊದಲುಗೊಂಡು ಇಂದಿನವರೆಗೆ ಅಂದರೆ 14-1-71ರ ವರೆಗೆ ನಡೆಸಿದ ಅವರ ಅನೇಕ ಅದ್ಭುತ ಸಾಹಸಗಳ ಸ್ಥೂಲ ಪರಿಚಯವನ್ನು ಅಚ್ಚುಕಟ್ಟಾಗಿ, ಮನನೀಯವಾಗಿ ಸೆಂಟ್ರಲ್ ಹೈಸ್ಕೂಲಿನ ಭೌತಶಾಸ್ತ್ರಾಧ್ಯಾಪಕರೂ ಸಾಹಿತಿಗಳೂ ಆದ ಶ್ರೀಮಾನ್ ಅಶ್ವತ್ಥನಾರಾಯಣಸ್ವಾಮಿ, ಬಿ.ಎಸ್‌ಸಿ., ಡಿ.ಬಿ.ಎಡ್., ಎಂ.ಎಡ್. ರವರು ಚಿತ್ರಿಸಿ ನಮ್ಮ ಓದುಗರಿಗೆ ಒದಗಿಸಿ ಉಪಕರಿಸಿದ್ದಾರೆ, ಶ್ರೀಯುತರಿಗೆ ಧನ್ಯವಾದಗಳು. —ಸಂ.

ಇತ್ತೀಚೆಗೆ ಎರಡು ಮೂರು ತಿಂಗಳ ಹಿಂದೆ ತಾನೆ ದೀಪಾವಳಿ ಹಬ್ಬದಂದು ಹಿರಿಕಿರಿಯರೆನ್ನದೆ ಎಲ್ಲರೂ ಪಟಾಕಿ ಬಾಣ ಬಿರುಸುಗಳನ್ನು ಹೊತ್ತಿಸಿಯಾಯಿತು. ಅವುಗಳ ಪೈಕಿ ಒಂದಾದ ಆಕಾಶ ಬಾಣದ [ರಾಕೆಟ್‌ನ] ತತ್ವವು ಇಂದು ಅಂತರಿಕ್ಷದ ಯಾವುದೇ ಮಹತ್ತರ ಸಾಧನೆಯ ಮೂಲಸಾಧನೆ ಎಂದು ಊಹಿಸಿದ್ದರೆ ಮೈಜುಮ್ಮೆನ್ನುತ್ತದೆ. ಪ್ರಪ್ರಥಮವಾಗಿ ನೂರಾರು ವರ್ಷಗಳ ಹಿಂದೆ ಆಕಾಶಬಾಣವನ್ನು ತಯಾರಿಸಿದ ಚೀಣೀಯರಿಗೆ ತಾನೆ ಬಣ್ಣ ಬಣ್ಣದ ಬೆಳಕಿನ ಹೂಗಳನ್ನು ಚೆಲ್ಲುತ್ತಾ ಗಗನಗಾಮಿಯಾಗಿ ಏರಿ ಕ್ಷಣಿಕವಾದ ಆನಂದ ಸಡಗರಗಳನ್ನು ಹುಟ್ಟಿಸಿ ಮಾಯವಾಗುತ್ತಿದ್ದ ತಮ್ಮ ಆಕಾಶಬಾಣದ ಉಡಾವಣೆಯ ತತ್ವವೇ ಮುಂದೆ ಸರ್‌ಐಸಾಕ್ ನ್ಯೂಟನ್ನನು ಪ್ರತಿಪಾದಿಸಿದ ಮೂರು ಚಲನೆಯ ನಿಯಮಗಳ ಪೈಕಿ 'ಪ್ರತಿಯೊಂದು ಕ್ರಿಯೆಗೂ ಅದಕ್ಕೆ ಸಮನಾದ ಹಾಗೂ ವಿರುದ್ಧವಾದ ಪ್ರತಿಕ್ರಿಯೆ ಇರುತ್ತದೆ' ಎಂಬ ಮೂರನೆಯ ನಿಯಮವಾಗುತ್ತದೆಂದು ತಿಳಿದಿತ್ತೇನು ? ಇದೇ ನಿಯಮವೇ ಮುಂದೆ ಗೊಡಾರ್ಡನು ಇಂದು ಬಳಸಲಾಗುತ್ತಿರುವ ರಾಕೆಟ್ಟನ್ನು ತಯಾರಿಸಲು ಸಹಾಯವಾಗುತ್ತದೆಂದು ಸರ್‌ಐಸಾಕ್ ನ್ಯೂಟನ್‌ಗೆ ತಾನೆ ತಿಳಿದಿದ್ದಿತೇನು?

ರಾಕೆಟ್‌ನ ಜನಕ ಗೊಡಾರ್ಡನಿಗೆ ತಾನು ಕಂಡು ಹಿಡಿದ ರಾಕೆಟ್‌ನಿಂದ ಅನೇಕ ಪ್ರಯೋಜನಗಳಿವೆ ಎಂದು ತಿಳಿದಿತ್ತು. ಆದರೂ ರಾಕೆಟ್ ಪ್ರಮುಖ ವಾಹಕವಾಗಿ ವಿಜ್ಞಾನವು ಇಂದು ಕಂಡಿರುವ ಹಾಗೂ ಕಾಣುತ್ತಿರುವ ಅಂತರಿಕ್ಷ ಸಾಧನೆಗಳು ಹಸ್ತಗತವಾದಾವು ? ಎಂದಂತೂ ಆತನು ಖಂಡಿತ ಮನಗಂಡಿರಲಿಲ್ಲ.

ಇಂದು ವಿಜ್ಞಾನವು ಅಪಾರ ಪ್ರಗತಿಯನ್ನು ಸಾಧಿಸಿದೆ ; ಸಾಧಿಸುತ್ತಿದೆ. ವಿಜ್ಞಾನ ತಂತ್ರ ಕುಶಲತೆಗಳು ಪ್ರಚಂಡಗತಿಯಲ್ಲಿ ಸಾಗುತ್ತಿವೆ. ತತ್ಪರಿಣಾಮವಾಗಿ ಅಭಿವೃದ್ಧಿಗೊಳ್ಳುತ್ತಿರುವ ಜ್ಞಾನದ ಮೊತ್ತವು ಬುದ್ಧಿವಂತ ಜನರನ್ನು ದಿಗ್ಭ್ರಮೆಗೊಳಿಸುವಂತಿದೆ. ಇದಕ್ಕೆ ಸಾಕ್ಷಿಯೆಂದರೆ ಆಕಾಶಯುಗವು ಪ್ರಾರಂಭವಾಗಿ ಕಳೆದ ೧೩ ವರ್ಷಗಳಲ್ಲಿ ನಡೆದಿರುವ ಸಾಧನೆಗಳೇ ಸಾಕು. ಈ ದಿಶೆಯಲ್ಲಿ ರಷ್ಯಾವಂತೂ ಮಹತ್ತರವಾದ ಹೆಜ್ಜೆಗಳನ್ನಿಟ್ಟು ಸಾಗುತ್ತಾ ನಡೆದಿದೆ. ಇದರ ಹಿಂದೆ ಆ ದೇಶವು ವೆಚ್ಚ ಮಾಡಿರುವ ಹಣವು ಲೆಕ್ಕಕ್ಕೆ ಸಿಗದಷ್ಟು ; ಈ ಸಾಧನೆಗಳಿಗೆ ಬೌದ್ಧಿಕ ಕಾಣಿಕೆಯನ್ನು ನೀಡಿರುವ ವಿಜ್ಞಾನಿಗಳ ಸಂಖ್ಯೆ ಅಸಂಖ್ಯವಾದುದು.

ಅಂತರಿಕ್ಷದ ಗರ್ಭದಲ್ಲಿ ಅಡಗಿರುವ ನಿತ್ಯ ನೂತನ ತತ್ವಗಳನ್ನು ಕೆದರಿ ಕಂಡರಿಯಲು ರಷ್ಯವು ಅನೇಕ ಯೋಜನೆಗಳನ್ನು ಹಾಕಿಕೊಂಡಿತು. ಪ್ರತಿಯೊಂದು ಯೋಜನೆಯ ರೂಪುರೇಖೆಗಳನ್ನೆಳೆದು ನಿರ್ದಿಷ್ಟ ಉದ್ದೇಶಗಳ ಸಾಧನೆಯತ್ತ ತ್ವರಿಸಿತು. ಯೋಜನೆಯ ಪ್ರತಿ

ಮೊದಲು ಘಟ್ಟದಲ್ಲೂ ದೊರೆತ ಸೃಷ್ಟಿ ರಹಸ್ಯಗಳ ಸಂಗ್ರಹಣೆಯನ್ನು ಮಾಡುವುದು, ಮುಂದಿನ ಘಟ್ಟದಲ್ಲಿ ಅವುಗಳನ್ನು ಪುನರ್ಪರಿಶೀಲಿಸುವುದು ಹಾಗೂ ಹೊಸ ತತ್ವಗಳ ಶೋಧನೆ; ಹೀಗೆ ದೊರೆತ ವೈಜ್ಞಾನಿಕ ಮಾಹಿತಿಗಳ ಸಂಚಯನದಿಂದ ಇನ್ನೊಂದು ನಿರ್ದಿಷ್ಟ ಯೋಜನೆ. ಹೀಗೆ ರಷ್ಯವು ರೂಪಿಸಿಕೊಂಡ ಯೋಜನೆಗಳೇ ಸ್ಪುಟ್ನಿಕ್, ವೀನಸ್ ವೋಸ್ತೋಕ್ ಮಾರ್ಸ್, ಲ್ಯೂನಾ ಇತ್ಯಾದಿ ಯೋಜನೆಗಳು. ಈ ಯೋಜನೆಗಳಲ್ಲಿ ಪ್ರತಿಯೊಂದು ಯೋಜನೆಯ ಪ್ರತಿಯೊಂದು ಹಂತವೂ ಸಫಲವಾಗದಿದ್ದರೂ ನಿಷ್ಫಲವಾದ ಹಂತವು ಪೂರ್ಣ ನಿಷ್ಫಲವಾಗದೆ ತಾನು ಅಯಶಸ್ವಿಯಾದ ಕಾರಣಗಳನ್ನೇ ಮುಂದಿನ ಹಂತವು ಯಶಸ್ವಿಯಾಗಲು ಕಾಣಿಕೆಯನ್ನಾಗಿ ನೀಡಿತು.

ರಷ್ಯದ ಅಂತರಿಕ್ಷ ಸಾಧನೆಯ ಮೈಲಿಗಲ್ಲುಗಳಾಗಿ ಸ್ಥೂಲವಾಗಿ ಈ ಮುಂದಿನ ಕಾರ್ಯಕ್ರಮಗಳನ್ನು ಚರ್ಚಿಸಬಹುದು.

### ಸ್ಪುಟ್ನಿಕ್ ಕಾರ್ಯಕ್ರಮ

ಭೂಗ್ರಹಕ್ಕೆ ಉಪಗ್ರಹಗಳನ್ನು ಬಿಟ್ಟು ವಾಯುಮಂಡಲದ ಆಚೆಯ ಹೊರಾವರಣಗಳ ಮಾಹಿತಿಯನ್ನು ಸಂಗ್ರಹಿಸುವುದು.

ಸ್ಪುಟ್ನಿಕ್ 1 :- ರಷ್ಯವು 4-10-1957ರಲ್ಲಿ ಮಾನವಕೃತ ಕೃತಕ ಭೂ ಉಪಗ್ರಹವನ್ನು ಹಾರಿಸಿ ಆಕಾಶ ಯುಗವನ್ನು ಪ್ರಾರಂಭಿಸಿತು. ಅಂತರಿಕ್ಷ ಶಕೆಯ ಅನಂತ ಅಧ್ಯಾಯಗಳ ಹೊತ್ತಿಗೆಯಲ್ಲಿ ಪ್ರಥಮ ಅಧ್ಯಾಯವನ್ನು ಪ್ರಾರಂಭಿಸಿದ ಖ್ಯಾತಿ ರಷ್ಯಾದ್ದಾಯಿತು. ಈ ವಿಜ್ಞಾನದ ಮಹತ್ತರ ಸಾಧನೆಯಿಂದ ಜಗತ್ತೇ ಪುಳಕಿತವಾಯಿತು. ಪ್ರಪಂಚದ ಅಖಂಡ ಜನಕೋಟಿಯೇ ಮೂಗಿನಮೇಲೆ ಬೆರಳಿಟ್ಟುಕೊಂಡಿತು.

ಸ್ಪುಟ್ನಿಕ್ 2 :- ಈ ಯೋಜನೆಯು ಕಿರಿದೆತ್ತರಗಳಲ್ಲಿ ಜೀವಿಗಳ ಮೇಲೆ ಆಕಾಶ ಬಲಗಳಾದ ಕಾಸ್ಮಿಕ್ ವಿಕಿರಣ, ಗುರುತ್ವಾಕರ್ಷಣೆ, ಅಥವಾ ಗುರುತ್ವರಹಿತತೆ, ಮುಂತಾದುವು ಯಾವ ರೀತಿಯಲ್ಲಿ ಉಸಿರಾಟ, ಶರೀರ ಉಷ್ಣತೆ, ರಕ್ತ ಪರಿಚಲನೆ ಇತ್ಯಾದಿಗಳ ಮೇಲೆ ಪರಿಣಾಮವನ್ನುಂಟು ಮಾಡುತ್ತವೆ ಎಂದು, ಅಧ್ಯಯನ ಮಾಡುವ



ಉದ್ದೇಶದಿಂದ ಪ್ರಾಣಿಗಳನ್ನು ಕಳುಹಿಸುವ ಯೋಜನೆ ಇದರ ಅಂಗವಾಗಿ ಸ್ಪುಟ್ನಿಕ್ 1ರಲ್ಲಿ ಪ್ರಥಮ ಭೂ ಉಪಗ್ರಹವನ್ನಾಗಿ ಮಾಡಿದ ಸುಮಾರು ಒಂದು ತಿಂಗಳಿಗೆ ಸ್ಪುಟ್ನಿಕ್ 2ನ್ನು ಲೈಕಾ ಎಂಬ ನಾಯಿಯನ್ನು ಕಳುಹಿಸಲಾಯಿತು. ಲೈಕಾ ಹಿಂತಿರುಗಲಿಲ್ಲ; ತನ್ನ ಆತ್ಮಾರ್ಪಣೆಯನ್ನು ಮಾಡಿತು.

ಸ್ಪುಟ್ನಿಕ್ 5 :- ಸ್ಪೂಟ್ನಿಕ್ 2ರ ಕಾರ್ಯಕ್ರಮ ಮುಂದುವರಿದು ಐದನೆಯ ಹಂತದಲ್ಲಿ ಬೆಲ್ಕಾ ಮತ್ತು ಸ್ಟ್ರೆಲ್ಕಾ ಎಂಬ ಹೆಸರಿನ ಎರಡು ನಾಯಿಗಳನ್ನು ಕಳುಹಿಸಲಾಯಿತು. ಈ ವೇಳೆಗೆ ಕಳೆದ ಮೂರು ಹಂತಗಳ ಅಧ್ಯಯನದಿಂದ ಹಲವಾರು ಉಪಯುಕ್ತ ವಿಷಯ



ಗಳು ಸಂಗ್ರಹವಾಗಿದ್ದುವು. ಆದ್ದರಿಂದ ದಿನಾಂಕ 20-8-1960ರಲ್ಲಿ ಉಡಾವಣೆ ಮಾಡಲಾದ ಈ ಸ್ಪೂಟ್ನಿಕ್ 5 ಉಪಗ್ರಹವು ಸುಮಾರು 90 ನಿಮಿಷಗಳ ಕಾಲ ಪ್ರಯಾಣ ಮಾಡಿ ಹಿಂತಿರುಗಿತು. ಈ ಅವಧಿಯಲ್ಲಿ ಬೆಲ್ಕಾ ಮತ್ತು ಸ್ಟ್ರೆಲ್ಕಾ ನಾಯಿಗಳು ಭೂಮಿಯನ್ನು 17 ಬಾರಿ ಸುತ್ತು ಹಾಕಿ ಜೀವಂತವಾಗಿ ವಾಪಸಾದವು ಭೂಮಿಯನ್ನು ಪ್ರಥಮವಾಗಿ ಪರಿಭ್ರಮಿಸಿ ವಾಪಸಾದ ಜೀವಿಗಳು ಇವಾದುವು.

ವೋಸ್ತೋಕ್ ಕಾರ್ಯಕ್ರಮ :-ನಾಯಿಗಳ ಮೇಲೆ ಅಂತರಿಕ್ಷ ವಾಸದ ಪರಿಣಾಮವನ್ನು ಅಧ್ಯಯನ ಮಾಡಿದ ಉಳಿತ ವೋಸ್ತೋಕ್ ಯೋಜನೆಯಲ್ಲಿ ಮಾನವನನ್ನು ಪ್ರಥಮ ಬಾರಿಗೆ ಕಳುಹಿಸುವ ಪ್ರಯತ್ನಗಳನ್ನು ಮಾಡಿ ಯಶಸ್ಸು ಸಂಪಾದಿಸಲಾಯಿತು.

### ವೋಸ್ತೋಕ್ 1

ಬೆಲ್ಕಾ ಮತ್ತು ಸ್ಟ್ರೆಲ್ಕಾ ಎಂಬ ನಾಯಿಗಳು ಸುರಕ್ಷಿತವಾಗಿ ಸ್ಪುಟ್ನಿಕ್-6ರಲ್ಲಿ ಹಿಂತಿರುಗಿದ ಸುಮಾರು 8 ತಿಂಗಳಿಗೆಲ್ಲಾ (12-4-1961)ರಲ್ಲಿ ವೋಸ್ತೋಕ್ 1 ಈ ಗಗನ ನೌಕೆಯಲ್ಲಿ ಯೂರಿಗಗಾರಿನ್‌ನನ್ನು ಕಳುಹಿಸಲಾಯಿತು. ಆತನು ಒಟ್ಟು 89 ಘಂಟೆಗಳ ಯಾನದಲ್ಲಿ ಭೂಮಿಯನ್ನು ಒಂದು ಸಲ ಸುತ್ತುಹಾಕಿ ಕ್ಷೇಮವಾಗಿ ಹಿಂತಿರುಗಿ 'ಪ್ರಥಮ ಆಕಾಶಮಾನವ' ಎನಿಸಿಕೊಂಡ.

ವೋಸ್ತೋಕ್ 6 :- ಯೂರಿ ಗಗಾರಿನ್ ಪ್ರಥಮ ಆಕಾಶ ಮಾನವನಾದ 2 ವರ್ಷಗಳ ಸುಮಾರಿಗೆ (16-6-1963ರಲ್ಲಿ) ವಾಲೆಂಟಿನಾ ಟೆರೆಶ್ಕೋವಾ ಎಂಬಾಕೆಯನ್ನು ನೌಕೆಯಲ್ಲಿ ಕಳುಹಿಸಲಾಯಿತು. ಈಕೆ ಭೂಮಿಯನ್ನು 83 ಘಂಟೆಗಳ ಒಟ್ಟು ಪ್ರಯಾಣಾವಧಿಯಲ್ಲಿ 48 ಬಾರಿ ಸುತ್ತು ಹಾಕಿ ವಾಪಸಾಗಿ 'ಪ್ರಥಮ ಆಕಾಶಮಹಿಳೆ' ಎನಿಸಿಕೊಂಡಳು.

### ವೀನಸ್ ಕಾರ್ಯಕ್ರಮ

ಶುಕ್ರಗ್ರಹದ ಬಗ್ಗೆ ಅಧ್ಯಯನಮಾಡಲು ಈ ಯೋಜನೆಯನ್ನು ರೂಪಿಸಲಾಯಿತು. ಈ ಯೋಜನೆಯ ಸರಣಿಯಲ್ಲಿ ವೀನಸ್ ನೌಕೆಗಳನ್ನು ಕಳುಹಿಸಲಾಯಿತು.

ವೀನಸ್-1 : 12-2-1961ರಲ್ಲಿ ಹಾರಿಸಲಾದ ಈ ನೌಕೆ ಬಾಹ್ಯಾಂತರಿಕ್ಷದ ಅನೇಕ ವೈಜ್ಞಾನಿಕ ವಿಷಯ ಸಂಗ್ರಹಣೆಗೆ ಅನುವು ಮಾಡಿಕೊಟ್ಟಿತು. 73 ಲಕ್ಷ 60 ಸಾವಿರ ಕಿಲೋ ಮೀಟರ್ ದೂರದ ವರೆಗೂ ಭೂಮಿಯೊಂದಿಗೆ ರೇಡಿಯೋ ಸಂಪರ್ಕವನ್ನು ಉಳಿಸಿಕೊಂಡಿತ್ತು. ಅನಂತರ ಭೂಮಿಯೊಂದಿಗಿನ ಸಂಪರ್ಕ ಕಡಿದು ಹೋಯಿತು.

ವೀನಸ್ 3 :— 16-11-1965ರಲ್ಲಿ ಉಡಾವಣೆ ಮಾಡಲಾದ ಈ ಅಂತರಿಕ್ಷ ನೌಕೆಯು ನಿರ್ವಿಘ್ನವಾಗಿ ಸುಮಾರು ನಾಲ್ಕುತಿಂಗಳ ಮೇಲೆ ಒಂದು ವಾರ ಪರ್ಯಂತ ಯಾನ ಮಾಡಿ ಶುಕ್ರ ಗ್ರಹದ ಮೇಲ್ಮೈ ಮೇಲೆ ಬಿದ್ದಿತು. ಬಲವಾಗಿ ಅಪ್ಪಳಿಸಿದುದರ ಪರಿಣಾಮವಾಗಿ ರೇಡಿಯೋ ಸಂಪರ್ಕವನ್ನು ಉಳಿಸಿ ಕೊಳ್ಳಲಾಗಲಿಲ್ಲ. ಭೂಮಿಗೆ ಸೇರಿದ ಭೂಮಿಯಲ್ಲಿ ತಯಾರಾದ ಭೂವಸ್ತುವೊಂದು ಇನ್ನೊಂದು ಗ್ರಹವನ್ನು ಸ್ಪರ್ಶಿಸಿದುದು ಇದೇ ಮೊದಲು. ಪರ್ಯಾಯವಾಗಿ ಗ್ರಹಗಳ ಪೈಕಿ ಬಾಹ್ಯಗ್ರಹವಸ್ತುವನ್ನು ಗ್ರಾಹಕ ಮಾಡಿದ ಮೊದಲ ಗ್ರಹ ಶುಕ್ರ ಎಂದಂತಾಯಿತು.

ವೀನಸ್ 4 :- ಈ ಮಾಲೆಯ ಹಿಂದಿನ ನೌಕೆಯು ಶುಕ್ರನ ಮೇಲ್ಮೈ ಮೇಲೆ ಅಪ್ಪಳಿಸಿ ನಾಶವಾಯಿತು. ಆದ್ದರಿಂದ ಪ್ರಸ್ತುತ ವಾಹನವನ್ನು ಸುರಕ್ಷಿತವಾಗಿ ಶುಕ್ರನ ಮೇಲಿಳಿಸಲು ಯೋಜಿಸಲಾಯಿತು. ಇದಕ್ಕಾಗಿ ನೌಕೆಯಲ್ಲಿ ಪ್ಯಾರಾಚೂಟುಗಳನ್ನು ವ್ಯವಸ್ಥೆಗೊಳಿಸಲಾಯಿತು. 12-6-1967ರಲ್ಲಿ ಹಾರಿಬಿಟ್ಟ ಈ ನೌಕೆಯು ಹಿಂದಿನ ನೌಕೆಯಷ್ಟೇ ಕಾಲವನ್ನು ತೆಗೆದುಕೊಂಡು ಯಾನ ಮಾಡಿ ಸುರಕ್ಷಿತವಾಗಿ ಶುಕ್ರನ ಮೇಲೆ ಇಳಿಯಿತು. ಸುರಕ್ಷಿತವಾಗಿ ಮೃದು ಅವರೋಹಣವನ್ನು ಮಾಡಿದ ಪ್ರಥಮ ನೌಕೆ ಇದಾಯಿತು.

### ಇತರ ಯೋಜನೆಗಳು

ಮಾರ್ಸ್ 1 :-ಮಂಗಳಗ್ರಹದ ಬಗ್ಗೆ ಅಧ್ಯಯನಕ್ಕಾಗಿ 1-11-1962 ಹಾರಿಬಿಡಲಾದ ಈ ನೌಕೆಯು ವೀನಸ್ 1ರ ಗತಿಯನ್ನೇ ಹಿಡಿಯಿತು. ಅಂದರೆ 105.6 ದಶಲಕ್ಷ ಕಿಲೋ ಮೀಟರ್ ದೂರದ ವರೆಗೂ ಭೂಮಿಯೊಂದಿಗೆ ರೇಡಿಯೋ ಸಂಪರ್ಕವನ್ನು ಪಡೆದಿತ್ತು. ಅನಂತರ ಸಂಪರ್ಕ ಕಡಿದು ಹೋಯಿತು. ವೀನಸ್ 1

ತನ್ನ ಮೊಲೆಯ ವೀನಸ್ 3, 4 ನೌಕೆಗಳ ಯಾನಕ್ಕೆ ಕಾರಣಭೂತವಾದಂತೆಯೇ.ಪತ್ತೆಯಿಲ್ಲದೆ ಹೋದ ಈ ಮಾರ್ಸ್ 1 ಸಹ ತಾನು ಕಳುಹಿಸಿರುವ ಮಾಹಿತಿಯಿಂದ ತನ್ನ ಶ್ರೇಣಿಯನ್ನು ಮುಂದುವರಿಸಲು ಸಹಾಯ ಮಾಡಬಹುದು.

**ವೋಸ್ಕೊಡ್ 2 :-** ಈ ವಾಹನದಲ್ಲಿ ಅಲೆಕ್ಸಿನ್ ಲಿಯೋನಾವ್ ಹೊರಟು ಸುಮಾರು 91 ಗಂಟೆಗಳ ಭೂಮಿಯ ಸುತ್ತಿನ ಒಟ್ಟು ಪ್ರಯಾಣಾವಧಿಯೂ ಪ್ರಥಮ ಬಾರಿಗೆ ನೌಕೆಯನ್ನು ಬಿಟ್ಟು ಹೊರ ಬಂದನು. 10 ನಿಮಿಷಗಳ ಕಾಲ ನೌಕೆಯಿಂ ಹೊರಕ್ಕೆ ಬಂದು ಆಕಾಶ ನಡಿಗೆಯನ್ನು ನಿರ್ವಹಿಸಿದ; ನಿಜಾಂತರಿಕ್ಷದಲ್ಲಿ ಓಡಿಯಾಡಿದ ಪ್ರಥಮಿಗನಾದ.

ಸೋಯುಜ್ 9 :— ಜೂನ್ 1970ರಲ್ಲಿ ಭೂ ರಕ್ಷೆಯಲ್ಲಿ 18 ದಿನಗಳ ಕಾಲ ನಭೋ ಯಾನವನ್ನು ಮಾಡಿದ ಈ ಅಂತರಿಕ್ಷ ನೌಕೆಯ ಇಬ್ಬರು ಗಗನ ಯಾತ್ರಿಗಳೆಂದರೆ ಆಂಡ್ರಿಯನ್ ನಿಕೋಲಾಯೇವ್ ಮತ್ತು ವಿಟಲ್ ಸೆವಾಸ್ಟ್ಯನೋವ್, ಇವರು 424 ಗಂಟೆ 58 ನಿಮಿಷ 50 ಸೆಕೆಂಡು ಕಾಲದಲ್ಲಿ 73, 87, 486 ಮೈಲಿ ಸಂಚರಿಸಿದುದರಿಂದ ಪಾರಿಸ್‌ನಲ್ಲಿರುವ ಅಂತರ್ರಾಷ್ಟ್ರೀಯ ಸಂಸ್ಥೆ ಇಂಟರ್‌ನ್ಯಾಷನಲ್ ಏರೋ ನಾಟಿಕಲ್ ಫೆಡರೇಷನ್ ಈ ಅವಧಿ ಮತ್ತು ದೂರ ಗಳನ್ನು ವಿಶ್ವದಾಖಲೆ ಎಂದು ಪರಿಗಣಿಸಿ ದೃಢಪಡಿಸಿದೆ. ಇವರನ್ನು ಹೊತ್ತೊಯ್ದ ನೌಕೆ ಸೊಯುಜ್ 9ನ್ನು ವಿವಿಧ ಹಂತ ಆಕಾಶ ನೌಕೆಯ ವಿಭಾಗದಲ್ಲಿ ದಾಖಲೆ ಸ್ಥಾಪಿಸಿದ ನೌಕೆಯೆಂದು ಇದೇ ಸಂಸ್ಥೆ ಸ್ಥಿರಪಡಿಸಿದೆ.

ಲ್ಯೂನಾಯೋಜನೆ

ಸೂರ್ಯನ ಸುತ್ತ ಸುತ್ತುವವು ಗ್ರಹಗಳು ಸೂರ್ಯನೇ ಅವುಗಳಿಗೆ ಕೇಂದ್ರ; ಅವುಗಳ ಕಕ್ಷೆಗಳು ಬೇರೆಬೇರೆ. ಭೂಮಿಯೂ ಇಂತಹ ಗ್ರಹ. ಗ್ರಹದ ಸುತ್ತಲೂ ಸುತ್ತುವ ಆಕಾಶ ಕಾಯವೇ ಉಪಗ್ರಹ. ಆದ್ದರಿಂದಲೆ ಭೂಮಿಯ ಸುತ್ತ ಮೊದಲ ಬಾರಿ ಸುತ್ತಿದ ಸ್ಪುಟ್ನಿಕ್ಕನ್ನೂ ತದನಂತರದ ಅನೇಕ ವಾಹನಗಳನ್ನೂ ಮತ್ತು ಇತ್ತೀಚಿನ ಟೆಲ್‌ಸ್ಟಾರ್ ಮುಂತಾದ ದೂರಸೂಚಿದ ಸಂಪರ್ಕದ ಸಾಧನಗಳನ್ನೂ ಕೃತಕ ಉಪಗ್ರಹಗಳು ಎಂದು ಕರೆಯುವುದು. ಭೂಮಿಯ ನ್ನು ಕೇಂದ್ರವಾಗಿರಿಸಿಕೊಂಡು ಚಂದ್ರ ಪರಿಭ್ರಮಿಸು ತ್ತಾನೆ. ಆದ್ದರಿಂದ ಚಂದ್ರನು ಭೂಮಿಯ ಒಂದು ಉಪಗ್ರಹ.

ಚಂದ್ರನು ಭೂಮಿಯ ನೆರೆಯವನಾದುದರಿಂದ ಚಂದ್ರನ ಬಗ್ಗೆ ಆಸಕ್ತಿ ಸ್ವಾಭಾವಿಕವಾದುದೇ. ಅಲ್ಲದೆ ಚಂದ್ರನ ಬಗ್ಗೆ ನಡೆಸುವ ಪ್ರಯೋಗಗಳೂ ಅಧ್ಯಯನ ಗಳೂ ಇನ್ನಿತರ ದೂರದೂರದ ಗ್ರಹಗಳ ಬಗೆಗೆ ಅಧ್ಯ ಯನ ಮಾಡಲು ಸಾಕಷ್ಟು ಅನುಭವವನ್ನೂ ದೂರ ದೃಷ್ಟಿಯನ್ನೂ ನೀಡಬಲ್ಲುವು. ಆದುದರಿಂದಲೇ ಇತ್ತೀಚೆಗೆ ಶಶಾಂಕನ ಬಗ್ಗೆ ಎಲ್ಲಿಲ್ಲದ ಸಡಗರದ ಪೈ ಪೋಟಿಯ ಅಧ್ಯಯನಗಳು. ಈ ನಿಟ್ಟಿನಲ್ಲಿ ರಷ್ಯವು ತನ್ನ ಸಾಧನೆಗಳಿಗಾಗಿ ಲ್ಯೂನಾ ಯೋಜನೆಯನ್ನು ರೂಪಿಸಿಕೊಂಡು ವಿವಿಧ ಸೋಪಾನಗಳಲ್ಲಿ ಮಹತ್ತರ ಸಾಧನೆಯನ್ನು ಮಾಡಿ ಇದೀಗ ತಾನೆ ಲ್ಯೂನಾ 17ನೇ ಹಂತವನ್ನು ತಲುಪಿದೆ. ಆ ಸಾಧನೆಯ ಹಿಂದಿನ ವಿವಿಧ ಮಜಲುಗಳನ್ನು ಈ ಕೆಳಕಂಡಂತೆ ಸ್ಥೂಲವಾಗಿ ಗುರುತಿಸಬಹುದು.

ಲ್ಯೂನಾ 1 :— 2-1-1959ರಲ್ಲಿ ಹಾರಿಸ ಲಾದ ನೌಕೆಯು ಚಂದ್ರನಿಂದ ಸುಮಾರು 6 ಸಾವಿರ ಕಿಲೋ ಮೀಟರ್ ದೂರದಲ್ಲಿ ಸಾಗಿಹೋಯಿತು.

ಲ್ಯೂನಾ 2 :- 12-9-1959ರಲ್ಲಿ ಹಾರಿಸ ಲಾದ ಈ ನೌಕೆಯು $33\frac{1}{2}$ ಗಂಟೆಗಳ ಕಾಲ ಚಲಿಸಿ ಚಂದ್ರನ ಮೇಲ್ಮೈ ಮೇಲೆ ಅಪ್ಪಳಿಸಿತು. ಭೂ ವಸ್ತು ವೊಂದು ಭೂಮಿಯಿಂದಾಚೆ ಇನ್ನೊಂದು ಆಕಾಶಕಾಯ ವನ್ನು ಸೇರಿದುದು ಇದೇ ಮೊದಲು.

ಲ್ಯೂನ-3: ಇದುವರೆಗೂ ಮಾನವನು ಕಂಡ ರಿಯದ ಅಪೂರ್ವ ನೋಟವನ್ನು ಒದಗಿಸಿದ ಈ ನೌಕೆಯು 4-10-1959 ರಲ್ಲಿ ಪ್ರಯಾಣ ಹೊರಟು ಚಂದ್ರನ ಹಿಂಭಾಗದ ಚಿತ್ರಗಳನ್ನು ಕಳುಹಿಸಿಕೊಟ್ಟಿತು. ಹಿಂತಿರುಗುವಾಗ ಭೂಮಿಯ ವಾತಾವರಣದೊಂದಿಗೆ ಘರ್ಷಣೆಯ ಪರಿಣಾಮವಾಗಿ ಭಸ್ಮವಾಯಿತು ಇದನ್ನು ಹಿಂದಿನ ಲ್ಯೂನಾ-2 ರಂತೆ ಚಂದ್ರತಲದ ಮೇಲೆ ಇಳಿ ಸುವ ಯೋಜನೆ ಇರಲಿಲ್ಲ.



ಲ್ಯೂನಾ-7: ಚಂದ್ರನ ಮೇಲ್ಮೈ ಮೇಲೆ ಸುರ ಕ್ಷಿತವಾದ ಮೃದು ಅವರೋಹಣ ಮಾಡಿಸುವ ಉದ್ದೇಶ ದಿಂದ 4-10- 965 ರಲ್ಲಿ ಹಾರಿಬಿಡಲಾಯಿತು. ಲ್ಯೂನಾ 2ರ ತೂಕದ ನಾಲ್ಕರಷ್ಟು ಅಥವಾ ಸುಮಾರು 1500 ಕಿಲೋಗ್ರಾಂ ತೂಕವಿದ್ದ ಈ ನೌಕೆಯು 86 ಘಂಟೆಗಳ ಕಾಲ ಯಾನ ಮಾಡಿ ಚಂದ್ರತಲದ ಮೇಲೆ ಬಡಿದಪ್ಪಳಿಸಿತು. ಮೃದು ಸ್ಪರ್ಶ ಸಾಧ್ಯವಾಗಲಿಲ್ಲ.

ಲ್ಯೂನಾ-9: 31-1-1966ರಲ್ಲಿ ಉಡಾವಣೆ ಮಾಡಲಾದ ಇದು ಚಂದ್ರನ ಮಟ್ಟಸದ ಮೇಲೆ ಮೆತ್ತಗೆ ಇಳಿಯಿತು. ಮೃದು ಅವರೋಹಣ ಮಾಡಿದ ಪ್ರಥಮ ನೌಕೆಯಾಯಿತು.

ಲ್ಯೂನಾ-10: ಹಿಂದಿನ ನೌಕೆಯ ಬಳಿಕ ಸರಿ ಯಾಗಿ 2 ತಿಂಗಳಿಗೆ ಈ ನೌಕೆಯು ಚಂದ್ರನಿಗೆ ಪ್ರಥಮ ಉಪಗ್ರಹವಾಯಿತು.

ಲ್ಯೂನಾ-16: ಅಮೇರಿಕದ ಇಬ್ಬರು ಗಗನ ಯಾತ್ರಿಗಳು ಚಂದ್ರ ತಲದ ಮೇಲೆ ಪದಊರಿ ಹಿಂತಿ ರುಗಿದ ಸುಮಾರು 14 ತಿಂಗಳಲ್ಲಿ ಅಂದರೆ 12-9-70 ರಲ್ಲಿ ಈ ನೌಕೆಯನ್ನು ಹಾರಿಬಿಡಲಾಯಿತು. ಇದರ ವೈಶಿಷ್ಟ್ಯವೆಂದರೆ ನೌಕೆಯು ಹೊರಟಂದಿನಿಂದ ಹಿಡಿದು ಚಂದ್ರತಲದ ಮೇಲೆ 20-9-70ರಲ್ಲಿ ಮೃದು ಸ್ಪರ್ಶದ ಅವರೋಹಣ ಮಾಡಿ 24-9-1970 ರಲ್ಲಿ ಭೂಮಿಗೆ ಹಿಂದಿರುಗುವವರೆಗೂ ಎಲ್ಲವೂ ದೂರದ ನಿಯಂತ್ರಣ ವ್ಯವಸ್ಥೆ ಇದಕ್ಕೂ ಮಿಗಿಲೆಂದರೆ ದಿನಾಂಕ 20 ರಂದು ಚಂದ್ರನ ಮೇಲ್ಮೈಯನ್ನು ಕೊರೆದು 350 ಸೆಂ. ಮೀ. ಆಳದಿಂದ ಚಂದ್ರಶಿಲೆಯನ್ನು ಸುರಕ್ಷಿತವಾಗಿ ಕೊಂಡು ತಂದುದು ಇದರಿಂದ ಎಷ್ಟು ಕರಾರು ವಾಕ್ಕಾದ ಲೆಕ್ಕಾ ಚಾರಗಳು ಈ ಸ್ವಯಂಚಾಲಿಕ ವ್ಯವಸ್ಥೆಯಲ್ಲಿ ಪೂರಕ ಗೊಂಡಿರಬೇಕು ಎಂದು ಭಾವಿಸಬಹುದು. ನೌಕೆಯು ಚಂದ್ರಕೋಶದಲ್ಲಿ ಮಾನವರಿದ್ದುಕೊಂಡೇ ಚಂದ್ರತಲ ದಿಂದ ಆರೋಹಣ ಮಾಡಿ ತಾವಿರುವ ಕೋಶವನ್ನು ಚಂದ್ರಾವರಣದಲ್ಲಿ ಪಹರಿಮಾಡುತ್ತಿರುವ ನೌಕೆಗೆ ಹೊಂದಿಸುವುದು ಎಷ್ಟು ಕಷ್ಟದಾಯಕವಾದ ಕೆಲಸ! ಹೀಗಿರುವಾಗ ಈ ಕ್ಲಿಷ್ಟಕರ ಕ್ರಿಯೆಯನ್ನು ಒಳ ಗೊಂಡಂತೆ ಭೂಮಿಯಿಂದ ದೂರದ ಆಣತಿಗಳನ್ನು ಚಾಚೂತಪ್ಪದೆ ಪಾಲಿಸುವುದೆಂದರೆ ಊಹೆಗೆ ನಿಲುಕ ದಂತಹ ಸಾಧನೆ ಎನ್ನಬೇಕು. ಈ ಸಫಲತೆಯ




ಪ್ರಯೋಜನ ಮುಂದೆ ದೂರದೂರದ ಗ್ರಹಗಳ ಅಧ ಯನದಲ್ಲಂತೂ ಬಹುವಾಗಿಸಹಾಯಕವಾಗಬಲ್ಲುದು.

ಲ್ಯೂನಾ-17: ಹಿಂದಿನ ಹಂತದ ಮುಂದುವರೆದ ಕೆಲಸಕಾರ್ಯಗಳನ್ನು ನಿಭಾಯಿಸಲು ಇದನ್ನು ಹಾರಿಸ ಲಾಯಿತು. ಇದೇ ನವೆಂಬರ್ 17 ರಂದು ಚಂದ್ರ ವದನವನ್ನು ಮೃದು ಸ್ಪರ್ಶಮಾಡಿದ ಈ ನೌಕೆಯ ಹೆಚ್ಚಳವೆಂದರೆ ತನ್ನಲ್ಲಿ ಎಂಟು ಚಕ್ರಗಳ ಲ್ಯೂನೋ ಖೋಡ್ ಎಂಬ ವಿಶೇಷತರವಾದ ವಾಹನವನ್ನು ಹೊತ್ತುಕೊಂಡು ಹೋಗಿದ್ದುದು, ಲ್ಯೂನೋಖೋಡ್ ತನ್ನ ದೂರದ ಭೂಮಿಯಲ್ಲಿನ ಮಾನವಸ್ವಾಮಿಗಳ ಆಜ್ಞೆಗಳಂತೆಯೇ ಟೊಂಕ ಕಟ್ಟಿ ಇನ್ನೂ ಸೇವೆಯನು ಸಲ್ಲಿಸುತ್ತಿದೆ. ಚಂದ್ರನ ಒಂದು ರಾತ್ರಿ ಭೂಮಿಯ 14 ದಿನಗಳಿಗೆ ಸಮ, ಇಂತಹ ಚಂದ್ರರಾತ್ರಿ ನವೆಂಬರ್

24 ರಂದು ಪ್ರಾರಂಭವಾಗುವ ವೇಳೆಗೆ ಲ್ಯೂನೋಖೋಡ್ 100 ಮೀಟರುಗಳಿಗೂ ಮೀರಿದ ದೂರವನ್ನು ಸಂಚರಿಸಿತ್ತು. ಈ ಜೀಪ್ ನಂತಹ ವಿಚಿತ್ರ ವಾಹನದ ಉರುವಲು ಸೂರ್ಯ ಶಕ್ತಿಯಾದುದರಿಂದ ವಾಹನವನ್ನೂ 14 ದಿನಗಳ ಬಲವಂತ ವಿಶ್ರಾಂತಿಗೆ ವಿಜ್ಞಾನಿಗಳು ಕಳುಹಿಸಿದ್ದರು. 8-12-1970ನೆಯ ಮಂಗಳವಾರ ಚಂದ್ರನಲ್ಲಿ ಸೂರ್ಯೋದಯವಾದಾಗ ಮತ್ತೆ ವಿಜ್ಞಾನಿಗಳು ಕ್ರಮೇಣ ಲ್ಯೂನೋಖೋಡನ್ನು ದೂರದ ನಿಯಂತ್ರಣ ವ್ಯವಸ್ಥೆಯಿಂದ ಎಚ್ಚರಗೊಳಿಸಿದರು. 10ನೆಯ ಗುರುವಾರದಂದು ಮತ್ತೆ ಚಲನೋದ್ಯುಕ್ತವನ್ನಾಗಿ ಮಾಡಿದರು. ಕಡಿದಾದ ಹಳ್ಳ ತಿಟ್ಟುಗಳನ್ನು ಹತ್ತಿಳಿಯುವಂತೆ ಆಜ್ಞಾಪಿಸಿದರು; ವಾಹನ ಅಂತೆಯೇ ನಡೆದುಕೊಂಡಿತು. ಡಿಸೆಂಬರ್ 14ರ ವೇಳೆಗೆ ಒಟ್ಟು 1022 ಮೀಟರುಗಳಷ್ಟು ದೂರವನ್ನು ಸವೆಸಿರುವ ಅದು ತನ್ನ ಮಾರ್ಗದಿಂದಲೇ ಅನೇಕ ಸಂಶೋಧನಾತ್ಮಕ ಸಂಗತಿಗಳನ್ನು ಭೂಮಿಗೆ ಪ್ರಸಾರ ಮಾಡಿದೆ. ಡಿಸೆಂಬರ್ 14 ರಿಂದ 17ರ ವರೆಗಿನ ನಾಲ್ಕು ದಿನಗಳ ಅವಧಿಯಲ್ಲಿ ಒಂದೆಡೆ ನೆಲೆನಿಂತು ಈ ಅಂತರಿಕ್ಷ ಜೀಪ್ ಸೂರ್ಯ ಶಕ್ತಿಯ ಸಹಾಯದಿಂದ ಹಲವಾರು ವೈಜ್ಞಾನಿಕ ಅಳತೆಗಳನ್ನು ಮಾಪನ ಮಾಡಿ ಭೂಮಿಗೆ ಬಿತ್ತರಗೊಳಿಸಿದೆ. ತಾನಿರುವ ಸೀ ಆಫ್ ರೈನ್ಸ್ ಭಾಗದಿಂದ ಇದು ಇನ್ನೂ ಏನೇನು ಮಾಹಿತಿಗಳನ್ನು ಸಂಗ್ರಹಿಸುವುದೋ ಕಾದು ನೋಡಬೇಕಾಗಿದೆ.

ಈ ಲೇಖನ ಮುದ್ರಣಕ್ಕೆ ಹೋಗುವ ವೇಳೆಗೆ ಲ್ಯೂನೋಖೋಡ್ ಚಂದ್ರ ಸ್ಥಾಯಿಯಾಗಿ ಸುಮಾರು ಎರಡು ತಿಂಗಳು ಸಂದುವು. ಈ ಅವಧಿಯಲ್ಲಿ ಅದು ನೆರವೇರಿಸಿರುವ ಕಾರ್ಯಭಾರವನ್ನು ನೋಡಿದರೆ ಅದನ್ನು ಕೇವಲ ಯಂತ್ರ ಎಂದರೆ ಮನಸ್ಸಿಗೆ "ಬಿಕೊ" ಎನಿಸುತ್ತದೆ. ಅದನ್ನು "ಯಾಂತ್ರಿಕ ವಿಜ್ಞಾನಿ" ಎಂದರೆ ಹೆಚ್ಚು ಸಮಂಜಸವಾಗುತ್ತದೆ. ಈ ನಮ್ಮ ಪ್ರತಿನಿಧಿಯಿಲ್ಲದೆ ಕೇವಲ ರುಧಿರ ಖಂಡಗಳಿಂದ ತುಂಬಿದ "ಮಾನವ ವಿಜ್ಞಾನಿ"ಗಳಿಂದ ನಾವೆ ಒಂದು ವೇಳೆ ಅಲ್ಲಿಗೆ ಹೋಗಿದ್ದಿದ್ದರೆ ಚಂದ್ರಾವರಣದ ಅನೇಕ ನಿಗೂಢಗಳನ್ನು ಇನ್ನೂ ಬಹಿರ್ಗೆಳೆಯದ ಈ ಅಪ್ರಬುದ್ಧಾವಸ್ಥೆಯಲ್ಲಿ ಕೇವಲ 3-4 ದಿನಗಳವರೆಗಾದರೂ ಇರಲಾಗುತ್ತಿತ್ತೆ? ಅಲ್ಲಿನ ಆಕಾಶ ಬಲಗಳ ಜತೆಗೆ ಚಾಂದ್ರ ರಾತ್ರಿಯ ತಿಮಿರ ಹಾಗೂ ಅತ್ಯಲ್ಪ ಉಷ್ಣಾಂಶಗಳು ಹಾಗೂ ಕ್ಷುದ್ಬಾಧೆ ಆಮ್ಲಜನಕಗಳ ಪೂರೈಕೆ ಇಂತಹ ಎಷ್ಟು ಹಲವು ಹನ್ನೊಂದು ಸಮಸ್ಯೆಗಳು ಉದ್ಭವಿಸುತ್ತಿದ್ದುವು? ಅಷ್ಟಪಾದ ವಿಜ್ಞಾನಿ ಈ "ಲ್ಯೂನೋಖೋಡ್" ನಮಗಾಗಿ ಎಂತಹ ಗುರುತರ ಕಾರ್ಯವನ್ನು ನಿರ್ವಹಿಸುತ್ತಿದೆ!

ಇವತ್ತಿಗೆ ಸರಿಯಾಗಿ ಎರಡು ದಿನಗಳ ಹಿಂದೆ (8-1-71) ಲ್ಯೂನೋಖೋಡ್ ಬೀಡುಬಿಟ್ಟಿರುವ ಸೀ ಆಫ್ ರೈನ್ಸ್ ಬಂಜರು ನಿಲ್ದಾಣ ಪ್ರದೇಶದಲ್ಲಿ ಸೂರ್ಯೋದಯವಾಯಿತು. ಇದರೊಂದಿಗೆ ಲ್ಯೂನೋಖೋಡ್‌ನ ಚಾಂದ್ರ ಜೀವನದಲ್ಲಿ ಮೂರನೆಯ ಚಂದ್ರ ಹಗಲು. ಈ ಒಂದು ಚಾಂದ್ರ ಹಗಲು ಅನೇಕ ಭೂಹಗಲುಗಳಿಗೆ ಸಮ! ಭೂಗರ್ಭ ಶಾಸ್ತ್ರಜ್ಞರು ಭೂಗರ್ಭದಲ್ಲಿನ ಖನಿಜಗಳ ಬಗ್ಗೆ ಅಧ್ಯಯನ ಮಾಡುವವರು. ಚಂದ್ರನ ಮಣ್ಣನ್ನು ವಿಶ್ಲೇಷಿಸಿ ಖನಿಜಾಂಶಗಳ ಬಗ್ಗೆ ಸಂಶೋಧನೆ ನಡೆಸಿದೆ. ಆದರೆ ಇದುವರೆಗಿನ ಒಂದು ಮೈಲಿಗೂ ಹೆಚ್ಚಿನ ಓಡಾಟದಲ್ಲಿ ಅನ್ವೇಷಣೆ ಪೃಥಕ್ಕರಣ ನಡೆಸಿದ ಫಲವಾಗಿ ಅಲ್ಲಿನ ಮಣ್ಣು ಸಹ ಇಲ್ಲಿನ ಭೂವಲಯದಲ್ಲಿ ಕಂಡುಬರುವ ಮೂಲ ಶಿಲೆಗಳಿಗೆ ಹೋಲುತ್ತದೆಂದು ತಿಳಿದುಬಂದಿದೆ. ಚಂದ್ರಗರ್ಭದಲ್ಲಿ ಅಲ್ಯುಮಿನಿಯಂ, ಕಬ್ಬಿಣ, ಸಿಲಿಕಾನ್ ಬಿಟಾನಿಯಂ, ಮೆಗ್ನಿಸಿಯಂ, ಪೊಟಾಸಿಯಂ ಮತ್ತು ಕ್ಯಾಲ್ಸಿಯಂ ಖನಿಜಾಂಶಗಳ ನಿಕ್ಷೇಪಗಳಿರುವುದು ಅಧ್ಯಯನ ವೇದ್ಯವಾಗಿದೆ.



# ಚಲನಚಿತ್ರ ಕೈಗಾರಿಕೆಗೆ ಸರ್ಕಾರದ ನೆರವು

— ಡಿ. ಎಸ್. ಪಾಳ್ಯೇಗಾರ್,
ವಿಶೇಷಾಧಿಕಾರಿ – ಚಲನಚಿತ್ರ ಇಲಾಖೆ

ಪ್ರಜಾಪ್ರಭುತ್ವ ಅಸ್ತಿತ್ವಕ್ಕೆ ಬಂದಮೇಲೆ ಪ್ರಜಾಕೋಟಿಯ ಪುರೋಭಿವೃದ್ಧಿಗಾಗಿ ಅನೇಕ ಅಭಿವೃದ್ಧಿ ಯೋಜನೆಗಳನ್ನು ಹಾಕಿಕೊಂಡು ಕಾರ್ಯಾಚರಣೆಗೆ ತರಲಾಗುತ್ತಿದೆ. ನಮ್ಮ ರಾಷ್ಟ್ರದಲ್ಲಿ ಅತ್ಯಲ್ಪ ಕಾಲದಲ್ಲಿ ಸಾಧಿಸಿದ ಪ್ರಗತಿಯನ್ನು ನೋಡಿದ ಪರದೇಶದವರೂ ಸಹ ಆಶ್ಚರ್ಯಪಟ್ಟಿದ್ದಾರೆ; ಮೆಚ್ಚಿದ್ದಾರೆ. ನಮ್ಮ ಸರ್ಕಾರದವರು ವ್ಯವಸಾಯಾಭಿವೃದ್ಧಿ, ವಿದ್ಯುಚ್ಛಕ್ತಿ ಉತ್ಪಾದನೆ ಮತ್ತು ವಿತರಣೆ, ಶಿಕ್ಷಣ, ಸಮಾಜ ಕಲ್ಯಾಣ, ಪಶುಪಾಲನೆ, ಕೈಗಾರಿಕೆ ಮುಂತಾದ ಜನೋಪಕಾರಿ ಯೋಜನೆಗಳನ್ನು ಕೈಗೊಂಡು ಕಾರ್ಯಗತಮಾಡುತ್ತಿರುವಂತೆ ಕಲೆ ಮತ್ತು ಕೈಗಾರಿಕೆಯ ಸಂಗಮವಾದ ಚಲನಚಿತ್ರೋದ್ಯಮದ ಬೆಳವಣಿಗೆಗೂ ಸೂಕ್ತ ಗಮನವಿತ್ತು, ಅದಕ್ಕೆ ಉತ್ತೇಜನಕಾರಿಯಾದ ಹಲವು ಯೋಜನೆಗಳನ್ನು ಕಾರ್ಯಾಚರಣೆಗೆ ತರಲಾಗಿದೆ. ಅವುಗಳಲ್ಲಿ ಮುಖ್ಯವಾದವು ಧನ ಸಹಾಯ ಮತ್ತು ಪ್ರಶಸ್ತಿ ಪ್ರದಾನ ಯೋಜನೆ.

ನಮ್ಮ ರಾಜ್ಯದಲ್ಲಿ ಅಳಿಯದೆ ಉಳಿದಿರುವ ಚಲನಚಿತ್ರ ಕೈಗಾರಿಕೆಗೆ ಸರ್ಕಾರದವರ ನೆರವಿನಿಂದ ಈಗ ಹೊಸ ಪರಂಪರೆಯೇ ಬೆಳೆಯುತ್ತಿದೆ. ಈ ಕ್ಷೇತ್ರದಲ್ಲಿ ಹಿಂದೆಂದೂ ಕಾಣದಂತಹ ಉತ್ಸಾಹ, ಕಾಯ-ಚಟುವಟಿಕೆಗಳು ಕಂಡುಬರುತ್ತಿವೆ. ಇದಕ್ಕೆ ಕಾರಣ ಸರ್ಕಾರದವರ ಸಹಾಯ ಯೋಜನೆಗಳು ಮತ್ತು ಕನ್ನಡ ಕಲಾಭಿಮಾನಿಗಳು ಕೊಡುತ್ತಿರುವ ಪ್ರೋತ್ಸಾಹಗಳು ನಿರ್ಮಾಪಕರ ನಿರಂತರಪ್ರಯತ್ನ, ನಿರ್ದೇಶಕರ ಸತತ ದುಡಿಮೆ. ಈ ಉತ್ಸಾಹ ಪ್ರೋತ್ಸಾಹ ಇಮ್ಮಡಿಯಾದರೆ ಚಿತ್ರಗಳ ತಯಾರಿಕೆ ನೂರ್ಮಡಿ ಬೆಳೆದು ಬೆಳೆಯುತ್ತಿರುವ ಜನಸಂಖ್ಯೆಗೆ ಉದ್ಯೋಗ ಕಲ್ಪಿಸಿ, ಆರ್ಥಿಕ ಪರಿಸ್ಥಿತಿಯನ್ನು ಉತ್ತಮಗೊಳಿಸಬಹುದು. ದುಡಿಮೆಯ ಪ್ರಾಮುಖ್ಯತೆ ಪಡೆದಿರುವ ಉಳಿದೆಲ್ಲ ಕೈಗಾರಿಕೆಗಳಿಗೆ ಪ್ರಾಶಸ್ತ್ಯಕೊಟ್ಟಿರುವಂತೆಯೇ ದುಡಿಮೆಯ ದಣಿವನ್ನು ಪರಿಹರಿಸುವ ಈ ಚಲನಚಿತ್ರ ಉದ್ಯಮಕ್ಕೂ ಸರ್ಕಾರದವರು ನೆರವು ನೀಡುತ್ತಿದ್ದಾರೆ.

ಚಲನಚಿತ್ರ ಯೋಜನೆಗಳನ್ನು ಕಾರ್ಯಗತ ಮಾಡುವುದಕ್ಕಾಗಿ ಸರ್ಕಾರದವರು ಒಂದು ಫಿಲಂ ಯೂನಿಟ್ ಎಂಬ ಪ್ರತ್ಯೇಕ ಇಲಾಖೆಯನ್ನೇ ಸ್ಥಾಪಿಸಿದ್ದಾರೆ. ಈಗ್ಗೆ 3 ವರ್ಷಗಳಿಂದ ಈ ಇಲಾಖೆಯು ಕೆಲಸ ಮಾಡುತ್ತಿದೆ.

## ಧನಸಹಾಯ ಯೋಜನೆ

ಈ ಯೋಜನೆಯಂತೆ ಮೈಸೂರಿನಲ್ಲಿಯೇ ಪೂರ್ಣವಾಗಿ ಚಿತ್ರೀಕರಿಸಿದ ಪ್ರತಿಯೊಂದು ಚಲನಚಿತ್ರಕ್ಕೂ 50 ಸಾವಿರ ರೂಪಾಯಿಗಳ ಸಹಾಯಧನ ನೀಡಲಾಗುವುದು.

1967—68ರಲ್ಲಿ ನಕ್ಕರೆ ಅದೇ ಸ್ವರ್ಗ, ಅನುರಾಧ, ಚಕ್ರತೀರ್ಥ, ಮುದ್ದು ಮೀನ, ಬ್ಲಾಕ್ ಮಾರ್ಕೆಟ್. ಈ ಐದಕ್ಕೆ ಧನಸಹಾಯ ಸಂದಿದೆ.

1968—69ರಲ್ಲಿ ಧನಪಿಶಾಚಿ, ಲಗ್ನಪತ್ರಿಕೆ, ಸರ್ವಮಂಗಳ, ಮಂಕುದಿಣ್ಣೆ, ಆನಂದಕಂದ, ಜಾಣರ ಜಾಣ, ಅಣ್ಣ ತಮ್ಮ, ನಮ್ಮ ಊರು, ಹಣ್ಣೆಲೆ ಚಿಗುರಿದಾಗ, ಪ್ರೇಮಕ್ಕೂ ಪರ್ಮಿಟ್ಟೆ, ಧೂಮಕೇತು, ಹೂವು ಮುಳ್ಳು, ಪ್ರವಾಸಿ ಮಂದಿರ, ಕಲ್ಲುಸಕ್ಕರೆ, ಭಾಗ್ಯದ ಬಾಗಿಲು, ಬೇಡಿಬಂದವಳು.

1969-70ರಲ್ಲಿ ಮಾರ್ಗದರ್ಶಿ, ನಮ್ಮ ಮಕ್ಕಳು, ಸುವರ್ಣ ಭೂಮಿ, ಕಾಡಿನ ರಹಸ್ಯ, ಮಧುರ ಮಿಲನ, ಮಣ್ಣಿನ ಮಗ, ಎರಡುಮುಖ, ಮಕ್ಕಳೆ ಮನೆಗೆ ಮಾಣಿಕ್ಯ, ಕಣ್ಣು ಮುಚ್ಚಾಲೆ, ಕಪ್ಪು ಬಿಳುಪು, ಪುನರ್ಜನ್ಮ, ಪುಣ್ಯಪುರುಷ, ಕಲ್ಪವೃಕ್ಷ, ಮದುವ-ಮದುವೆ-ಮದುವೆ, ಮಾತೃಭೂಮಿ, ಲಕ್ಷಾಧೀಶ್ವರ, ಕಾಣಿಕೆ, ಉಯ್ಯಾಲೆ, ಗೃಹಲಕ್ಷ್ಮಿ, ಚದುರಂಗ.

1970-71 ರಲ್ಲಿ ಒಂದೇ ಬಳ್ಳಿಯ ಹೂಗಳು, ನಾಡಿನ ಭಾಗ್ಯ, ಕರುಳಿನ ಕರೆ, ಬೃಂದಾವನ, ಗೆಜ್ಜೆ ಪೂಜೆ, ಕಳ್ಳರಕಳ್ಳ, ರಂಗಮಹಲ್ ರಹಸ್ಯ, ಕಣ್ಣೀರು, ಜೌಕದದೀಪ, ಅನಿರೀಕ್ಷಿತ, ಅರಿಶಿನ ಕುಂಕುಮ, ಮುಕುಂದ ಚಂದ್ರ, ಅಪರಾಜಿತೆ, ಭಲೇಕಿಲಾಡಿ, ಎಲ್ಲೆಲ್ಲೂ ನಾನೇ, ಮೃತ್ಯುಪಂಜರದಲ್ಲಿ, ಗೂಢಾಚಾರಿ 555, ಮನಸ್ಸಿದ್ದರೆ ಮಾರ್ಗ, ಭೂಪತಿರಂಗ, ಠಕ್ಕ ಬಿಟ್ರೆ ಸಿಕ್ಕ, ಸಂಸ್ಕಾರ.

ಈ ಯೋಜನೆ ಪ್ರಾರಂಭದಿಂದ ಇದುವರೆಗೆ ಒಟ್ಟು 61 ಚಲನ ಚಿತ್ರಗಳಿಗೆ ಸಹಾಯಧನ ಮಂಜೂರಾಗಿದೆ.

### ಪ್ರಶಸ್ತಿ ಪ್ರದಾನ ಯೋಜನೆ

ಉತ್ತಮ ಕನ್ನಡ ಚಲನಚಿತ್ರಗಳನ್ನು ತಯಾರಿಸಲು ಉತ್ತೇಜನ ಕೊಡುವ ಸದುದ್ದೇಶದಿಂದ ಸರ್ಕಾರದವರು ಉತ್ತಮ ಚಿತ್ರಗಳಿಗೆ ಪ್ರಶಸ್ತಿ ಕೊಡುವ ಯೋಜನೆಯನ್ನು ಕಾರ್ಯಗತ ಮಾಡುತ್ತಿದ್ದಾರೆ.

ಈ ಯೋಜನೆಯ ನಿಯಮದಂತೆ ನಿರ್ದಿಷ್ಟ ಅವಧಿಯಲ್ಲಿ ತಯಾರಾದ ಅತ್ಯುತ್ತಮ ಕನ್ನಡ ಚಿತ್ರವೆಂದು ಪರಿಗಣಿಸಿದ್ದಕ್ಕೆ 50,000 ರೂ.ಗಳ ನಗದು ಬಹುಮಾನವನ್ನು ನಿರ್ಮಾಪಕರಿಗೂ ಅದರ ನಿರ್ದೇಶಕರಿಗೆ ಸುವರ್ಣ ಪದಕವನ್ನೂ, ಎರಡನೇ ಅತ್ಯುತ್ತಮ ಚಿತ್ರಕ್ಕೆ 25,000 ರೂ. ನಗದು ಬಹುಮಾನವನ್ನು ಮತ್ತು ಅದರ ನಿರ್ದೇಶಕರಿಗೆ ರಜತ ಪದಕವನ್ನು, 3ನೇ ಅತ್ಯುತ್ತಮ ಚಿತ್ರಕ್ಕೆ 10,000 ರೂ. ನಗದು ಬಹುಮಾನ ಮತ್ತು ಅದರ ನಿರ್ದೇಶಕರಿಗೆ ಕಂಚಿನ ಪದಕವನ್ನೂ ನೀಡಲಾಗುತ್ತಿತ್ತು.

ಇದಾದನಂತರ ಸರ್ಕಾರದವರು ಈ ಪ್ರಶಸ್ತಿ ಪ್ರಧಾನ ಯೋಜನೆಯನ್ನು ಪುನಃ ಪರಿಶೀಲಿಸಿ. ಹಲವು ಬದಲಾವಣೆಗಳನ್ನು ಮಾಡಿದರು. ಮಾರ್ಪಾಡು ಮಾಡಿದ ಯೋಜನೆಯಂತೆ ಕೆಳಗೆ ನಮೂದಿಸಿರುವಂತೆ ನಗದು ಬಹುಮಾನ, ಪದಕ ಮತ್ತು ಪ್ರಶಸ್ತಿ ಪತ್ರಗಳನ್ನು ಕೊಡಲಾಗುವುದು.

| | ನಗದು ಬಹುಮಾನ ರೂ.ಗಳು |
|---|---|
| 1. ಮೊದಲನೆಯ ಅತ್ಯುತ್ತಮ ಕನ್ನಡ ರೂಪಕ ಚಿತ್ರದ ನಿರ್ಮಾಪಕರಿಗೆ | 50,000 |
| ಅದರ ನಿರ್ದೇಶಕರಿಗೆ | 5,000 ಮತ್ತು ಸುವರ್ಣ ಪದಕ |
| 2. ಎರಡನೆಯ ಅತ್ಯುತ್ತಮ ಚಿತ್ರದ ನಿರ್ಮಾಪಕರಿಗೆ | 25,000 |
| ಅದರ ನಿರ್ದೇಶಕರಿಗೆ | 2,500 ಮತ್ತು ರಜತ ಪದಕ |
| 3. ಮೂರನೆಯ ಅತ್ಯುತ್ತಮ ಚಿತ್ರದ ನಿರ್ಮಾಪಕರಿಗೆ | 10,000 |
| ನಿರ್ದೇಶಕರಿಗೆ | 1,000 ಮತ್ತು ಕಂಚಿನ ಪದಕ |
| 4. ಅತ್ಯುತ್ತಮ ನಟ ಮತ್ತು ನಟಿಗೆ | ತಲಾ 4,000 ಮತ್ತು ಸುವರ್ಣ ಪದಕ |
| 5. ಅತ್ಯುತ್ತಮ ಪೋಷಕ ನಟ ಮತ್ತು ನಟಿಗೆ | ತಲಾ 2,000 ಮತ್ತು ಪ್ರಶಸ್ತಿ ಪತ್ರ |



| | ನಗದು ಬಹುಮಾನ ರೂ.ಗಳು |
|---|---|
| 6. ಅತ್ಯುತ್ತಮ ಕಥಾ ಲೇಖಕನಿಗೆ<br>7. ,, ಚಿತ್ರ ನಾಟಕ ಲೇಖಕ<br>8. ,, ಸಂಭಾಷಣೆ ಲೇಖಕ | ಪ್ರತಿಯೊಬ್ಬರಿಗೂ 1500 ಮತ್ತು ಪ್ರಶಸ್ತಿ ಪತ್ರ |
| 9. ,, ಸಂಗೀತ ನಿರ್ದೇಶಕ | 2,500 ಮತ್ತು ಪ್ರಶಸ್ತಿ ಪತ್ರ |
| 10. ಅತ್ಯುತ್ತಮ ಛಾಯಾಗ್ರಾಹಕ<br>,, ಧ್ವನಿಗ್ರಾಹಕ<br>,, ಸಂಕಲನಕಾರ | ಪ್ರತಿಯೊಬ್ಬರಿಗೂ 1000 ಮತ್ತು ಪ್ರಶಸ್ತಿ ಪತ್ರ |

### ಸುಸಜ್ಜಿತ ಸ್ಟುಡಿಯೋವಿಗೆ ಸಹಾಯ

ಇದುವರೆಗೆ ಮೈಸೂರು ರಾಜ್ಯದಲ್ಲಿ ಇದ್ದುದು ಒಂದೇ ಸ್ಟುಡಿಯೋ ಅದು ಮೈಸೂರು ನಗರದ ಬಳಿ ಮೈಸೂರು-ಮಂಗಳೂರು ರಸ್ತೆಯಲ್ಲಿದೆ. ಅದರ ಹೆಸರು ಪ್ರೀಮಿಯರ್ ಸ್ಟುಡಿಯೋ ಎಂದು. ಹೆಚ್ಚು ಸಂಖ್ಯೆಯಲ್ಲಿ ಬೆಳೆಯುತ್ತಿರುವ ಚಿತ್ರಗಳಿಗೆ ಒಂದು ಸ್ಟುಡಿಯೋ ಸಾಕಷ್ಟು ಸೌಲಭ್ಯಗಳನ್ನು ನೀಡಲು ಸಾಧ್ಯವಿಲ್ಲವಾದ್ದರಿಂದ ಬೆಂಗಳೂರಿನ ಬಳಿ ಶ್ರೀ ಕಂಠೀರವ ಸ್ಟುಡಿಯೋಗೆ ಸರ್ಕಾರದವರು ಸಹಾಯ ಮಾಡಿದ್ದಾರೆ. ಅದು ಈಗ ಕಾರ್ಯ ಚರಣೆಯಲ್ಲಿದೆ. ಬೆಂಗಳೂರಿಗೆ ಸುಮಾರು 10 ಮೈಲಿಗಳ ದೂರದಲ್ಲಿ (ಕೆಂಗೇರಿಬಳಿ) ತೂರನಹಳ್ಳಿ ಗುಡ್ಡ ಅರಣ್ಯ ಪ್ರದೇಶದಲ್ಲಿ 20 ಎಕರೆ ಜಮೀನನ್ನು "ಅಭಿಮಾನ ಚಿತ್ರ ಸ್ಟುಡಿಯೋ" ಕಟ್ಟಲು ಚಲನಚಿತ್ರ ನಟ ಶ್ರೀ ಟಿ. ಎಸ್. ಬಾಲಕೃಷ್ಣರವರಿಗೆ ಸರ್ಕಾರದವರು ಮಂಜೂರು ಮಾಡಿದ್ದಾರೆ. ಅಲ್ಲಿ ಈಗ ಚಿತ್ರೀಕರಣ ಮಂದಿರ ಸಿದ್ಧವಾಗಿದೆ. ಶ್ರೀ ಚಾಮುಂಡೇಶ್ವರಿ ಸ್ಟುಡಿಯೋ ಎಂಬ ಹೆಸರಿನ ಮತ್ತೊಂದು ಸ್ಟುಡಿಯೋ ಕನ್ನಿಂಗ್ಹಾಮ್ ರಸ್ತೆಯಲ್ಲಿ ನಿರ್ಮಾಣವಾಗುತ್ತಿದೆ. ಸಂಸ್ಕರಣಯಂತ್ರ, ಪ್ರಿಂಟಿಂಗ್, ರಿಕಾರ್ಡಿಂಗ್, ಮೊದಲಾದ ಸೌಲಭ್ಯಗಳನ್ನೊದಗಿಸುವ ಭರವಸೆ ಇದೆ.

ಕಚ್ಚಾಫಿಲಮ್ಮಿನ ಮತ್ತು ವರ್ಣಾಲಂಕಾರವಸ್ತುಗಳನ್ನು ಬೆಂಗಳೂರಿನಲ್ಲಿಯೇ ಸರಬರಾಜು ಮಾಡುವುದು, ಫಿಲಂ ಸೆನಸಾರ ಬೋರ್ಡಿನಲ್ಲಿ ಕನ್ನಡ ಪರಿಣತರನ್ನು ಸದಸ್ಯರನ್ನಾಗಿ ನೇಮಿಸುವುದು ಮುಂತಾದ ಹಲವು ಸಲಹೆಗಳು ಪರಿಶೀಲನೆಯಲ್ಲಿವೆ. ನಿರ್ಮಾಪಕರಿಗೆ, ನಿರ್ದೇಶಕರಿಗೆ, ನಟನಟಿಯರಿಗೆ, ತಾಂತ್ರಿಕ ವರ್ಗದವರಿಗೆ ನೀಡುವ ಸಹಾಯ ಪ್ರೋತ್ಸಾಹ ಚಲನಚಿತ್ರೋದ್ಯಮ ಸಂಮೃದ್ಧಿಯಾಗಿ ಬೆಳೆಯುವುದರಲ್ಲಿ ಸಂಶಯವಿಲ್ಲ. ಕಲಾಹವ್ಯಾಸಿ, ತನ್ನ ಕಲಾಪ್ರೌಢಿಮೆಯನ್ನು ತೋರಿಸಲು ಸಾಹಿತಿ, ಸಂಗೀತಗಾರ ಅವರು ತಮ್ಮ ಪಾಂಡಿತ್ಯವನ್ನು ಪ್ರಕಾಶಗೊಳಿಸಲು, ಸದವಕಾಶ ಅವರಿಗೆಲ್ಲಾ ಸಿಕ್ಕಿದೆ. ವಾದ್ಯಗೋಷ್ಠಿಯವರಿಗೆ, ವರ್ಣಾಲಂಕಾರ ಮಾಡುವವರಿಗೆ, ನೃತ್ಯಗಾರರಿಗೆ, ಚಿತ್ರಕಾರರಿಗೆ, ಒಡವೆ ಮಾಡುವವರಿಗೆ, ಬಡಗಿಗಳಿಗೆ, ರಂಗ ಸಜ್ಜಿಕೆ ಮಾಡುವವರಿಗೆ, ಶೃಂಗಾರ ಮಾಡುವವರಿಗೆ, ಇವರಿಗೆಲ್ಲಾ ಉದ್ಯೋಗ ಲಭಿಸುತ್ತದೆ. ನಮ್ಮ ನಿರ್ಮಾಪಕರು ನೈತಿಕ ಬಲವನ್ನು ವೃದ್ಧಿಮಾಡುವಂತಹ, ನಮ್ಮ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಉತ್ತಮ ಚಿತ್ರಗಳನ್ನು ತಯಾರಿಸಿ, ಸಾಕಷ್ಟು ಲಾಭಗಳಿಸಬೇಕು. ಕನ್ನಡ ಜನಕೋಟಿಯ ಅದರ ಅಭಿಮಾನಗಳನ್ನು ಗಳಿಸಲೆಂದು ಹಾರೈಸುತ್ತೇನೆ.

# ನಿಂದೆಗೊಂದು ಪರ್ವಕಾಲ

— ರಾ. ಕು,

“ರಾಕು” ಎಂಬ ಕಾವ್ಯನಾಮದಿಂದ ಬರೆಯುತ್ತಿರುವ ಶ್ರೀ ಆರ್. ವಿ. ಕುಲಕರ್ಣಿ, ಎಂ.ಎ., ಬಿ.ಇಡಿ. ಅವರು ಕನ್ನಡ ಸಾಹಿತ್ಯದಲ್ಲಿ ಹರಟೆಯ ಹೊಸ ದಾರಿಯೊಂದನ್ನು ನಿರ್ಮಿಸಿದ್ದಾರೆ. ಅವರ “ಗಾಳಿಪಟ” ಹಾಗೂ “ದೇವಕನ್ಯೆ” ಗಳು ರಸಿಕರ ತಲೆದೂಗಿಸಿವೆ. ಸಮಕಾಲೀನ ರಾಜಕೀಯ ಜೀವನದಲ್ಲಿ ಕಂಡುಬರುವ ಕೊಂಕು-ಕುಟಿಲತೆಗಳನ್ನು ಅವರು ಮಾರ್ಮಿಕವಾಗಿ, ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ ನಿರೂಪಿಸಿದ್ದಾರೆ.

—ಸಂ.

“ತನ್ನ ಬಣ್ಣಿಸಬೇಡ ಇದರ ಹಳಿಯಲು ಬೇಡ” ಎಂಬುದು ಬಲು ದೊಡ್ಡ ಮಾತು. ಆದರೆ ಇಂದಿನ ಯಾವ ರಾಜಕಾರಣಿಯೂ ಅದನ್ನು ಒಪ್ಪಲಾರ. ಆತ್ಮಸ್ತುತಿ ಹಾಗು ಪರನಿಂದೆ—ಈ ಎರಡೂ ಪ್ರಚಾರ ಯುಗದ ಮುಖ್ಯಸಾಧನಗಳು. ಜನಮನವನ್ನು ಆಕರ್ಷಿಸಿ ಒಲಿಸಿಕೊಳ್ಳಬೇಕಾದರೆ, ಯೋಜನಾಬದ್ಧವಾದ ಪೂರ್ಣಪ್ರಮಾಣದ ನಿರಂತರ ಪ್ರಚಾರ ಆವಶ್ಯಕವಾಗುತ್ತದೆ. ವ್ಯಕ್ತಿಯ ಅಥವಾ ಪಕ್ಷದ ನೆಲೆಬೆಲೆಗಳನ್ನು ತಾವೆ ಕಂಡುಕೊಂಡು, ತೂಗಿನೋಡಿ ನಾಗರಿಕರು ಆಯ್ಕೆ ಮಾಡಬೇಕು ಅವರಲ್ಲಿ ಅಂತಹ ವಿವೇಚನಾ ಶಕ್ತಿಯನ್ನೂ ಅಧಿಕಾರವನ್ನೂ ಪ್ರಜಾಪ್ರಭುತ್ವ ಒಪ್ಪಿಕೊಂಡಿದೆ. ರಾಜಕಾರಣಿ ಜನತೆಗಿರುವ ಆಯ್ಕೆ ಅಧಿಕಾರವನ್ನೇನೊ ಒಪ್ಪುತ್ತಾನೆ; ಅವರಲ್ಲಿ ವಿವೇಚಕ ಬುದ್ಧಿಯುಂಟೆಂದು ಮಾತ್ರ ಅವನು ನಂಬಿಲ್ಲ. ಅವರ ಅಭಿಪ್ರಾಯವನ್ನು ಹೇಗೆ ಬೇಕೋ ಹಾಗೆ, ತನ್ನ ಅನುಕೂಲಕ್ಕೆ ತಕ್ಕಂತೆ ರೂಪಿಸುವ, ಮಾರ್ಪಡಿಸುವ, ಧ್ವಂಸಗೊಳಿಸುವ ಸಾಧ್ಯತೆಯುಂಟೆಂದೂ, ಅಂತಹ ಸಾಮರ್ಥ್ಯ ಅಥವಾ ಕೌಶಲ ತನಗುಂಟೆಂದೂ ಗ್ರಹಿಸಿಕೊಂಡೇ ಅವನು ಹೊರಟಿದ್ದಾನೆ. ಯೋಗ್ಯರ ಆಳ್ವಿಕೆಯನ್ನು ಪಡೆಯುವುದು ನಾಗರಿಕ ಹಕ್ಕು. ಆದ್ದರಿಂದ ಯೋಗ್ಯರಾರು? ಹಾಗು ಅವರ ಯೋಗ್ಯತೆಯೇನು? ಎಂಬುದನ್ನು ಬಣ್ಣಿಸಿ ಹೇಳಬೇಕಾಗುತ್ತದೆ. ಇನ್ನು ಅಯೋಗ್ಯರಾದವರಿಗೆ ಅಧಿಕಾರ ಬರಬಾರದೆಂಬ ಸದುದ್ದೇಶದಿಂದ ಅವರ ಲೋಪದೋಷಗಳನ್ನೂ, ದುರ್ಗುಣ ದುರ್ಮಾರ್ಗಗಳನ್ನೂ ನಿರ್ದಾಕ್ಷಿಣ್ಯವಾಗಿ ಖಂಡಿಸತಕ್ಕದ್ದು ನ್ಯಾಯವೆ ಇದು ಪರನಿಂದೆಯಲ್ಲ, ರಾಷ್ಟ್ರೀಯ ಕರ್ತವ್ಯ. ಈ ಅರ್ಥ ಬರುವ ತರ್ಕ ರಾಜಕಾರಣಿಯದು. ಇಲ್ಲಿ ಯೋಗ್ಯರೆಂದರೆ ತಾನು ಹಾಗು ತನ ಪಕ್ಷದವರು ಎಂಬುದು ಸ್ಪಷ್ಟವಾಗಿದೆ.

ನಿಂದಕನಾಗುವುದಕ್ಕೆ ರಾಜಕಾರಣಿಯೆ ಆಗಬೇಕೆಂದೇನು ಇಲ್ಲ. ಇನ್ನೊಬ್ಬರ ದೋಷವನ್ನು ಎತ್ತಿ ಆಡುವುದು ಮನುಷ್ಯನಿಗೆ ಹುಟ್ಟುಗುಣವಾಗಿ ಬಂದ ವೈಶಿಷ್ಟ್ಯ. ತನ್ನ ಬೆನ್ನು ತನಗೆ ಕಾಣದು. ಇತರರ ದೋಷ ಎದ್ದು ಕಾಣುವುದರಿಂದ ಅದನ್ನು ಟೀಕಿಸುವುದು ಸ್ವಾಭಾವಿಕವೆನಿಸುತ್ತದೆ. ತಪ್ಪನ್ನು ತಪ್ಪೆಂದು ಹೇಳಿದರೆ ಪಾಪವಲ್ಲ. ಚೆನ್ನಾಗಿ ನಿರೀಕ್ಷಣೆ ಮಾಡದ ಅಥವಾ ಮಾಡಲಾರದ ಬಡಪಾಯಿಗಳು ಯಾರಾದರೂ ನೀಚನಿಗೆ ಬಲಿಬೀಳಬಾರದೆಂಬ ದೂರ ದೃಷ್ಟಿಯಿಂದ ಅದನ್ನು ಬಹಿರಂಗವಾಗಿ ತೆಗಳಬೇಕು. ಸಾಧ್ಯವಾದರೆ ನೀಚನೂ ತನ್ನ ತಪ್ಪನ್ನು ಅರಿತುಕೊಂಡು ತಿದ್ದಿಕೊಳ್ಳಲೆಂಬ ಉದ್ಧಾರ ಮನೋವೃತ್ತಿಯೂ ಇಲ್ಲಿ ಇರಬಹುದು. ಆದರೆ ಇವೆರಡಕ್ಕಿಂತ ಹೆಚ್ಚಾಗಿ, ತಾನು ನೀಚನಲ್ಲ (ಕನಿಷ್ಟಪಕ್ಷ ಆತನಷ್ಟು ನೀಚನಲ್ಲ) ಎಂಬುದನ್ನು ಸೂಚಿಸುವ ಅಭಿಲಾಷೆ ಈ ಟೀಕೆಯ ಮೂಲ ಕೇಂದ್ರವಾಗಿರುತ್ತದೆ. ಇದು ನಿಂದಕನ ಮನೋಭೂಮಿಕೆ. ತನ್ನನ್ನು ತಾನೆ ಹೊಗಳಿಕೊಳ್ಳುವುದೇಕೆ? ಎಂಬ ಪ್ರಶ್ನೆಯನ್ನು ಅವನಿನ್ನೂ ಹಾಕಿಕೊಂಡಿಲ್ಲ. ಆದರೆ ಅಪ್ರಕಟಿತವಾದ ತರ್ಕಸರಣಿಯೊಂದು ಅವನಲ್ಲಿದ್ದೇ ಇದೆ. ಮನುಷ್ಯ ತನ್ನ ಅಂತರಂಗವನ್ನು ಅಂಗಿಯಂತೆ ಮೈಮೇಲೆ ತೊಟ್ಟುಕೊಂಡು ತೋರಲಾರ. ತನ್ನ ಬಹಿರಂಗವನ್ನು ಭೇದಿಸಿ ಒಳಗನ್ನು ಕಂಡುಕೊಳ್ಳುವ ತೀಕ್ಷ್ಣ ದೃಷ್ಟಿ ಇತರರಿಗೆ ಇಲ್ಲ. (ಇದಕ್ಕಾಗಿ ದೇವರನ್ನು ಎಷ್ಟು ಕೊಂಡಾಡಿದರೂ ಸಾಲದು) ಎಂದೇ ಅವನು ದೃಢವಾಗಿ ನಂಬಿದ್ದಾನೆ. ಅಲ್ಲದೆ ತನ್ನ ಅಂತರಂಗವನ್ನು ತನಗಿಂತ ಚೆನ್ನಾಗಿ ಬಲ್ಲವನು ಇನ್ನಾವನೂ ಇಲ್ಲವಾದ್ದರಿಂದ ತಾನು ಎಂತಹ ಯೋಗ್ಯವ್ಯಕ್ತಿಯೆಂಬುದನ್ನು ತಾನೇ ವಿವರಿಸುವುದು ಅವನಿಗೆ ಅಪರಿಹಾರ್ಯವಾದ ಕರ್ತವ್ಯವಾಗುತ್ತದೆ. ಅವನು ಹಾಗೆ ಮಾಡದಿದ್ದರೆ ಅಮೂಲ್ಯವಾದ ಈ ಜೀವರತ್ನದ ಅರಿವಿಲ್ಲದ ಪಾಮರ ಜನತೆ ಹೊರಮಿಂಚಿಗೆ ಮರುಳಾಗಿ ಯಾವ ಯಾವುದೋ ನಕಲಿ ರತ್ನಕ್ಕೆ ಮಾರುಹೋಗಿ ರಾಜ್ಯಕ್ಕೆ, ರಾಷ್ಟ್ರಕ್ಕೆ—ಅದೇಕೆ, ಲೋಕಕ್ಕೆ ಕೂಡ ಅನ್ಯಾಯವಾಗುವ ಭಯವುಂಟು.

ಮನುಷ್ಯನ ಮೂಲಪ್ರವೃತ್ತಿಯಾದ ಈ ಆತ್ಮಶ್ಲಾಘನೆ ಪರನಿಂದೆಗಳಿಗೆ ಸ್ವಾರ್ಥವೆ ಮೂಲವೆಂದು ಯಾವಾಗಲೂ ಹೇಳಲಾಗುವುದಿಲ್ಲ. ಎಷ್ಟೋ ಸಲ ಅವು ನಿಷ್ಕಾಮ ಕರ್ಮಗಳಾಗಿ ನಡೆದು ಅನಿಷ್ಟ ಫಲ ತರವುದೂ ಉಂಟು. ನಿಂದಕರು ಇಂದು ನಿನ್ನೆಯವರಲ್ಲ. “ನಿಂದಕರಿರಬೇಕು” ಎಂದು ಪುರಂದರದಾಸರು ಹಾಡಿಕೊಂಡರು. ನಿಂದಕರೆಂಬುವರು ಎಂದೆಂದಿಗೂ ಇರತಕ್ಕವರೆ. ನಾಲ್ಕುಜನ ಸೇರಿದರೆ ಐದನೆಯವನ ಓರೆಕೋರೆಗಳು ಚರ್ಚೆಗೆ ಬರದೇ ಇರುವುದಿಲ್ಲ. ಒಂದು ಸಂಗಡ ಇನ್ನೊಂದನ್ನು ಆಡಿಕೊಳ್ಳದಿದ್ದರೆ ಅದು ಜೀವಂತವಾಗಿದೆ ಎಂಬ ಸಂಶಯ ಹುಟ್ಟಬಹುದು. ಈ ಪ್ರವೃತ್ತಿ ಪ್ರತಿ ನಿತ್ಯದ ಚಿಕ್ಕಪುಟ್ಟ ವಲಯಗಳಲ್ಲಿ ಸುಳಿದಾಡಿ ಅಷ್ಟಿಷ್ಟು ತೃಪ್ತಿಯಿಂದ ಹೇಗೊ ಜೀವ ಹಿಡಿದುಕೊಂಡಿರುತ್ತದೆ. ಅದಕ್ಕೆ ಹೊಟ್ಟೆತುಂಬ ಆಹಾರ ದೊರೆಯುವುದು ಚುನಾವಣೆಯ ಸಮಯದಲ್ಲಿ ಮಾತ್ರ. ಅದರ ಉದರ ಎಂತಹ ರಾಕ್ಷಸ ಪ್ರಮಾಣದ್ದೆಂದು, ಅದರ ಲಾಲಸೆ ಎಷ್ಟು ಪ್ರಚಂಡವೆಂದು ಆ ಪರ್ವಕಾಲ ಪ್ರದರ್ಶಿಸುತ್ತದೆ. ದಿನವಹಿ ನಡೆಯುವ ಸ್ತುತಿನಿಂದೆಗಳು ಈ ಮಾನದಿಂದ ತೀರ ನಿಕೃಷ್ಟವಾದ ನಿರಪೇಕ್ಷ ಚೇಷ್ಟೆಗಳು.

ಮತದಾನದ ಆಯ್ಕೆ ಹೊಂದಿ ಅಧಿಕಾರಕ್ಕೆ ಏರುವ ಅವಕಾಶವೊದಗಿದಾಗ ಈ ವರೆಗೆ ವೈಯಕ್ತಿಕವಾಗಿದ್ದ ಈ ಚೇಷ್ಟೆಗಳು ಒಮ್ಮಿಂದೊಮ್ಮೆಲೆ ತ್ರಿವಿಕ್ರಮನಂತೆ ಬೆಳೆದು ನಿಂತು ತಮ್ಮ ಬಲಿಯನ್ನು ಕಾಲ ಕೆಳಗೆ ಹತ್ತಿಕ್ಕಿ ಮೆಟ್ಟಲು ಹೊರಡುತ್ತವೆ. ಹುರಿಯಾಳುಗಳ ಪೈಪೋಟಿಯನ್ನಾಗಲಿ ಅವರ ಪ್ರಚಾರವನ್ನಾಗಲಿ ಯಾರೂ ಪ್ರಶ್ನಿಸುವಂತಿಲ್ಲ. ಎಲ್ಲರಿಗೂ ಸಮಾನ ಅಧಿಕಾರ. ಆದರೆ ಅನೇಕ ವಾಮನ ಮೂರ್ತಿಗಳಿಗೆ ತ್ರಿವಿಕ್ರಮನಾಗುವ ಸತ್ವವಿರುವುದಿಲ್ಲ. ತಮ್ಮ ವಿಷಯವಾಗಿ ಹೇಳಿಕೊಳ್ಳುವಂತಹುದು ಹೆಚ್ಚೇನೂ ಇಲ್ಲದಿರುವಾಗ (ಅಥವಾ ಅದನ್ನು ಹೇಳದಿರುವುದೇ ಕ್ಷೇಮವೆಂದು ಕಂಡುಕೊಂಡಿರುವಾಗ) ಅವರಿಗೆ ಉಳಿಯುವ ಏಕೈಕ ಸಾಧನ, ಸಾಧ್ಯ, ಸಿದ್ಧಿ—ಎಲ್ಲವೂ ಪರನಿಂದೆಯಾಗುತ್ತದೆ. ಇತರರ ಮುಖಕ್ಕೆ ಮಸಿಬಳಿದು, ಅವರು ವಿಕಾರವಾಗಿ ಕಂಡಷ್ಟೂ, ಜನತೆ ಅವರನ್ನು ತಳ್ಳಿಬಿಡುವ ಸಂಭಾವ್ಯತೆ ಹೆಚ್ಚು. ತಾವು ಆಯ್ಕೆಯಾಗದಿದ್ದರೂ ಸರಿ; ಅವರಿಗೆ ಅಡ್ಡಗಾಲು ಹಾಕಿ ಅವರನ್ನು ಕೆಡಹುವುದಕ್ಕೆ ಪ್ರಯತ್ನಿಸುವುದು ಇವರಿಗೆ ಅಗತ್ಯವೆನಿಸುತ್ತದೆ. ಸವತಿ ರಂಡೆಯಾದರೆ ಸಾಕು ಎಂಬ ಇನ್ನೊಂದು ಮುಖ—ಹತವೀರ್ಯ ರೋಷದ ಕಪ್ಪು ಮುಖ ತನ್ನ ಮುಸುಕನ್ನು ಕಳಚಿ ಈಗ ಪ್ರತ್ಯಕ್ಷವಾಗುತ್ತದೆ.

ತಾನಾಗಲಿ ತನ್ನ ಪಕ್ಷವಾಗಲಿ ಸೋಲಬಹುದೆಂಬ ಗ್ರಹಿಕೆ ಯಾವ ಸ್ಪರ್ಧಾಳುವಿಗೂ ಇರಲಾರದು. ಗೆಲ್ಲುವ ಭರವಸೆಯಿಂದಲೆ ಅವನು ಕಣಕ್ಕೆ ಇಳಿದಿರುತ್ತಾನೆ. ಆದರೆ ಬಹುಮತದ ಪಕ್ಷಕ್ಕೇ ಪಟ್ಟಕಟ್ಟುವ ನಮ್ಮ ಸಂವಿಧಾನ ಅವನ ಹೊಟ್ಟೆಯುರಿಯನ್ನು ಕೆರಳಿಸಿದೆ. ತನ್ನ ಪಕ್ಷ ಸೋತು, ತಾವು ಅಲ್ಪ ಸಂಖ್ಯಾತರಾದರೆ, ಮದುಮಗನನ್ನೆ ಬಿಟ್ಟು ಮದುವೆಗೆ ಹೋದಂತೆ ಆದೀತು. ಇನ್ನೊಂದು ದುರ್ದೈವದ ಸ್ಥಿತಿ ಭಾರತದಲ್ಲಿ ಬಹುದಿನಗಳಿಂದ ಉಳಿದು ಬಂದಿದೆ. ಪಕ್ಷ ಪ್ರಭುತ್ವದ ಆಡಳಿತವನ್ನು ಒಪ್ಪಿಕೊಂಡ ಇತರ ದೇಶಗಳಲ್ಲಿ ಪ್ರಮುಖವಾದ ಪಕ್ಷಗಳು ಎರಡೇ ಎರಡಾಗಿದ್ದು, ಅಲ್ಲಿಯ ಪಕ್ಷಗಳಿಗೆ ಇದು ನಿರ್ಣಾಯಕವಾದ ಸ್ಪರ್ಧೆಯಾಗುತ್ತದೆ. ನಮ್ಮ ದೇಶದಲ್ಲಿ ಅನೇಕ ಪಕ್ಷಗಳು ಹುಟ್ಟಿಕೊಂಡಿದ್ದರೂ, ರಾಷ್ಟ್ರವ್ಯಾಪಿಯಾದ ಬಲಿಷ್ಠ, ಬಹುಮತ ಪಕ್ಷವಾಗಿ ಯಾವುದೂ ಹೊಸದಾಗಿ ಬೆಳೆಯದೆ ಇರು

ಕೆಪದಿಂದ ಹಳೆಯ ಒಂದೇ ಒಂದು ಪಕ್ಷ ಈ ವರೆಗೆ ಗೆಲ್ಲುತ್ತ ಬಂದಿದೆ. ತಮ್ಮ ಪಕ್ಷಕ್ಕೆ ಬಹುಮತ ದೊರೆಯಲಾರದೆಂದು ಖಚಿತಪಡಿಸಿಕೊಂಡವರಿಗೆ ಯಾವ ಗುರಿ? ವಿರೋಧ ಪಕ್ಷವೆಂಬ ದ್ವಿತೀಯ ದರ್ಜೆಯ ಹೆಮ್ಮೆಯೂ ತಮಗೆ ದಕ್ಕದೆ ಹೋದರೆ ಈ ಚುನಾವಣೆಯಿಂದ ಏನು ಸುಖ ಸುರಿದುಕೊಂಡಂತಾಯಿತು? ಇದರಿಂದಾಗಿ ಪಕ್ಷಾಂತರ ಪ್ರವೃತ್ತಿಗೆ ಪುಟ ದೊರೆತಿದೆ. ಪಕ್ಷದ ನಿಷ್ಠೆ ಉಳಿಸಿಕೊಂಡವರಿಗೆ ಉಳಿದಿರುವ ಒಂದೇ ಒಂದು ಉಪಾಯ ಈ ವರೆಗೆ ಬಹು ಸಂಖ್ಯಾತವೆನಿಸಿದ ಪಕ್ಷ ಆರಿಸಿ ಬರದಂತೆ ನೋಡಿಕೊಳ್ಳುವುದು. ಅದರ ಶತ್ರುಪಕ್ಷಗಳೊಡನೆ, ಅವು ತಮ್ಮ ಬದ್ಧವೈರಿಗಳಿದ್ದರೂ ಪರವಾಗಿಲ್ಲ-ಚುನಾವಣಾ ಮೈತ್ರಿಯನ್ನು ಸಾಧಿಸುವುದು. ಈ ಕೂಟವೆ ಬಹುಮತವನ್ನು ಗಳಿಸಿ ಆಯ್ಕೆಯಾದಲ್ಲಿ ಬಹುಶಃ ತಮಗೂ ಒಂದು ಸ್ಥಾನ ದೊರೆಯುವ ಸಂಭವವುಂಟು.

ಚುನಾವಣೆಯ ವಿಶ್ಲೇಷಣೆ ನಮಗೆ ಬೇಕಾಗಿಲ್ಲ. ಆದರೆ ಆರೋಪ ಪ್ರತ್ಯಾರೋಪಗಳ ಮಸೆದಾಟಕ್ಕೆ ಈ ಹಿನ್ನಲೆ ಹೇಗೆ ಕಾರಣವಾಗಿದೆಯೆಂಬುದನ್ನು ಸೂಚಿಸುವುದು ಅವಶ್ಯವಾಗಿದೆ. ದೇಶಕ್ಕೆಲ್ಲ ತಾನೊಂದೇ ಪಕ್ಷವೆಂದು ಆಳುತ್ತ ಬಂದ ರಾಜಕೀಯ ಪಕ್ಷ ಬಿರುಕು ಬಿಟ್ಟು ಎರಡು ಹೋಳಾದ ಘಟನೆ ಈಗಾಗಲೆ ಹಳೆಯ ಮಾತಾಗಿದೆ. ಇದರ ಪ್ರತಿಯೊಂದು ಹೋಳು ತಾನು ಇಡಿಯಾಗಿಯೇ ಇದ್ದೇನೆಂದೂ, ತಾನೇ ಮೂಲ ಪಕ್ಷವೆಂದೂ ಘೋಷಿಸುತ್ತಲಿದೆ. "ಬಿಸಿರಕ್ತ ಬಿಸಿರಕ್ತ" (ಯಾರದು?) ಎಂದು ಕೂಗಾಡುವ ಹೋಳು ಆಡಳಿತ ನಡೆಸಿ ಈಗ ಪುನಃ ಆಯ್ಕೆಗೆ ನಿಂತಿದೆ. 'ಮುದುಕರ ಪಕ್ಷ' ವೆನಿಸಿಕೊಂಡ ಇನ್ನೊಂದು ತರುಣರಿಗಿಂತಲೂ ಒಂದು ಕೈ ಮೇಲೆಂಬಂತೆ ತುರುಸಿನಿಂದ ಕಣಕ್ಕೆ ಇಳಿದಿದೆ. ಸ್ವಯಂಶೂರರಾಗಿ ಗೆದ್ದು ಬರುವ ಭರವಸೆ ಇಬ್ಬರಿಗೂ ಇಲ್ಲವಾಗಿ ಬೇರೆಬೇರೆ ಪಕ್ಷಗಳ ಮೈತ್ರಿಗಾಗಿ ಇತ್ತಂಡದವರೂ ಎತ್ತುಗಡೆ ನಡೆಸಿದಾರೆ. ಪರಸ್ಪರ ನಿಂದಾರೋಪಣೆಗೆ ಇದಕ್ಕಿಂತ ಉತ್ತಮವಾದ ಅವಕಾಶವನ್ನೂ ಸಾಮಗ್ರಿಯನ್ನೂ ಇನ್ನಾವುದು ಒದಗಿಸಬಲ್ಲುದು? ಒಂದನ್ನೊಂದು ಕಂಡರಾಗದ ರಾಜಕೀಯ ಬಣಗಳು ಒಂದುಗೂಡಿ ಮೈತ್ರಿಕೂಟವನ್ನು ಮಾಡಿಕೊಂಡಾಗ ಈ ಎಲ್ಲ ಬಣಗಳ ವಿವಿಧ ದೋಷಗಳೂ ಸಮಷ್ಟಿಯಾಗಿ ಶತ್ರುಪಕ್ಷದ ಟೀಕೆಗೆ ವಿಷಯವಾಗುತ್ತವೆ. ಎಲ್ಲಕ್ಕೂ ಹೆಚ್ಚಾಗಿ-ದ್ವೇಷವೊಂದೇ ಸಮಾನ ಸೂತ್ರವಾಗಿ ಹೆಣೆದುಕೊಂಡ ಈ ಪಕ್ಷಗಳಿಗೆ ನಿಶ್ಚಿತವಾದ, ಸರ್ವಸಮ್ಮತವಾದ ಧ್ಯೇಯ ಧೋರಣೆಗಳಿರುವುದು ಸಾಧ್ಯವೇ ಇಲ್ಲ ಎಂಬುದು ನಿರ್ವಿವಾದ. ವಿಜಯ ಪ್ರಾಪ್ತಿಯಾದ ಮೇಲೆ ಅಧಿಕಾರವನ್ನು ವಹಿಸುವಲ್ಲಿ ಅದರ ನಿರ್ವಾಹದಲ್ಲಿ ಈ ಮೈತ್ರಿ ಉಳಿದೀತೆ ಎಂಬ ಪ್ರಶ್ನೆ ಉತ್ತರವನ್ನು ಗ್ರಹಿಸಿ ಕೊಂಡೇ ಕೇಳಲ್ಪಡುತ್ತಿದೆ.

ಮನುಷ್ಯನ ಮೂಲಭೂತ ಪ್ರವೃತ್ತಿಯೆಂದಾಗಲಿ, ಸ್ವಾರ್ಥಸಾಧನೆಯ ಒಂದು ಉಪಾಯವೆಂದಾಗಲಿ ಈ ಆರೋಪ ಪ್ರತ್ಯಾರೋಪಗಳು ಈಗ ನಡೆಯುತ್ತಿಲ್ಲ. ಪ್ರಜಾಪ್ರಭುತ್ವದ ಸಂವಿಧಾನ ದಯಪಾಲಿಸಿದ ಅಭಿಪ್ರಾಯ ಸ್ವಾತಂತ್ರ್ಯ, ವಾಕ್‌ಸ್ವಾತಂತ್ರ್ಯಗಳಿಗೆ ಇದು ಪರ್ವಕಾಲ. ಆಡಳಿತ ಯಾರ ಕೈಯಲ್ಲಿ ಹೋದರೆ ಏನಾಗುತ್ತದೆ? ಎಂಬುದನ್ನು ಜನತೆಗೆ ತಿಳಿಸುವುದು ಪ್ರತಿಯೊಬ್ಬನಾಗರಿಕನ ಕರ್ತವ್ಯವಾಗಿದೆ. ಆ ದೃಷ್ಟಿಯಿಂದ ಈ ಟೀಕೆಗಳಿಗೆ ಸದಾ ಸ್ವಾಗತವಿದ್ದೇ ಇದೆ. ಆದರೆ ಇದು ವಿಪರೀತವಾಗಿ ಮತದಾರನನ್ನು ದಿಗ್ಭ್ರಮೆಗೊಳಿಸಬಾರದು. ಚುನಾವಣೆಗೆ ನಿಂತ ಇವರು ನೀಚರು; ಅವರು ನೀಚರು ಸಜ್ಜನರು! ಯಾರು ಪ್ರಶ್ನೆಗೆ ಎಂಬ ಆಸ್ಪದವಿಲ್ಲ. ಈ ನೀಚರಲ್ಲಿ ಯಾರು ಪರಮ ನೀಚರು ಅಥವಾ ಕಡಮೆ ನೀಚರು ಎಂದು ನಿರ್ಧರಿಸುವುದುಮತದಾರನಿಗೆ ಬಿಟ್ಟ ವಿಷಯ. ಶ್ರೀಮತಿ ಸ್ವಯಂವರದಲ್ಲಿ ನಾರದ ಪರ್ವತರಿಗಾದ ದುರ್ಗತಿ ಇವರಿಗೆ ಆಗಲಿಕ್ಕಿಲ್ಲವೆಂದು ಹಾರೈಸೋಣ. ಇವರಿಬ್ಬರ ನಡುವೆ ನೆಬಂದು ನಿಂತು ಮಾಲೆ ಹಾಕಿಸಿಕೊಳ್ಳುವ ಮತ್ತೊಬ್ಬ ಮಾಯಾವಿ ಚುನಾವಣೆಯಲ್ಲಿ ಬರುವುದು ಸಾಧ್ಯವಿಲ್ಲ. ಆದ್ದರಿಂದ ಯಾರ ಪ್ರಚಾರ ಜೋರಾಗುವುದೊ ಅವರಿಗೆ ಭರವಸೆ ಹೆಚ್ಚು. "ಬೇರೆಯವರ ಅಂಗಡಿಗಳಿಗೆ ಹೋಗಿ ಮೋಸ ಹೋಗಬೇಡಿ. ನಮ್ಮ



ಲ್ಲಿಗೇ ಬನ್ನಿ" ಎಂದು ಜಾಹೀರಾತು ಪಡೆದ ವಸ್ತುವಿನ ಪ್ರಾಮಾಣಿಕತೆ ಪ್ರಶ್ನಾತೀತವಾಗಿದೆ.

ಟೀಕೆ ಮಾಡುವಷ್ಟು ಸುಲಭವಾದ ಕಾರ್ಯ ಬಹುಶಃ ಜಗತ್ತಿನಲ್ಲಿ ಬೇರೊಂದಿರಲಾರದು, ಆದರೆ ಅದಕ್ಕೆ ಆಧಾರವಾಗಿ ಸ್ವಲ್ಪವಾದರೂ ಸತ್ಯದ ಆಧಾರವಿದ್ದರೆ ಮಾತ್ರ, ಅದಕ್ಕೆ ಬೆಲೆ ಬರುತ್ತದೆ. ಇಲ್ಲವಾದರೆ; ತಮ್ಮ ಪಾಡಿಗೆ ತಾವು ಕೂಗಿ ಕೊಳ್ಳುತ್ತಿರುವ ಮೃಗಪಕ್ಷಿಗಳ ಧ್ವನಿಯಂತಾಗಿ, ಅವು ಯಾರನ್ನು ಹಿಡಿದು ನಿಲ್ಲಿಸಲಾರವು. ಪ್ರಚಾರ ಕಾರ್ಯಕ್ಕೆ ಆಕರ್ಷಣೆ ಮುಖ್ಯ ಉದ್ದೇಶವಾಗಿರುವುದಲ್ಲದೆ ಪರೀಕ್ಷಣದ ಪ್ರಯೋಜನೆಯಲ್ಲ ಸ್ವಪ್ರಚಾರವೆ ಆಗಲಿ ಪರರ ಅಪಪ್ರಚಾರವೆ ಆಗಲಿ, ಸತ್ಯಕ್ಕಿಂತ ಸುಳ್ಳೇ ಹೆಚ್ಚು ಅನುಕೂಲವೆನಿಸುತ್ತದೆ. ಸತ್ಯಕ್ಕೆ ಯಾರ ಪ್ರಚಾರದ ಅಗತ್ಯವೂ ಇಲ್ಲ. ಇದ್ದಂತೆಯೆ ಉಳಿಯುವ ಹಟಮಾರಿ ಸ್ವಭಾವ ಅದಕ್ಕಿರುವುದರಿಂದ ಅದನ್ನು ಬೆಳೆಯಿಸುವ ಅಥವಾ ಮಾರ್ಪಡಿಸುವ ಸಾಧ್ಯತೆಯಿಲ್ಲ. ಕಂಡದ್ದನ್ನೆ ಕೂಗಿಕೊಂಡರೆ ಯಾವನು ಕಿವಿಕೊಡುತ್ತಾನೆ? ಮೋಹ ಜಾಲವನ್ನು ಬೀಸಬಲ್ಲದ್ದು, ಕುತೂಹಲವನ್ನು ಕೆರಳಿಸುವಂತಹುದು, ತಲೆ ಕೆಡಿಸುವ ಶಕ್ತಿಯುಳ್ಳದ್ದು ಕ್ಷಣಕ್ಕೊಂದು ಸಲ ಹೊಸಹೊಸರೂಪ ತಾಳಿ ವಿಸ್ತಾರ ಹೊಂದುವ ಗುಣವುಳ್ಳದ್ದು-ಸುಳ್ಳಿಗಲ್ಲದೆ ಇನ್ನಾವುದಕೆ ಈ ಹೆಗ್ಗಳಿಕೆ ಸಾಧ್ಯವಾದಿತು? ಆರೋಪಗಳನ್ನು ರಾಶಿಯ ಮೇಲೆ ರಾಶಿ ಹಾಕಿ ಎದುರಾಳಿಯನ್ನು ಅದ್ರ ಕೆಳಗೆ ಹೂಳಿ ಬಿಡಲು ಸುಳ್ಳನ್ನು ಸಮೃದ್ಧವಾಗಿ ಸದೊರದಿತವಾಗಿ ಬಳಸಬಹುದು. ಆರೋಪಗಳಿಗೆ ಗುರಿಯಾದವನು ಈ ಸುಳ್ಳಿನ ಪೊರೆಯನ್ನು ಅಷ್ಟೇ ಸಲೀಲವಾಗಿ ಹರಿದೊಗೆದು ತನ್ನ ಬತ್ತಳಿಕೆಯೊಳಗಿನ ಸುಳ್ಳುಗಳನ್ನೆಲ್ಲ ಇವರ ಮೇಲೆ ಪ್ರಹಾರಮಾಡಿ ಸೇರಿಗೆ ಸವ್ವಾಸೇರು ಮಾಡಬಹುದು. ಪಕ್ಷ-ಪ್ರತಿಪಕ್ಷಗಳು ಪ್ರತಿನಿತ್ಯ ಪರಸ್ಪರರ ಮೇಲೆ ಎಸೆದಾಡುತ್ತಿರುವ ಆಕ್ಷೇಪಣೆಗಳಲ್ಲಿ ಈ ಅಂಶ ಎಷ್ಟು ಪ್ರಧಾನವಾಗಿದೆಯೆಂಬುದನ್ನು ನಾವು ಕಾಣುತ್ತಿದ್ದೇವೆ.

ಕೇವಲ ದೋಷಾರೋಪಣೆಗಳಿಗೆ ಸೀಮಿತರಾಗದೆ ತಾವೇನು ಮಾಡಬಲ್ಲರೆಂಬುದನ್ನು ನಿರೂಪಿಸುವುದು ಇಂದು ಸಂಪ್ರದಾಯವಾಗಿದೆ. ಪ್ರತಿಯೊಂದು ಪಕ್ಷ ಇಂತಹದೊಂದು ಘೋಷಣ ಪತ್ರಿಕೆಯನ್ನು ಹೊರಡಿಸುವುದೂ ಉಂಟು. ಆದರೆ ಇದಿಷ್ಟೆ ಸಾಲದೆನಿಸುತ್ತದೆ; ಅಥವಾ ಇದು ಸುರಕ್ಷಿತವಲ್ಲವೆಂದೂ ಹೇಳಬಹುಹುದು. ಇತರರು ಯಾವ ತಪ್ಪನ್ನು ಮಾಡಿದ್ದಾರೆ ಎಂದು ಹೇಗೆ ಹೇಳುವರೊ ಹಾಗೆ ತಾವು ಇಂತಿಂತಹ ತಪ್ಪುಗಳನ್ನು ಎಂದಿಗೂ ಮಾಡಲಿಕ್ಕಿಲ್ಲವೆಂದು ಹೇಳಿಕೊಳ್ಳುವುದು ಬಹಳ ಸುಲಭ ಹಾಗು ಸುರಕ್ಷಿತ ಉಪಕ್ರಮವೆಂದು ಸೂಚಿಸಬಯಸುತ್ತೇನೆ. ಚುನಾವಣೆಗೆ ಮುಂಚೆ ನೀಡಿದ ಭರವಸೆಗಳನ್ನು ನೀನು ಏಕೆ ಪೂರೈಸಲಿಲ್ಲವೆಂದು ಕೈಹಿಡಿದು ಕೇಳುವವರು ಯಾರಿದ್ದಾರೆ? ಹಾಗೆ ಕೇಳಿದರೆ ಪರಿಸ್ಥಿತಿ ಕಾರಣವಾಯಿತೆಂದು ಒಂದು ವಿವರಣೆ ನೀಡುವ ಅನುಕೂಲತೆ ಯಾವಾಗಲೂ ಇದ್ದೇ ಇರುತ್ತದೆ. ಈಗಾಗಲೆ ಮಾಡಿದುದನ್ನು ಸಮರ್ಥಿಸಿ ಕೊಳ್ಳುವುದು ಬಹಳ ಕಷ್ಟ. ಅದರ ಬದಲಾಗಿ, ಇನ್ನುಮೇಲೆ ಏನನ್ನು ತಪ್ಪಿಸಿ ತೋರಬಲ್ಲೆವೆಂಬ ಬಣ್ಣಬಣ್ಣದ ಕನಸನ್ನೂ ಚಿತ್ರಿಸುವುದು ಸುಖದ ಕೆಲಸ. ಪ್ರತಿಯೊಂದು ಪಕ್ಷವಘೋಷಣ ಪತ್ರ ಇನ್ನಷ್ಟು ಮಹಾತ್ವಾಕಾಂಕ್ಷಿಯಾಗಬೇಕೆಂದು ನಾನು ಬಯಸುತ್ತೇನೆ. ನಿಮ್ಮ ಪ್ರಾಮಾಣಿಕತೆಯನ್ನು ಯಾರೂ ಅಲ್ಲಗಳೆಯಲಾರರು. ಯಾರು ಬಲ್ಲರು? ಪ್ರಜಾ ಪ್ರಭುತ್ವದಲ್ಲಿ ತರಬೇತಾಗುತ್ತಿರುವ ಇಂದಿನ ನಾಗರಿಕರು ಪಟ್ಟುಹಿಡಿದು, ಆ ಭರವಸೆಗಳಲ್ಲಿ ಕೆಲವನ್ನು ನಿಮ್ಮಿಂದ ಈಡೇರಿಸಿಕೊಳ್ಳುವ ಸಂಭವವೂ ಇಲ್ಲದಿಲ್ಲ. ಹಾಗಾದ ಪಕ್ಷದಲ್ಲಿ ಮುಂದಿನ ಚುನಾವಣೆಗೆ ಹೇಳಿಕೊಳ್ಳಬಹುದಾದ ಒಂದಾದರೂ ಸತ್ಯವಾದ ಸಾಕ್ಷಿ, ಹೆಮ್ಮೆಯ ಸಾಧನೆ ನಿಮಗೆ ದೊರೆತಂತಾದೀತು.

ಇದನ್ನು ತೊರೆದು ಒಬ್ಬರ ಮುಖಕ್ಕೊಬ್ಬರು ಕೆಸರು ಎರಚಾಡಿ, ತಾನೊಬ್ಬ ಯೋಗ್ಯ ಉಳಿದವರೆಲ್ಲ ನೀಚರೆಂದು ವಾದಿಸುವುದರಿಂದ ಏನು ಫಲ? ರಾಜಕಾರಣಿಯು ಮತದಾರನು ಪಕ್ಕಾ ಮಂಕು ಎಂದೇ ಇಟ್ಟುಕೊಳ್ಳೋಣ. ನಿಮ್ಮ ಸುಳ್ಳುಗಳನ್ನೆಲ್ಲ ಸಂಪೂರ್ಣವಾಗಿ ಅವನು ನಂಬುವನೆಂದೂ ಗ್ರಹಿಸೋಣ. ಆಯ್ಕೆಗೆ

ನಿಂತವರೆಲ್ಲರೂ ಅಷ್ಟೇ ಅಯೋಗ್ಯರೇ ಎಂದು ನೀವೆಲ್ಲರು ತೋರಿ ಕೊಟ್ಟಾಗ ಅವನು ಯಾರನ್ನು ಚುನಾಯಿಸ ಹುದು? ಯಾವನಾದರೇನು! ಹಾಳಾಗಲಿ! ಎಂದು ಕೊಂಡು ನಿರ್ಲಿಪ್ತನಾಗಿ, ಯಾರಿಗೊ ಕತ್ತರಿ ಹಾಕ ಬಹುದು. ಅಥವಾ ತನಗರಿಯದ ಹೊಸನೀಚನಿಗಿಂತ ಈಗಾಗಲೆ ತಿಳಿದಿರುವ ಹಳೆಯ ನೀಚರೆ ಇರಲೆಂದು ನಿರ್ಧರಿಸಬಹುದು. ಏನಾದರೂ ಅವನ ವಿವೇಚನೆಗೆ ಆಸ್ಪದವಿಲ್ಲ. ಉತ್ತಮರು ಯಾರು? ಎಂಬ ಆಯ್ಕೆ ಯನ್ನು ಅವನಿಗೆ ಕೊಡುವುದು ಲೇಸು, ಎಂದರೆ ಅವನಿಗೆ ವಿವೇಕವಿದೆಯೆಂದು ಒಪ್ಪಿಕೊಳ್ಳಬೇಕಾಗುತ್ತದೆ ಆದೇ ಕಷ್ಟಬಂದಿರುವುದು, ಮತದಾರನು ವಿವೇಕಶಾಲಿ ಯಾಗಿಲ್ಲ,—ಆಗಕೂಡದು ಎಂಬುದೇ ರಾಜಕಾರಣಿಯ ಹಠ. ಮತ ಚಲಾಯಿಸುವವರು ವಿವೇಕಶಾಲಿಗಳಾದ ತನ್ನ ಸ್ಥಾನಕ್ಕೆ ಭದ್ರತೆಯಿಲ್ಲವೆಂದು ರಾಜಕಾರಣ ತಿಳಿದುಕೊಂಡಿದ್ದಾನೆ. ಆದ್ದರಿಂದಲೇ ಅವನು ಯಾವಾ ಗಲೂ ತನ್ನನ್ನು ಬಣ್ಣಿಸಿಕೊಂಡು, ಇದಿರನು ಹಳಿದು ಮತದಾರನ "ಮಿದುಳನ್ನು ತೊಳೆಯುವ" ಕೆಲಸಕ್ಕೆ ತೊಡಗುತ್ತಾನೆ. ಇದು ಭ್ರಾಂತಿಯೆಂದು ಮತದಾರರು ಸಿದ್ಧಪಡಿಸುವವರೆಗೆ ಇದು ಹೀಗೆಯೆ ನಡೆಯು ವುದು.



ಜನರಿಗೆ ಎಷ್ಟು ದುಃಖವಿದ್ದರೂ ಆಪ್ತ ಬಂಧುಗಳನ್ನು ಕಂಡರೆ ಆ ದುಃಖವನ್ನು ಮರೆತು ಸಂತೋಷಿಸುವರು.

ಹೇಗೆಂದರೆ, ತಾಯಿ ಪ್ರಸವಕಾಲದಲ್ಲಿ ಎಷ್ಟು ವೇದನೆಯನ್ನು ಹೊಂದಿದ್ದರೂ ತನ್ನ ತೊಡೆಯ ಮೇಲೆ ಗಂಡುಮಗುವನ್ನು ನೋಡಿ ಆ ನೋವನ್ನೆಲ್ಲಾ ಮರೆತು ಆನಂದಿಸುತ್ತಾಳೆ.

★ ★ ★ ★

ನೀಚರು ಹಣಗಾರರಾಗಿ ಸಮೀಪದಲ್ಲಿ ಇದ್ದರೂ ಮಾನಿಗಳು ಅವರಲ್ಲಿ ಹೋಗಿ ತಮ್ಮ ತೊಂದರೆ ಗಳನ್ನು ಹೇಳಿಕೊಳ್ಳುವುದಿಲ್ಲ.

ಹೇಗೆಂದರೆ, ಸಮುದ್ರದಲ್ಲಿ ಬೇಕಾದಷ್ಟು ನೀರಿದ್ದರೂ ಅದನ್ನು ಬಿಟ್ಟು ಜನರು ದೂರದಲ್ಲಿರುವ ಬಾವಿಯಲ್ಲಿ ನೀರನ್ನು ತೆಗೆದುಕೊಳ್ಳುತ್ತಾರೆ.



# ಜಾಣ – ಜಾಣರ ದೇವ

—ಹೆಚ್. ದೇವೀರಪ್ಪ. ಎಂ. ಎ., ಬೆಂಗಳೂರು.

ಯಾವುದೇ ಒಂದು ಭಾಷೆಯ ಅಡು ನುಡಿಗಳ ಹಿನ್ನೆಲೆಯಲ್ಲಿ ಬಹುಮಹತ್ವಪೂರ್ಣ ಇತಿಹಾಸ ಅಡಗಿರುತ್ತದೆ. ಚಿಕೀರ್ಷಕ ಬುದ್ಧಿಯ ಭಾಷಾತಜ್ಞರು ಅವುಗಳ ಬಗೆಗೆ ಅನೇಕ ಕಾಲ ಚಿಂತನೆ ಮಾಡಿ ಅಂಥ ಶಬ್ದಗಳ ಸುಕ್ಷೇತ್ರಂದು ಚರಿತ್ರೆಯ ಪರಿಧಿಯನ್ನೇ ಕಲ್ಪಿಸಿ ವಿವರಿಸಿದಾಗ ಭಾಷೆಯ ಆಳವಾದ ಕಲ್ಪನೆ ಮೂಡಿ ಬಂದು ಅಹ್ಲಾದವುಂಟಾಗುವುದು ಎಲ್ಲರ ಅನುಭವಕ್ಕೂ ಬಂದ ವಿಷಯವೇ ಆಗಿದೆ. ಕನ್ನಡದಲ್ಲಿ ಅಂಥ ಅನೇಕ ಶಬ್ದಗಳಿಗೆ ಆಳವಾದ ಅರ್ಥವಿದೆ. ಶಬ್ದಕ್ಕಿರುವ ಅರ್ಥವನ್ನು ಅನೇಕ ಸಲ ಗಮನಿಸದೆ ವಿವಿಧಾರ್ಥಗಳಲ್ಲೂ ಅದನ್ನು ಬಳಸುವುದುಂಟು. ಪ್ರಕೃತ ಜಾಣ'' ಎಂಬ ಅಚ್ಚಗನ್ನಡ ಶಬ್ದದ ಬಗೆಗೆ ಖ್ಯಾತ ವಿದ್ವಾಂಸರೂ ನಿವೃತ್ತ ಪ್ರಾಚ್ಯ ಸಂಶೋಧನಾ ಶಾಖಾಧ್ಯಕ್ಷ ರವರೂ ಆದ ಶ್ರೀಮಾನ್ ಹೆಚ್. ದೇವೀರಪ್ಪ ಎಂ.ಎ. ಅವರು ನೃಪತುಂಗ ಮೊದಲ್ಗೊಂಡು ಇಂದಿನವರೆಗೆ ಅನೇಕ ಕವಿಗಳು, ವಚನಕಾರರು, ದಾಸರು, ಜಾನಪದ ಕವಿಗಳು ತಮ್ಮ ಮಾತುಗಳಲ್ಲಿ ಪ್ರಯೋಗಿಸಿರುವ ಸಂದರ್ಭ ಮತ್ತು ಅರ್ಥಗಳ ವಿವರಣೆಯನ್ನು ಮಾಡುತ್ತ ಗಾದೆಗಳಲ್ಲಿ ಬಳಸಿರುವ ಅದರ ನಿಜವಾದ ಅರ್ಥವೇನು? ಎಂಬ ಬಗೆಗೆ ಮನೋಜ್ಞವಾಗಿ ಚರ್ಚಿಸಿದ್ದಾರೆ. ತರುಣ ಚಿಕೀರ್ಷಕರಿಗೆ ಇಂಥ ಮಾರ್ಗ ಅನುಕರಣೀಯ. ನಮ್ಮ ವಾಚಕರಿಗೆ ಈ ಲೇಖನ ಒದಗಿಸಿರುವ ಶ್ರೀಯುತರಿಗೆ ಧನ್ಯವಾದಗಳು.

—ಸಂ.

ಜಾಣನಿಗೆ ಜಾಣನಿಗೆ ಮೂರು ಹಾದಿ,
ಜಾಣನಿಗೆ ಕೋಣನಿಗೆ ಎರಡು ಹಾದಿ,
ಕೋಣನಿಗೆ ಕೋಣನಿಗೆ ಒಂದೇ ಹಾದಿ.

ಇದು ಎಲ್ಲರಿಗೂ ತಿಳಿದಿರುವಂತೆ ಒಂದುಗಾದೆ. ತೂಕದಲ್ಲಿ ತಿರುಳಿನಲ್ಲಿ ಯಾವ ಕಿರಿಗವನಕ್ಕೂ ಕಡಿಮೆ ಯಲ್ಲದ ಜನಪದವಾಣಿ. ಕನ್ನಡದಲ್ಲಿ ಭಾವಿಸಿದ ಭಾಗ್ಯ ವಂತರ ಸಾರಸ್ವತ ಭಂಡಾರದಲ್ಲಿ ಇಂತಹ ಮುತ್ತು ಗಳು ಸಹಸ್ರ ಸಹಸ್ರ ಇವೆ. ಜಾಣತನವನ್ನು ಕುರಿತು 'ಜಾಣ್' ಎಂಬ ಮಾತಿನ ನೆಲೆಕಲೆಗಳನ್ನು ಕುರಿತು ಈಗ ವಿಚಾರ ಮಾಡಬೇಕಾಗಿರುವುದರಿಂದ ಆ ಸಂಬಂಧದ ಇನ್ನೂ ಕೆಲವು ಗಾದೆಗಳನ್ನು ಇಲ್ಲಿ ಉಲ್ಲೇ ಖಿಸಬಹುದು: 'ಜಾಣನಿಗೆ ಊಹೆಯು ಇರಬಾರದು'; 'ಜಾಣನಿಗೆ ಮಾತಿನ ಪೆಟ್ಟು ದಡ್ಡನಿಗೆ ದೊಣ್ಣೆಯ ಪೆಟ್ಟು', 'ಜಾಣನಿಗೆ ಮೂರು ಕಡೆ, ದಡ್ಡನಿಗೆ ಒಂದೇಕಡೆ 'ಜಾಣೆಯಾದರೆ ವೀಣೆ ಬಾರಿಸಿಯಾಳು' 'ಕೆಟ್ಟ ಅಡಿಗೆ ಅಟ್ಟವಳೇ ಜಾಣೆ' ಹೀಗೆ ಎಷ್ಟೋ ಗಾದೆಗಳು ಜಾಣ್, ಜಾಣ' ಜಾಣೆ ಎಂಬ ಮಾತುಗಳನ್ನೊಳಗೊಂಡು ಹಿರಿ ದಾದ ಅನುಭವ ಅರ್ಥ ಭಾವಗಳ ಪರಿವೇಷವನ್ನು ತಳೆದು ರಂಜಿಸುತ್ತಿರುವುವು.

ವಿರುದ್ಧಾರ್ಥವನ್ನೊ ವ್ಯಂಗ್ಯವನ್ನೊ ಕಟಕಿ ಯನ್ನೊ ಇಟ್ಟು ಎಂತಹ 'ಹಸನ್' ಪದವನ್ನಾದರೂ 'ಬೆರಕೆ' ಮಾಡಲು ಬರುತ್ತದೆ. 'ಜಾಣ್' ಈ ನಿಯ ಮಕ್ಕೆ ಹೊರತಲ್ಲ. ಅದಕ್ಕೆ "ದಡ್ಡನಿಗೆ ಹೆಡ್ಡ ಎಂದರೆ ಮಡ್ಡನಿಗೆ ಜಾಣ ಎಂದಹಾಗೆ"; 'ಹುಚ್ಚುಮುಂಡೆಯ ಮದುವೆಯಲ್ಲಿ ಉಂಡವನೆ ಜಾಣ,' 'ಅ ಹ ಹ ಹ! ಕಡು ಜಾಣೆ' ಇಂಥ ಮಾತುಗಳು ನಿದರ್ಶನ. 'ಕಾಂಚಾಣ ನೀಜಾಣ ನಿಮ್ಮಪ್ಪ ಜಾಣ' ಎಂದ ಹಾಗೆ ನಮ್ಮ ಹುಡುಗ ಪರೀಕ್ಷೇಲಿ ಲಂಚ ಕೊಟ್ಟು ಕಂಚ ಮುಟ್ಟಿದ, ಅದಕ್ಕೂ ಜಾಣತನ ಬೇಕು ಎನ್ನುತ್ತಾನೆ, ಜಾಣಮಗನ ಜಾಣ ತಂದೆ. ಸಣ್ಣಪ್ಪ ಎಣ್ಣೆ ಬಂದಾಗ ಕಣ್ಣು ಮುಚ್ಚಿ ಕೊಂಡ; ಅದೇ ಅಣ್ಣಪ್ಪ ಮೂರು ವರ್ಷ ಮೇಯೋರ್ ಆದ, ಮೂರು ಮನೆ ಮಾಡಿ ಕೊಂಡ –ಎಂದು ಜಾಣತನದ ಸಿದ್ಧಾಂತನನ್ನು ಸಾರುವ ಸಜ್ಜ ನರುಂಟು, 'ಅವನವನ ದರುಶನಕ್ಕೆ ಅವನವನ ಭಾವಕೆ ತಕ್ಕಂತೆ ಅವನವನ ಜಾಣು'

ಕನ್ನಡದ ಕವಿಗಳೂ ದಾರ್ಶನಿಕರೂ ಈ ಮುತ್ತಿ ನಂತಹ ಮಾತನ್ನು ಸಮುಚಿತವಾಗಿ ಬಳಸಿ ಪದವು ಗೊಳಿಸಿ ಅದಕ್ಕೆ ಕಾಂತಿ ಕಮನೀಯತೆಗಳನ್ನೆರೆದಿರು ವರು, ಶಕ್ತಿ ಶೋಭೆ ಸೌಭಾಗ್ಯಗಳಿಂದ ಒಪ್ಪ ಹಾಕಿರು ವರು. ಈಗ ನಮಗೆ ದೊರೆತಿರುವ ಪ್ರಾಚೀನ ಕನ್ನಡ ಗ್ರಂಥಗಳಲ್ಲಿ 'ಕವಿರಾಜಮಾರ್ಗ' ಎಂಬ ಅಲಂಕಾರ ಗ್ರಂಥವೇ ಅತ್ಯಂತ ಹಳೆಯದು. ಅದನ್ನು ಬರೆದ

ವನು ರಾಷ್ಟ್ರಕೂಟ ವಂಶದ ನೃಪತುಂಗ ಚಕ್ರವರ್ತಿ ಎಂದು ಪ್ರತೀತಿ. ಆ ಗ್ರಂಥದಲ್ಲಿ 'ಜಾಣ್' ಬಗೆಗೆ ಮನನೀಯವಾದ ಮಾತುಗಳುಂಟು. ಅವರ ತಾತ್ಪರ್ಯ : ತನ್ನ ಅಂತರಂಗದಲ್ಲಿ ಮೂಡಿದ ಭಾವಗಳನ್ನೂ ಆಲೋಚನೆಗಳನ್ನೂ ಎದುರಿಗಿರುವವನ ಮನದಲ್ಲಿ ಸುಸ್ಪಷ್ಟವಾಗಿ ಮೂಡುವಂತೆ ಹೇಳಬಲ್ಲವನು. 'ಮಾತರಿವನು'; ಸ್ವಲ್ಪ ಮಾತುಗಳಲ್ಲಿಯೆ ಹಿರಿದಾದ ಅರ್ಥವನ್ನಿಟ್ಟು ಮಾತನಾಡಬಲ್ಲವನು ಅವನಿಗಿಂತ 'ನಿಪುಣ' ನು; ಅಂತಹ ಚೆಲುವು ಮಾತಿನ ಮಣಿಮುತ್ತುಗಳನ್ನು ಛಂದೋಸೂತ್ರದಲ್ಲಿ ಪವಣಿಸಬಲ್ಲವನು ಆತನಿಗಿಂತ 'ಜಾಣ'. ಇಂತಹ ಜಾಣನ 'ರಸಿಕನಾಡಿದ ಮಾತು ಸಸಿಯುದಿಸಿ ಬಂದಂತೆ' ಅತ್ಯಂತ ರಮಣೀಯವಾಗಿರುವುದು. ಹೀಗೆ ಅನೇಕ ಪದ್ಯಗಳನ್ನು ಛಂದೋಬದ್ಧವಾಗಿ ವಿರಚಿಸಬಲ್ಲವನು ಜಾಣರ 'ಬಲ್ಲ.' ಜಾಣರ ಜಾಣ, ಕವಿ ವೃಷಭ. ರೀತಿಯಿದ್ದು ನೀತಿಯಿಲ್ಲದಿದ್ದರೆ ಏನು ಸಾರ್ಥಕ? ರೀತಿ ನೀತಿ ಸ್ವಾರಸ್ಯ ಸೌಂದರ್ಯವುಳ್ಳ ಉನ್ನತ ಸತ್ಕಾವ್ಯಗಳನ್ನು ರಚಿಸಬಲ್ಲವರೇ 'ಪರಮಕವಿ ವೃಷಭರ್', ಕವಿಪುಂಗವರು. ಅಂತಹವರ ಕೀರ್ತಿ 'ಕಲ್ಪಾಂತರ ಸ್ಥಾಯಿ' ಯಾಗಿ ನಿಲ್ಲುವುದು. ಈ 'ಜಾಣ್' ಸಿದ್ಧಿಸುವುದು ಪೂರ್ವ ಕಾವ್ಯ ಗಳನ್ನು ಆ ಮೂಲಾಗ್ರವಾಗಿ ವ್ಯಾಸಂಗ ಮಾಡಿ ಅವುಗಳ ತಿರುಳನ್ನು ಅರಿತು ಅರಗಿಸಿಕೊಂಡರೆ; ಹಾಗೆ ಅರಗಿಸಿ ಕೊಂಡು ತಾನು ಕಂಡ ಉಂಡ ಅನುಭವ ಅನಿಸಿಕೆ ಕಣಸು ಕಾಣಿಕೆಗಳನ್ನು ಅದರೊಂದಿಗೆ ಪುದುಗೊಳಿಸಿ, ಆ ಅನುಭವ ರಸಾಯನವನ್ನು ಒಪ್ಪವಾದ ಮಾತುಗಳಲ್ಲಿ ಅಷ್ಟಂತ ರೀತಿಯಲ್ಲಿ ಹೇಳುವ ಶಕ್ತಿಯುನ್ನು ಮೈಗೂಡಿಸಿ ಕೊಂಡಾಗ. ಇದಕ್ಕೇ 'ಚತುರ ರುಚಿರ ಪದ ರಚನಾಶಕ್ತಿ' ಎನ್ನುವುದು. ಪ್ರಾಚೀನ ಕೃತಿಗಳನ್ನು ಸತತವೂ ಅಭ್ಯಾಸ ಮಾಡುತ್ತಿರದಿದ್ದರೆ ಪದರಚನೆಯಲ್ಲಿ ಜಾಣ್ಮೆಯೂ ಕೃತಿಯಲ್ಲಿ ಬೆಡಗೂ ಮೈದೋರುವುದೆ ? ನೃಪತುಂಗನ ಈ ಮಾತುಗಳು ಸರ್ವಕಾಲಕ್ಕೂ ಮಾನ್ಯವಾದುವು; ಮಾರ್ಗದರ್ಶಕವಾಗಿರುವುವು. 'ಜಾಣ್ಮೆ' ಎಂದರೆ ಕಾವ್ಯ ರಚನಾಶಕ್ತಿ ಎಂದು ಒಟ್ಟಿನಲ್ಲಿ ಹೇಳಬಹುದು. ಅದರೆ ಇದೇ ಗ್ರಂಥದಲ್ಲಿ 'ತಂತಮ್ಮ ನುಡಿಯೊಳೆಲ್ಲರ್ ಜಾಣರ್'(I,೩೯)ಎಂಬಲ್ಲಿ ಮಾತು ಬಲ್ಲವರು ಎಂದು, ಅಷ್ಟೆ ಅರ್ಥ; 'ಜಾಣರ್ಕಳಲ್ಲದವರುಂ' (I-೪೦) ಎಂಬಲ್ಲಿ ಕವಿಗಳಲ್ಲದವರು; 'ಜಾಣರಿನೋದಿಸಿ ಪೇಳ್ವುದು ಕಬ್ಬಮುಂ' (I-೪೫), 'ಭಾವಿಸಲ್ ಬಗೆದವಂ ಮಿಗೆ ಜಾಣನ್ (III-೨೨೦) ಎಂಬಲ್ಲಿ ವಿದ್ವಾಂಸನಾದ ರಸಿಕ ಚಕ್ರಿ ಎಂದು. ಗುಣವರ್ಮನ 'ಜಾಣ್ನುಡಿ' ಯನ್ನು ಅನೇಕ ಅನೇಕ ಜೈನಕವಿಗಳು ಕೊಂಡಾಡಿರುವುದುಂಟು. ಆತನ ಮಾತು ತುಂಬ ಚೆಲುವು ಚಂದ ಉಳ್ಳುದಾಗಿದ್ದಿತೆಂದು ತೋರುವುದು.

ಕರ್ಣಾಟಕ ಕಾದಂಬರಿಯ ಕರ್ತೃವಾದ ಒಂದನೆಯ ನಾಗವರ್ಮ, ಮೂಲ ಕಾದಂಬರಿಯನ್ನು ರಚಿಸಿರುವ ಮಹಾಕವಿ ಬಾಣನನ್ನು ಹೊಗಳುತ್ತ ಅಜ್ಯೋದ್ಭವನಾದ ಬ್ರಹ್ಮನು ತಾನುವಾಗ್ದೇವಿಯನ್ನು ಪಡೆದಾಗಲೆ, ಆಕೆಗೆ ಮುಂದೆಬಾಣನೇ ವಲ್ಲಭನಾಗುವವನು ಎಂಬುದನ್ನು ಮುಂಗಂಡು 'ಜಾಣ್ಮೆ' ಯಿಂದೇ 'ಬಾಣಿ >ಬಾಣಿ)ಎಂದು ಹೆಸರಿಟ್ಟಿರುವಲ್ಲಿ ಅವನನ್ನಲ್ಲದೆ ಇತರ ಕವಿಗಳನ್ನು ಸ್ತುತಿಸುವ ಗೊಡವೆಯೇಕೆ? ಅವನೊಬ್ಬನೆ ವಂದ್ಯ. ಬೇರೆಯವರು ವಂದ್ಯರೆ ? ಎಂದು ಪ್ರಶ್ನಿಸುತ್ತಾನೆ. ಇಲ್ಲಿ ನಾವು ಗಮನಿಸಬೇಕಾದುದು 'ಜಾಣ್' ಎಂಬ ಶಬ್ದ ಅಷ್ಟೆ; ಅದರ ಅರ್ಥ, ಮುಂದಾಲೋಚನೆ, ಅಥವಾ ಬುದ್ಧಿವಂತಿಕೆ. ಇದೇ ಕವಿ 'ಛಂದೋಂಬುಧಿ' ಎಂಬ ಛಂದೋಗ್ರಂಥವನ್ನು 'ಜಾಣ್ ಮನಂಗೊಳಿಸೆ' ರಚಿಸಿರುವನೆಂಬುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಹರಿಹರ ದೇವನು ತನ್ನ ಗಿರಿಜಾ ಕಲ್ಯಾಣದಲ್ಲಿ 'ಜಾಣಂ ರಸಿಕಂ ಸುಜನಪ್ರಾಣಂ ....' ಎಂದು ಮುಂತಾಗಿ ತನ್ನನ್ನು ಹೊಗಳಿ ಕೊಂಡಿದ್ದಾನೆ. ಅವನ ಪ್ರಕಾರ ಜಾಣನೆಂದರೆ ಪ್ರತಿಭಾಶಾಲಿ. ಅದೇ ಕೃತಿಯಲ್ಲಿ ಗಿರಿರಾಜನ ಆಸ್ಥಾನವನ್ನು ವರ್ಣಿಸುವ "ವೀಣೆಯೊಳ್ ಜಾಣಂ ಮೆರೆವ" ಎಂಬ ಪ್ರಯೋಗವನ್ನೂ ಗಮನಿಸಬಹುದು.

ರಾಘವಾಂಕನು "ಗಾನವಿನೋದಿಯಿರ್ದೊಡೇಂ ಜಾಣರಿಲ್ಲದೊಡೆ"ಎಂದು ಚಿಂತಿಸಿದ್ದಾನೆ. ಕುಮಾರವ್ಯಾಸ 'ಇಳೆಯ ಜಾಣರು ಮೆಚ್ಚುವಂತಿರೆ ತಿಳಿಯ ಹೇಳುವೆ ಕೃಷ್ಣಕಥೆಯನು" ಎಂದು ಪ್ರತಿಜ್ಞೆ ಮಾಡಿದ್ದಾನೆ. ಲಕ್ಷ್ಮೀಶ 'ಜಾಣರಂ ತಲೆದೂಗಿಸದೆ ನುಡಿ ದೊಡಾಪದಕ್ಕೊಣೆಯಂ ಬಹುದು" ಎಂದು ಎಚ್ಚರಿಸಿದ್ದಾನೆ. ಇವರ ಪ್ರಕಾರ ಜಾಣರು ಎಂದರೆ ಯಾರು ? ಅಗ್ಗಣಿಯ ಕಿರುದೊಣೆಗಳಲ್ಲಿ ಕೈ ಹಾಕಿದ ಭಕ್ತರಿಗೆ ಅವರವರ ಭಾವಕ್ಕೆ ತಕ್ಕಂತೆ ನಿಂಬೆಯ ಹಣ್ಣೊ, ಕಳಿತ ಬಾಳೆಯ ಹಣ್ಣೊ ಕಸವೊ ಕಸವರವೋ ದೊರೆಯುವುವಂತೆ.

ಚಾಮರಸನು ತನ್ನ "ಪ್ರಭುಲಿಂಗಲೀಲೆ ಯಲ್ಲಿ ಬೆಳುವಲನಾಡಿನ ಭಕ್ತರನ್ನು ಪ್ರಶಂಸಿಸುವ ಸಂದರ್ಭದಲ್ಲಿ, 'ನುಡಿದು ಜಾಣರು ಸಕಲಶಬುದನ, ನಡೆದು ಜಾಣರು ನಿಖಿಳ ರೀತಿಯ ಕುಡಲಂ ಜಾಣರು ಕುಂದದಂತಿರಲರ್ಥಿಗರ್ಥವ" ಎಂದಿರುವನು. ಹಿಡಿತಕ್ಕೆ ಸಿಕ್ಕದ ನುಣುಚು ಮಾತುಗಳಿವು. ಪ್ರವಾಸಿಯು ಏನೆಲ್ಲ ಸಾಮಾನುಗಳನ್ನೂ ತುಂಬಿ ಕೊಳ್ಳುವ ಹಸುಬೆಯಂತೆ ಯಾವ ಅರ್ಥವನ್ನಾದರೂ ಒಳಕೊಳ್ಳಬಲ್ಲುದು ಈ ಮಾತು. ಅದು ಎಲ್ಲಿಂದ ಹೊರಟಿತೆಂಬುದು ಅಸ್ಪಷ್ಟ, ಎಲ್ಲಿಗೆ ಮುಟ್ಟುವುದೆಂಬೂ ಅಸ್ಪಷ್ಟ.

'ಶೃಂಗಾರ ಪ್ರಪಂಚ" ದಲ್ಲಿಯೂ ಈ ಮಾತು ನಡೆದಿರುವುದುಂಟು. 'ಗಿರಿಜಾ ಕಲ್ಯಾಣ'ದ ಗಿರಿರಾಜನ ಆಸ್ಥಾನದಲ್ಲಿ, 'ಸನ್ನೆಯರಿಯದ ಸರಸವರಿಯದ ಜಾಣರಿಯದ ಕೇಣವರಿಯದ' ಮುಗ್ಧಾಂಗನೆಯರಿದ್ದರೆಂದು ಹೇಳಿದೆ; ಮೇನಾದೇವಿ, ಪಾರ್ವತೀ ದೇವಿಯಿಂದ ವರ ಪಡೆದು ಬಂದ ಒಂದೆರಡು ದಿನಗಳಲ್ಲಿಯೇ 'ಅತ್ಯಾನಂದದೆ ಕಡುಜಾಣೆ ಮಾಣಿಕಂಗಂಡಿರ್ದಳ್" ಎಂಬ ಮಾತುಗಳಿವೆ. ಶಬ್ದಮಣಿದರ್ಪಣದಲ್ಲಿ (ಸೂ. ೭೯) "ನಾಣಂಪಿಂಗಿಸಿ ಮುಗ್ಧೆಗೆ ಜಾಣಂಕೆಯ್ಯೊಳಿಸಿ" — ಎಂಬ ಉಲ್ಲೇಖವಿದೆ. ಈ ಪ್ರಯೋಗಗಳನ್ನು ಗಮನಿಸಿದರೆ 'ಜಾಣ್," ಎಂಬುದಕ್ಕೆ ಅಂಗನೆಯು ಅಂಗ ಸುಖವನ್ನು ಪಡೆಯಲು ಅಣಿಯಾಗುವ ರೀತಿ ಎಂದು ಅರ್ಥೈಸಬೇಕಾಗುತ್ತದೆ.

"ರಾಮನಾಥ ಚರಿತೆ"ಯ ನಂಜುಂಡ ಕವಿ ಈ ತನಕ ಹೇಳಿದ ಅರ್ಥದಿಂದ ಭಿನ್ನವಾದ ಅರ್ಥದಲ್ಲಿ ಬಳಸಿರುವನು. ಮಲಮಗನನ್ನು ಮೋಹಿಸಿ, ತಾನು ಕೆಟ್ಟುದಲ್ಲದೆ ಏಳು ನೆಲೆಗಳನ್ನು ಕೆಡಿಸಿ ಕನ್ನಡ ರಾಜ್ಯವೊಂದರ ವಿನಾಶಕ್ಕೆ ಕಾರಣಳಾದವಳು ರತ್ನಾಜಿ. 'ರಾಮನಾಥಾ ಚರಿತೆ'ಯ ಪೂರ್ವಾರ್ಧ ಮುಖ್ಯವಾಗಿ ರತ್ನಾಜಿಯ ವೃತ್ತಾಂತವನ್ನೆ ಒಳಕೊಂಡಿದೆ. ಕವಿ ಆಕೆಯ ಅಂತರಂಗವ್ಯಾಪಾರವನ್ನು ಚಿತ್ರಿಸುತ್ತ,

ಮನವತ್ತ ಮಾತಿತ್ತ ನೆನಹತ್ತ ನೆವವಿತ್ತ
ವನುಭವವಿತ್ತಾಟವಿತ್ತ
ತನು ವಿತ್ತ ತವಕದೆಸವತ್ತಲಿರಲಾ

ವನಿತೆ ಜಾಣ್ಮೆಯೊಳಿರ್ದಳಲ್ಲಿ (ಸ. 25; ಪ. ೫.) ರತ್ನಾಜಿಯ ಜಾಣ್ಮೆ ಈಗಿನ ರಾಜಕಾರಣಿಗಳ ಜಾಣ್ಮೆಯನ್ನು ಮೀರಿಸುತ್ತದೆ. 'ಪಂಚಪಾಂಡವರು ಮಂಚದ ಕಾಲಿನ ಹಾಗೆ ಮೂರೇಜನ' ಎಂದು ಎರಡೇ ಬೆರಳನ್ನು ತೋರಿಸುವ ಜಾಣ್ಮೆ ಇದು. ವೈಸಿಕದ ಪರಮಸೀಮೆ; ಒಳಗೊಂದು ಬಣ್ಣ, ತೋರಿಕೆಗೆ ಇನ್ನೊಂದು ಬಣ್ಣ.

ನಾಡೋಜ ಸರ್ವಜ್ಞನು ಜಾಣತನದ ಎಲ್ಲ ತರಗಳನ್ನೂ ತೆರಗಳನ್ನೂ ಬಲ್ಲವನು ಅದಕ್ಕೆ ಕೆಲವು ನಿದರ್ಶನಗಳಿವು:

'ಮಾತಿನಲಿ ಸೋತವನೆ ಜಾಣ'
ಕಾಣಲೊಲ್ಲದೆ ತನ್ನ ಪ್ರಾಣವನು ನೆರೆ ನಂಬಿ
ಜಾಣತನವನು ತೋರಿದರೆ–ಗುರು ಮುಖವ
ಕಾಣದೇ ಹೋಹ-ಸರ್ವಜ್ಞ
'ಜಾಣನಾದವ ತಾನು ಪ್ರಾಣ ತಾನೊಂದೆಂದು
ಪ್ರಾಣಿ ಕೋಟಿಯನು ಬಗೆದರೆ ಮೋಕ್ಷ ತಾ
ಗೇಣಿಂದ ಕಿರಿದು—ಸರ್ವಜ್ಞ'
'ಸಿರಿಯು ಭರವುಳ್ಳಾಗ ಮೆರೆಯದಿರುವವ ಜಾಣ'
'ಕುರಿ ಕಬ್ಬಿನೊಳು ಹೊಕ್ಕು ಅರಿವುದೇ ತನಿರಸವ
ಹೊಣಗಣ ಸೋಗೆ ಅಗಿವಂತೆ ಜಾಣನಾ
ಕುರುಹು ಬೇರಿಹುದು—ಸರ್ವಜ್ಞ'
"ಜಾಣ ಸದ್ಗುರುವಿನುಪದೇಶದಿಂ ಮುಕ್ತಿ"

ಕವಿ ಆಯಾಕಡೆಗೆ ಆಯಾ ಎಡಗೆ ತಕ್ಕಂತೆ 'ಜಾಣ್'ಗೆ ಅರ್ಥವಿಟ್ಟಿರುವನು. ಸ್ವಾರ್ಥದ ಜೋಮ್ಮು ತಪ್ಪಿರುವ

ಜಾಣ್ಮ ಒಂದು ತುದಿಗೆ ಪರಮಾರ್ಥದ ಹೊತ್ತಿರುವುದು ಇನ್ನೊಂದು ತುದಿಯಲ್ಲಿ. ಇವೆರಡರ ನಡುವೆ ಇನ್ನೂ ಅನೇಕ ಪದರಗಳುಂಟು.

ಆದರೆ ಬಸವಣ್ಣನವರ 'ಮಾತೇ ಮಾತು' ಅವರು ಅನೇಕ ಕಡೆಗಳಲ್ಲಿ 'ಜಾಣ್' ಎಂಬ ಸಾಣ್ಯನನ್ನು ಸಮರ್ಥ ರೀತಿಯಲ್ಲಿ ಬೆಳೆಸಿರುವರು. ಇಲ್ಲಿ ಒಂದೆರಡು ನಿದರ್ಶಗಳನ್ನು ಮಾತ್ರ ಕೊಡಬಹುದು. "ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ ಹರದ ಕುಳ್ಳಿರ್ದ ನಮ್ಮ ಮಹದೇವ ಸೆಟ್ಟಿ. ಒಮ್ಮನವಾದಡೆ ಒಡನೆ ನುಡಿವನು; ಇಮ್ಮನವಾದಡೆ ನುಡಿಯನು. ಕಾಣಿಯ ಸೋಲ, ಅದ್ದ ಕಾಣಿಯ ಗೆಲ್ಲ! ಜಾಣ ನೋಡವ್ವ ನಮ್ಮ ಕೂಡಲಸಂಗಮದೇವ"

ಮೊದಲನೋಟಕ್ಕೆ ಈ "ಜಾಣ" ಎಂತಹದಡ್ಡ ಎಂದೆನಿಸುತ್ತದೆ. ಮಹಾದೇವ ಸೆಟ್ಟಿ ಎಂಬ ಬಣಜಿಗ ಈ ಭೂಮಿಯಮೇಲೆ ಒಂದು ದೊಡ್ಡ ಅಂಗಡಿಯನ್ನಿಟ್ಟಿರುವನಂತೆ. ಗ್ರಾಹಕರು ಒಂದು ಮಾನ ದಿನಸನ್ನು ಕೊಡು ಎಂದು ಕೇಳಿದರೆ ಒಡನೆ ಬಾಯಿ ಬಿಡುತ್ತಾನಂತೆ. ಒಂದು ಮಾನದ ಎರಡರಷ್ಟನ್ನು, ಎರಡು ಮಾನವನ್ನು ಬೇಡಿದರೆ ಬಾಯಿಬಿಡುವುದೇ ಇಲ್ಲ! ಇಷ್ಟೇ ಅಲ್ಲ. ಅರ್ಧ ಕಾಣಿ (ಕಾಸು)ಯ ಲಾಭಕ್ಕಾಗಿ ಒಂದು ಕಾಣಿ (ಕಾಸು)ಯನ್ನು ಬಿಟ್ಟು ಬಿಡುತ್ತಾನೆ. ಬಲು ಜಾಣನಾತ!

ಈ ವಿರೋಧಾಭಾಸದ ಚಿಪ್ಪನ್ನು ಒಡೆದರೆ ಒಳಗೆ ಸಿಕ್ಕುವುದು ರುಚಿಯಾದ ತಿಳಿಯಾದ ಎಳೆನೀರು, ಎಳೆ ಕೊಬ್ಬರಿ. ಮಹಾದೇವ ಸೆಟ್ಟಿ ಎಲ್ಲರಂತಹ ಸೆಟ್ಟಿಯಲ್ಲ ಭಕ್ತಿಯ ಬೆಳಸನ್ನು ಕೊಂಡಡುವವ, ಕೃಪೆಯ ಬೆಳಕನ್ನು ಕೊಡುವವನು. ಸಾಧಕನಲ್ಲಿ ಒಮ್ಮನ (ಒಂದು ಮನಸ್ಸು, ಚಿತ್ತೈಕಾಗ್ರತೆ, ದೃಢಮನಸ್ಸು) ಇದ್ದರೆ ಆ ಕೂಡಲೆ ನುಡಿಸುತ್ತಾನೆ. ಇಮ್ಮನ (ಎರಡಾದ ಮನಸ್ಸು, ಒಡೆದ ಮನಸ್ಸು, ಚಂಚಲತೆ)ದವನನ್ನು ಕಣ್ಣೆತ್ತಿಯೂ ನೋಡುವುದಿಲ್ಲ, ಮಾತಾಡಿಸುವುದಿರಲಿ. ಕಾಣಿ ಅದ್ದಗಾಣಿಗಳಲ್ಲಿಯೂ ಬಸವಣ್ಣನವರು ದ್ವಂದ್ವಾರ್ಥವನ್ನಿಟ್ಟಿರುವರು. ಕಾಣಿ, ಕಾಣಿಕೆ. ಈ ಎರಡು ಮಾತುಗಳ ತಾಯಿಬೇರು ಒಂದೆ. ಎಡೆ ಮಾಡುವುದು. ಕಾಣಿಕೆ ಕೊಡುವುದು, ಎಂದು ಮುಂತಾಗಿ ಈ ಮಾತಿನ ಮೂಲ ಅರ್ಥ. ಕನ್ನಡದ "ಕಾಣಿ"ಕೆ ಸಂಸ್ಕೃತದ 'ದರ್ಶನ' ಎಂಬುದಕ್ಕೆ ಪಡಿಮಾತು. ಪ್ರಸ್ತುತ ಸಂದರ್ಭದಲ್ಲಿ ಕಾಣಿ ಎಂಬುದಕ್ಕೆ ಸಂಪೂರ್ಣ ಸಮರ್ಪಣೆ. ದರ್ಶನ ಕೃಪೆ ಎಂದು ಅರ್ಥೈಸಬೇಕಾಗುತ್ತದೆ ಕಾಣಿಯ ಸೋಲ ಅದ ಗಾಣಿಯ ಗೆಲ್ಲ ಎಂದರೆ, ಮಹಾದೇವಸೆಟ್ಟಿ, ಅರ್ಧಂಬರ್ಧ ಸಮರ್ಪಣೆಯನ್ನು ಗೆಲ್ಲನು (ಸ್ವೀಕರಿಸುವುದಿಲ್ಲ). ದರ್ಶನ ಅಥವಾ ಕೃಪೆಯನ್ನು ಸೋಲುವುದಿಲ್ಲ (ಕರುಣಿಸುವುದಿಲ್ಲ). ಎಂಬ ಅರ್ಥ. ಹೀಗೆ ಅರ್ಥೈಸಿದಾಗ ಅಸಾಂಗತ್ಯದ ಸುಳಿವೇ ಇರವುದಿಲ್ಲ.

ಒಟ್ಟನಲ್ಲಿ, ಮಹಾದೇವ ಸೆಟ್ಟಿಯು ಭಕ್ತನೆನಿಸಿಕೊಂಡಿರುವವನು ಒಮ್ಮನದಿಂದ ನನ್ನನ್ನು ತಾನು ಸಂಪೂರ್ಣವಾಗಿ ಶಿವನಿಗೆ ಸಮರ್ಪಿಸಿದಾಗಲೆ ಶಿವನನ್ನು ಕಾಣ ಬಲ್ಲನು; ಶಿವಾನಂದವನ್ನು ಅನುಭವಿಸಿ ಬಲ್ಲನು ಎಂಬುದು ಈ ವಚನದ ನಿರ್ವಚನ. ಬಸವಣ್ಣನವರು ಲೌಕಿಕವಾದ ಜಾಣತನ ದಡ್ಡತನವೇ ಎಂದೂ ಜ್ಞಾನಪೂರ್ಣವಾದ ಜಾಣತನವೇ ನಿಜವಾದ ಜಾಣತನವೆಂದೂ ಹೇಳಿ ಆ ಮಾತನ್ನು ಅತ್ಯಂತ ಸಮರ್ಥ ರೀತಿಯಲ್ಲಿ ಪ್ರಯೋಗಿಸಿರುವರು. ಅವರ ಇನ್ನೊಂದು ವಚನವನ್ನು ನೋಡಿ

ಗೀತವ ಬಲ್ಲಾತ ಜಾಣನಲ್ಲ; ಮಾತ ಬಲ್ಲಾತ<br>ಜಾಣನಲ್ಲ;<br>ಜಾಣನು ಜಾಣನು,<br>ಆತ ಜಾಣನು ಲಿಂಗವ ನೆರೆ ನಂಬಿದಾತ;<br>ಆತ ಜಾಣನು ಜಂಗಮಕೆ ಸವೆಸುವಾತ;<br>ಆತ ಜಾಣನು ಜವನ ಬಾಯಲ್ಲಿ ಬಾಲವ<br>ಕೊಯ್ದು ಹೋದಾತ<br>ಆತ ಜಾಣನು ನಮ್ಮ ಕೂಡಲ ಸಂಗನ<br>ಶರಣನು.



ಸಂಗೀತವನ್ನು ಬಲ್ಲವನೂ ಜಾಣ, ಮಾತುಗಾರಿಕೆಯಲ್ಲಿ ಪಳಗಿದವನೂ ಜಾಣ ಆದರೆ ಅವರ ಜಾಣತನ ಉನ್ನತ ಮಟ್ಟದ್ದಲ್ಲ. ಲಿಂಗವನ್ನು ನೆರೆ ನಂಬಿದವನು ಜಂಗಮಕ್ಕೆ (ಎಂದರೆ ಸಕಲ ಜೀವಾತ್ಮರಿಗೆ) ಧನವನ್ನು ಸವೆಸುವವನು. ಅಂತಹ ಜಾಣನೇ ಕೂಡಲಸಂಗನ ಶರಣ. ಅವನು ಮಾತ್ರ ಯಮನ ಬಾಯನ್ನು ಹೊಲಿದು (ಹೆಣೆದು) ಅವನ ಬಾಲವನ್ನು ಕೊಯ್ದು ಹುಟ್ಟು ಸಾವುಗಳ ಸುಳಿಯಲ್ಲಿ ಸಿಲುಕದೆ ಮುಂದೆ, ಶಿವನಡಿಗೆ ಹೋದವನು. ಇಲ್ಲಿ ಬಸವಣ್ಣನವರು ಜಾಣ ಎಂಬ ಮಾತಿನ ಕೋಶದ ಹಲವು ಪದರುಗಳನ್ನು ಹದಿರು ಚದುರು ಚರ್ಯೆಗಳನ್ನು ಶಕ್ತಿಯುತವಾಗಿ ತೋರಿಸಿರುವರು.

ಹರಿಹರದೇವರು ಅವರ ವಚನಗಳನ್ನು ಬಸವನ ಮಾತೆಮಾತು ...... ಎಂಬ ಪದ್ಯದಲ್ಲಿ ಮನ ವಾರೆಕೊಂಡಾಡಿದ್ದಾರೆ. ನಿಜಗುಣ ಶಿವಯೋಗಿಗಳು "ಜಾಣ" ಎಂಬುದನ್ನು ಇನ್ನೂ ಉನ್ನತಾರ್ಥದಲ್ಲಿ ಬಳಸಿ ಅದಕ್ಕೆ ಹೊಚ್ಚ ಹೊಸ ಹೊಳಪನ್ನು ನೀಡಿರುವರು.

ಜಾಣನು ಲೌಕಿಕ ಪರಮಾರ್ಥವೆರಡನು<br>ಮಾಡದೆ ಕೂಡಿ ನಡೆಸುತಿಹನಿಂತು:<br>ತರುಣಿಯ ಸ್ತನವನುಣುತಲಣುಗನನ್ಯ<br>ಕರದೊಳುಳಿದ ಕುಚಾಗ್ರವ ನೋವುವಂತೆ

ಲಾಕಿಕ ಪಾರಮಾರ್ಥಿಕ-ಎರಡನ್ನೂ ಸಮನ್ವಯ ಗೊಳಿಸಿಕೊಂಡು ಬಾಳುವವನು ಜಾಣ ಎಂದು ನಿಜಗುಣರ ಉಪದೇಶ. ತರುಣಿಯ ಸ್ತನಗಳನ್ನು ಲೌಕಿಕ ಪಾರಮಾರ್ಥಿಗಕಗಳಿಗೂ ಜಾಣನನ್ನು ಮೊಲೆಯುಣ್ಣುತ್ತಿರುವ ಮಗುವಿಗೂ ಹೋಲಿಸಿದರುವುದು ಸಹಜವೂ ಸುಂದರವೂ ಸುಸಂಗತವೂ ಆಗಿರುವುದೆಂಬುದನ್ನು ಮಾತಿನಲ್ಲಿ ಹೇಳಿ ಮುಗಿಸುವುದಾಗದು. ಇದೇ ಕವಿಯು "ಜಾಣರ ದೇವ" ನನ್ನು ಪರಿಚಯ ಮಾಡಿಕೊಡುತ್ತ.

"ಅಗಣಿತ ಮಹಿಮೆಯ ನಗಲದ ವಿಭವನೆ-<br>ಜಾಣರ ದೇವ<br>ಪೊಗಸುವ ಸುಗುಣ ಸಂತತಿ ಗೂಡಿದ<br>ಭವನೆ. ಜಾಣರ ದೇವ || ಪ ||<br>ಪಿತ ಮಾತೆಯರೊಳೊಗೆಯದೆ ರೂಪುವೆತ್ತನೆ<br>ಜಾಣರ ದೇವ<br>ಮತಿಯ ಹಂಗಿಲ್ಲದೆಲ್ಲವ ನರಿವಾತನೆ-<br>ಜಾಣರ ದೇವ<br>ಗತಿಗೆಳಸದೆ ನಿತ್ಯ ಮುಕ್ತನೆನಿಸಿದನೆ-ಜಾಣರ ದೇವ<br>ಯತಿಗಳ ಲೋಚನಾಗ್ರದೊಳು ಸಂಚರಿಪನೆ-<br>ಜಾಣರ ದೇವ"

ಹೀಗೆಯೇ ಸಾಗುತ್ತದೆ ಅನುಭವ ಮಹಾಪೂರ. ಜಾಣರೆಂದರೆ ಭೋಗಯೋಗಗಳ ಸಮನ್ವಯ ಮಾಡಿಕೊಂಡು ನಡೆಯುತಕ್ಕವರು. ಅವರ ದೇವ ಸಾಕ್ಷಾತ್ ಪರಶಿವ. ಆವನ ಜಾಣ್ಮೆ ಇನ್ನೂ ಅತಿಶಯವೂ ಅವರ್ಣನೀಯವೂ ಆಗಿರ ಬೇಕಲ್ಲವೆ? ಕಾಮನನ್ನು ಸುಟ್ಟುರುಹಿದರೂ "ಕಾಮಿನಿಯೊಡವೆರೆದ"ವನು ಆತ; ಜೀವರಲ್ಲಿ ಎಡೆಬಿಡದೆ ಇದ್ದರೂ ಕಣ್ಣಿಗೆ ಕಾಣಿಸದವನು; 'ಗರಳವ ಸೇವಿಸಿ, ಮರಣವ ಗೆಲಿದವ' ಎಂದು ಮುಂತಾಗಿ ಆ ಜಾಣರ ದೇವನನ್ನು ಸ್ತುತಿಸಿದ್ದಾರೆ. ನಿಜಗುಣರ "ಜಾಣ" ನಲ್ಲಿ ಲೋಕ ವ್ಯವಹಾರ ಚಾತುರ್ಯವೂ ಶಿವಜ್ಞಾನ ಜ್ಯೋತಿಯೂ ಮಿಲನ ಗೊಂಡಿರಬೇಕೆಂಬುದು ನಿಜಗುಣರ ಅಭಿಪ್ರಾಯ.

ಕಿಟ್ಟೆಲ್ ಅವರ ಕನ್ನಡ ಇಂಗ್ಲಿಷ್ ಕೋಶದಲ್ಲಿ "ಜಾಣ್" ಎಂಬುದು "ಜ್ಞಾನಿ" ಯ ತದ್ಭವ ಎಂದು ಹೇಳಿದೆ. ಕೇವಲ ಶಬ್ದಾರ್ಥ ಸ್ವರೂಪ ಸಾಮ್ಯವನ್ನು ನೋಡಿ ಅವರು ಈ ತೀರ್ಮಾನಕ್ಕೆ ಬಂದಿರಬೇಕು. ಸಂಗಮ ಕಾಲದ ತಮಿಳು ಕವಿಗಳಿಗೆ ಸ್ಯಾಣರ್ (ಸ್ಯಾಣ್ರೋರ್) ಎಂದು ಕರೆಯುತ್ತಿದ್ದರಂತೆ. (Poets of the sangam age, learned and noble persons),

ಈಗಲೂ, ನಮ್ಮ ಒವಜರಾದ ನಾಡವರು ಹುಡುಗ ತುಂಬಾ "ಸ್ಯಾಣ್ಯಾ" ಅದನ್ರೀ ಎಂದೆನ್ನು

ವುದುಂಟು, ಪ್ರತಿಭಾಶಾಲಿಗಳಾದ ಮಕ್ಕಳ ಜಾಣತನವನ್ನು ಹೊಗಳುತ್ತ ಈ "ಸ್ಯಾಣ್ಯಾ" ಕಾಲಕ್ರಮದಲ್ಲಿ ಜಾಣ ಆಗಿರಬಹುದು ಅನಂತರ ಸಂಸ್ಕೃತ ಜ್ಞಾನಿ ಬಂದು ಈ ಸ್ಯಾಣನನ್ನು ಹಿಂದಕ್ಕೆ ಹಾಕಿರಬೇಕೆಂದು ತೋರುತ್ತದೆ.

ಹೀಗೆ ಜಾಣ ಎಂಬ ಮಾತು ಕಾಲ ದೇಶ ವ್ಯಕ್ತಿ ಸಂದರ್ಭಗಳಿಗೆ ತಕ್ಕಂತೆ ವಿವಿಧಾರ್ಥಗಳನ್ನು ಹೊತ್ತಿರುವುದು ಕಂಡು ಬರುತ್ತಿದೆ. ಈ ನಾಣ್ಯದ ಬೆಲೆ ಕೆಲವು ಸಲ ಇಳಿತಾಯವಾಗಿರಬಹುದು, ಒಂದೊಂದು ಸಲ ಗಗನಕ್ಕೂ ಏರಿರಬಹುದು. ಈ ಮಾತಿನ ಚರಿತ್ರೆಯಷ್ಟೆ ಬಹಳ ಮತ್ತಾವ ಕನ್ನಡ ಪದದ ಚರಿತ್ರೆಯೂ ಸ್ವಾರಸ್ಯವಾಗಿಲ್ಲವೆಂದು ನನ್ನ ಭಾವನೆ.

## ಜಗದ ತೊಟ್ಟಿಲು

ಸೆಳೆಮಿಂಚು ಎಂಕಂತೆ
ಕಣ್ಣಿಂಚ ಕಂಬನಿಯು
ಹೊಳೆಹೊಳೆದು ಬೆಳೆಬೆಳೆದು
ಹೊಳೆಯೊಗಿ ಹರಿದು
ಜಗದೆದೆಯ ಬಿರಿದು
ಸೇರುತಿದೆ ಕಡಲ ಒಡಲ
ತೊಯ್ಸಿ ತಾಯ ಮಡಿಲ

ಇಳೆಯು ತೊಟ್ಟಿಲ ಮಾಡಿ
ಮಳೆಯು ಹಗ್ಗವ ಹೂಡಿ
ಒಡಲ ಮಮತೆಯ ತೋಡಿ
ಸಿಡಿಲ ಜೋಗುಳ ಹಾಡಿ
ಮೊಗದಿ ಮಿಂಚಿನ ನಗೆಮೂಡಿ
ತಾಯಿ ತೂಗುತಿಹಳು ತೊಟ್ಟಿಲ
ಮಾಯೆ ನೂಕುತಿಹಳು ತೊಟ್ಟಿಲ
ಕೂಸ್ಯಕೆ, ಜಗದ ತೊಟ್ಟಿಲ

ತೂಗಿ ತೂಗುತ್ತ ಹಾಡಿ ಹಾಡುತ್ತ
ಬುವಿಗೆ ಬಾಗುತ್ತ ಮೊಗವ ನೋಡುತ್ತ
ತಾಯಿ ಸಂತೈಸು ತಿಹಳು
ನಲ್ಬುಟಿಯ ನೆಡಿಗೆ ಒತ್ತುತ್ತ
ಬೆಂಡೆದೆಗೆ ಸಾಂತ್ವನವ ನೀಯುತ್ತ

" ಇದೊ ಕಂದ ಕಂದಯ್ಯ
ಇನ್ನಿಹುದು ಒಂದಯ್ಯ
ಅಗೊ ಅಲ್ಲಿ ಕಾಣುತಿದೆ
ಆನಂದ ಲೋಕ
ಅದ ತುಡುಕುತಿಹ ನಿನಗೆ
ಇನ್ನೇಕೆ ಶೋಕ
ನಿನ್ನ ಶಕ್ತಿಗೆ ನಡುಗಿ
ಮೂಕವಾಗಿದೆ ಲೋಕ "

ಎಂದು
ಹಾಡಿ ಹಾಡುತ್ತ
ತಾಯಿ
ತೂಗುತಿಹಳು ತೊಟ್ಟಿಲು
ಮಾಯೆ
ನೂಕುತಿಹಳು ತೊಟ್ಟಿಲ
ಕೂಸ್ಯಕೆ
ಜಗದ ತೊಟ್ಟಿಲ
ಹೃದಯುದೋಂಕಾರಕೆ
ಜಗದ ತೊಟ್ಟಿಲ

—ಜ. ಹೊ. ನಾರಾಯಣಸ್ವಾಮಿ.

Reg. No. RN/171...